# ಹೊಸತು

ನೆನ್ನೆಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ಕಮಲಂ ಅರಸು, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ
ಮುಖಚಿತ್ರ : ಕೆ. ಪಿ. ಸ್ವಾಮಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ದೆಹಲಿಯ ಹಲವು ಭಾಗಗಳು ಬೆಂಗಳೂರಿನ ಪ್ರತಿಕೃತಿಗಳಾಗಿವೆ, ಆದರೆ ಮೆಟ್ರೊ ಕೆಲಸದಿಂದಲ್ಲ. ವಿಶ್ವದಲ್ಲಿ 'ಕಾಮನ್‌ವೆಲ್ತ್' ಎಂಬುದೊಂದಿದೆಯೆಂಬ ನೆನಪೇ ಉಳಿಯದಷ್ಟು ಶಕ್ತಿಹೀನವಾಗಿ ಅಪ್ರಸ್ತುತವಾಗಿರುವುದು ಈ ಸಂಸ್ಥೆ. ನೆಹರು ಹೇಳುತ್ತಿದ್ದಂತೆ 'ವೆಲ್ತ್' ವೊಂದನ್ನು ಬಿಟ್ಟು ಮಿಕ್ಕೆಲ್ಲಾ ಇಲ್ಲಿ 'ಕಾಮನ್'. ಬ್ರಿಟನ್ನಿನ ರಾಣಿಗೆ ಒಂದು ಹುದ್ದೆ ನೀಡಲೆಂದೇ ಇದನ್ನು ಸೃಷ್ಟಿಸಿದ್ದರೇನೊ ! ಮೊದಲಿಗೆ ವ್ಯಾಪಾರ ಸಂಬಂಧಗಳಲ್ಲಿ ಇದಕ್ಕೆ ಸ್ವಲ್ಪ ಸ್ಥಾನವಿತ್ತು, ಈಗ ಎಂಥದೂ ಇಲ್ಲ. ಆಗಾಗ್ಗೆ ನಡೆಯುವ 'ಗೇಮ್ಸ್' ಈ ಕೂಟದ ಇನ್ನೊಂದು ಜೀವಂತ ಭಾಗ. ಅದರಲ್ಲಿ ಅಗ್ರಮಾನ್ಯ ಕ್ರೀಡಾಪಟುಗಳು ಭಾಗವಹಿಸುವ ಪದ್ಧತಿ ಯಾವತ್ತೂ ಇಲ್ಲ. ಆಸ್ಟ್ರೇಲಿಯಾದ ಈಜುಗಾರರು, ಜಮೈಕಾದ ಓಟಗಾರರು, ಬ್ರಿಟನ್ನಿನ ಅಥಿಲೀಟ್‌ಗಳು, ಸಾಮಾನ್ಯವಾಗಿ ನಾಪತ್ತೆ. ಏನೋ ಒಂದು ಸಬೂಬು ಹೇಳುತ್ತಾರೆ. ಉಸೇನ್ ಬೋಲ್ಟ್‌ಗೆ ಬೆನ್ನುನೋವು, ಇತರರಿಗೆ ಜೀವ ಭಯ. ನಮ್ಮ ದೇಶದಲ್ಲಿ ಎಲ್ಲರೂ ಬಂದೂಕು ಹಿಡಿದೇ ಓಡಾಡುತ್ತಿದ್ದಾರೆಂದು ಅವರನ್ನು ನಂಬಿಸುವ ಮಾಧ್ಯಮಗಳು. ಮಣಿಶಂಕರ ಅಯ್ಯರ್ ಹೇಳಿದ್ದು ಕಟುವಾಸ್ತವ : ೩೫,೦೦೦ ಕೋಟಿ ರೂಪಾಯಿಗಳನ್ನು ಈ ಗೇಮ್ಸ್‌ಗಾಗಿ ಚೆಲ್ಲುವ ಮೂರ್ಖತನದ ಬದಲು ಅದೇ ಹಣವನ್ನು ಆಟೋಟಗಳಿಗೆ ಒಳ್ಳೆಯ ವ್ಯವಸ್ಥೆ ಕಲ್ಪಿಸಲು ಬಳಸಬಹುದಿತ್ತು. (ಆಗಲೂ ತಿಮಿಂಗಿಲಗಳು ನುಂಗುವುದನ್ನೇನೂ ಬಿಡುತ್ತಿರಲಿಲ್ಲ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಹಣವನ್ನೇ ನುಂಗುವ ಹೆಗ್ಗಣಗಳ ಸಂಸ್ಕೃತಿ ನಮ್ಮ ದೇಶದ ಮೇಲಿನ ಶಾಪವಾಗಿರುವಾಗ ಯಾವ ಹಣ ತಾನೆ ಸದುಪಯೋಗವಾದೀತು !) ದೆಹಲಿಯ ರಸ್ತೆಗಳ ಹಾಗೂ ಕಟ್ಟಡಗಳ ಸೌಂದರ್ಯವರ್ಧನೆಗೆ ಹಣ ಸುರಿಯುತ್ತಿದ್ದಾರೆ. ಅದನ್ನು ನೋಡಿದರೆ ಈ ದೇಶದಲ್ಲಿ ಬಡತನವಿದ್ದೀತೆ ಎಂಬ ಸಂಶಯ ಮೂಡುತ್ತದೆ. ರಾಜೀವ ಗಾಂಧಿ ಚೌಕವೆಂದು ಹೆಸರನ್ನುಳ್ಳ ಕನಾಟ್ ಪ್ಲೇಸ್‌ನಲ್ಲಿ ಖಾಸಗಿ ಕಟ್ಟಡಗಳಿಗೆ ಬಣ್ಣ ಬಳಿಯಲು ಸಾರ್ವಜನಿಕ ಹಣದ ಹೊಳೆ ಹರಿಯುತ್ತಿದೆ. ಆಟಗಾರರು ಯಾರೂ ಅದನ್ನು ನೋಡಲು ಹೊರಬರುವುದಿಲ್ಲ, ಏಕೆಂದರೆ ಅವರಿಗೆಲ್ಲಾ ಅಭದ್ರತೆಯ ಗುಮ್ಮ ಕಾಡುತ್ತಿದೆ. ಆಟ ಆಡಲು ಮತ್ತು ನೋಡಲು ಬರುವವರಿಗೋಸ್ಕರ ನಗರಕ್ಕೆಲ್ಲಾ ಸಿಂಗಾರವೆಂದರೆ ಏನರ್ಥ ? ಇನ್ನು ಆಟಗಳಿಗೆಂದು ನಿರ್ಮಿಸಲಾದ ಹೊಸ ಕಟ್ಟಡಗಳ ದುರಸ್ತಿ ಈಗಾಗಲೆ ಆರಂಭವಾಗಿದೆಯೆಂದರೆ ನಂಬಬೇಕೆ ? ಕಟ್ಟಿದ್ದು ನಿನ್ನೆ, ಆದರೆ ಇವತ್ತು ಆಗಲೆ ದುರಸ್ತಿ! ಇನ್ನೆಷ್ಟು ಹಣ ಪೋಲಾಗಿರಬೇಕು ! ಕಾಡಿನಲ್ಲಿರುವವರಿಗಾಗಿ ಹತ್ತು ರೂಪಾಯಿ ಖರ್ಚು ಮಾಡಲಾರೆವು, ಆದರೆ ಕಂಟ್ರಾಕ್ಟರುಗಳಿಗೆ ಕೋಟಿಗಟ್ಟಲೆ ದುರ್ದಾನ ನೀಡುತ್ತೇವೆ. ಆಟಗಾರರ ವ್ಯಾಯಾಮಕ್ಕೆಂದು ಟ್ರೆಡ್‌ಮಿಲ್‌ಗಳನ್ನು ಬಾಡಿಗೆಗೆ ಪಡೆಯುತ್ತಾರಂತೆ, ಅದೂ ಒಂದು ವಿದೇಶದಿಂದ. ನಾಲ್ಕು ದಿನದ ಬಾಡಿಗೆಯು ಟ್ರೆಡ್‌ಮಿಲ್‌ನ ಬೆಲೆಯಷ್ಟಾಗುತ್ತದೆಂದು ವರದಿಯಾಗಿದೆ. ಯಾವ ನೀಚರು ನಮ್ಮ ಯುವಕರ ಸಂಪತ್ತನ್ನು ಹೀಗೆ ದೋಚುತ್ತಿದ್ದಾರೆ ಎಂದು ಲೋಕಕ್ಕೆ ತಿಳಿದಿದೆ, ಆದರೆ ಯಾವ ದರೋಡೆಕೋರನ ಮೇಲೂ ಯಾವ ಕ್ರಮವೂ ಜರುಗುವುದಿಲ್ಲ. ನಮಗೆ ತಾಳ್ಮೆ, ಕಾನೂನು, ಶಾಂತಿಯುತ ಪ್ರತಿಭಟನೆಯ ಉದಾರ ನೀತಿಯನ್ನು ಬೋಧಿಸಿ ದೇಶಕ್ಕೆ, ದೇಶದ ಯುವಕರಿಗೆ, ದ್ರೋಹವೆಸಗುತ್ತಿರುವ ಪಿಶಾಚಿಗಳಿಗೆ ನಿಯಂತ್ರಣರಹಿತ ದೋಚುವಿಕೆಗೆ ಅವಕಾಶ ಮಾಡಿಕೊಟ್ಟಿರುವ ಕೇಂದ್ರ ಸರ್ಕಾರ, ಕ್ರೀಡಾ ಮಂಡಳಿಗಳು, ಇತ್ಯಾದಿಗಳಿಗೆ ಧಿಕ್ಕಾರ ಹೇಳಬೇಕು, ಅವರೆಲ್ಲಾ ಸೇರಿ ನುಂಗಿರುವ ಸಾರ್ವಜನಿಕ ಹಣವನ್ನು ಕಕ್ಕಿಸಬೇಕು. ಕ್ರೀಡಾಲೋಕದ ಕುಸ್ತಿಪಟುಗಳನ್ನು, ರೈಫಲ್ ಶೂಟಿಂಗ್ ಪಟುಗಳನ್ನು ಕರೆದು ಇವರನ್ನೆಲ್ಲಾ ಸರಿಯಾಗಿ ವಿಚಾರಿಸಿಕೊಳ್ಳಿ ಎಂದು ಮನವಿ ಸಲ್ಲಿಸುವುದೂ ಒಳ್ಳೆಯ ಕ್ರಮವೇ. ಇಷ್ಟು ದೊಡ್ಡ ಪ್ರಮಾಣದ ಲೂಟಿ ನಡೆದಿರುವಾಗ ಅಂಥದೇ ನ್ಯಾಯಾಲಯ ಬೇಕೇನೊ !

* * *

ಆಗಸ್ಟ್ ೪ ಮತ್ತು ೫ರಂದು ಹರ್ಯಾಣದಲ್ಲಿರುವ ಕುರುಕ್ಷೇತ್ರಕ್ಕೆ ಹೋದಾಗ ಅಲ್ಲಿಯ ಯುದ್ಧಭೂಮಿ ಎಲ್ಲೂ ಕಾಣಲಿಲ್ಲ. ಇಡೀ ದೇಶವೇ ಯುದ್ಧಭೂಮಿಯಾಗಿ ಮಾರ್ಪಟ್ಟಿದ್ದರೆ ಕುರುಕ್ಷೇತ್ರಕ್ಕಿನ್ನೇನು ಮಹತ್ವ ಉಳಿದೀತು ! ಕುರುಕ್ಷೇತ್ರವೇನೋ ಇದೆ,

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೨ ಸೆಪ್ಟೆಂಬರ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

**ಸಂಪಾದಕೀಯ**

# ಕಾಶ್ಮೀರ : ನಿರ್ಭಿಡೆಯಾದ ರಾಜಕೀಯ ಮುತ್ಸದ್ದಿತನ ಅಗತ್ಯ

**ಕ**ಳೆದೆರಡು ತಿಂಗಳಿಂದ ಕಾಶ್ಮೀರದಲ್ಲಿ ಭುಗಿಲೆದ್ದಿರುವ ಪ್ರತಿಭಟನಾ ಪ್ರದರ್ಶನಗಳು, ಕಲ್ಲು ತೂರಾಟ, ಪೊಲೀಸರಿಂದ ಲಾಠಿ ಪ್ರಯೋಗ, ಗೋಲಿಬಾರು, ಸಂಭವಿಸಿರುವ ಸಾವುನೋವುಗಳು – ಈವರೆಗೆ ಸತ್ತವರ ಸಂಖ್ಯೆ ೬೫, ಗಾಯಾಳುಗಳು ನೂರಾರು ಮಂದಿ – ಆತಂಕಕಾರಿ. ಸತ್ತವರೆಲ್ಲ ಹೆಚ್ಚಾಗಿ ಯುವಕರು, ವಿದ್ಯಾರ್ಥಿಗಳು, ಪ್ರತಿಭಟನೆಯಲ್ಲಿ ಪಾಲ್ಗೊಂಡಿರುವವರೂ ಅವರೆ. ಪೊಲೀಸರ ಗುಂಡಿಗೆ ಬಲಿಯಾದ ಅಮಾಯಕ ಯುವಜನರಿಗೆ ಅವರ ಕುಟುಂಬದವರಿಗೆ 'ಹೊಸತು' ಸಂತಾಪ ವ್ಯಕ್ತಪಡಿಸುತ್ತದೆ. ಆಗಾಗ್ಗೆ ವಿಧಿಸುತ್ತಿರುವ ಕರ್ಫ್ಯೂ ಆಜ್ಞೆ ಸಾಮಾನ್ಯಜನರ ಜೀವನವನ್ನು ಅಸ್ತವ್ಯಸ್ತಗೊಳಿಸಿದೆ. ಪರಿಸ್ಥಿತಿ ಹದಗೆಟ್ಟಿದೆ. ಶಾಂತಿ, ಸುವ್ಯವಸ್ಥೆ ಸ್ಥಾಪಿಸಲು ಸರಕಾರ ನಡೆಸಿರುವ ಪ್ರಯತ್ನಗಳು ಫಲಕಾರಿಯಾಗಿಲ್ಲ, ಕಾಶ್ಮೀರದಲ್ಲಿ ಇಂಥ ಘಟನೆಗಳು ಅಪರೂಪವೇನಲ್ಲ, ಪದೇಪದೇ ಮರುಕಳಿಸುತ್ತಿರುತ್ತವೆ. ಆದರೆ ಈಗ ನಡೆಯುತ್ತಿರುವ ವಿದ್ಯಮಾನಗಳು ಅತ್ಯಂತ ಗಂಭೀರವಾದುದಾಗಿವೆ. ಇದನ್ನು ಗಡಿಯಾಚೆಯ ಕೈವಾಡ, ಪ್ರತ್ಯೇಕವಾದಿಗಳು, ಉಗ್ರಗಾಮಿಗಳ ಪ್ರಚೋದನೆ ಎಂದು ತಳ್ಳಿಹಾಕುವುದು ಮೂರ್ಖತನವಾಗುತ್ತದೆ. ಕೇಂದ್ರ ಹಾಗೂ ರಾಜ್ಯ ಸರಕಾರದ ನೀತಿಗಳ ವೈಫಲ್ಯವೇ ಇದಕ್ಕೆ ಕಾರಣ.

ಕಾಶ್ಮೀರದ ಸಮಸ್ಯೆ ಆರು ದಶಕಗಳಿಗಿಂತ ಹೆಚ್ಚು ಕಾಲದಿಂದಲೂ, ಸ್ವತಂತ್ರ ಭಾರತ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಇದ್ದದ್ದೆ. ಸೂಕ್ತ ಪರಿಹಾರ ಕಾಣದೆ ಅಂಟಿಕೊಂಡಿದೆ. ಸಂಬಂಧಪಟ್ಟ ಎರಡೂ ದೇಶಗಳಾದ ಭಾರತ-ಪಾಕಿಸ್ತಾನಗಳಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆ, ದೃಢವಾದ ತೀರ್ಮಾನ ತೆಗೆದುಕೊಳ್ಳಲು ಹಿಂಜರಿಕೆ ಇವು ಮುಖ್ಯ ಕಾರಣ. ಹಾಗಾಗಿ ಅದು ಕಗ್ಗಂಟಾಗಿಯೇ ಉಳಿದುಕೊಂಡಿದೆ. ಇದರಿಂದ ಕಾಶ್ಮೀರದ ಜನತೆ ಗಡಿಯಾಚೆಯ ಭಯೋತ್ಪಾದನೆಗಳಿಗೆ ಆಗಾಗ್ಗೆ ಬಲಿಯಾಗುತ್ತಿದ್ದಾರೆ. ಇನ್ನೊಂದು ಮುಖ್ಯ ಕಾರಣ, ಕಾಶ್ಮೀರದ ಜನತೆಯ ಆಶೋತ್ತರಗಳಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಸೂಕ್ತವಾಗಿ ಸ್ಪಂದಿಸದೇ ಇರುವುದು. ಅಧಿಕಾರ ವಹಿಸಿಕೊಂಡ ಸರಕಾರಗಳು ಜನತೆಗೆ ನೀಡಿದ ಆಶ್ವಾಸನೆಗಳನ್ನು ಈಡೇರಿಸದೆ ಇರುವುದು. ಇದು ನಿರಂತರವಾಗಿ ನಡೆದುಕೊಂಡು ಬಂದು ಜನರಿಗೆ ಭ್ರಮನಿರಸನವಾಗಿದೆ ಎನ್ನುವುದನ್ನು ಒಪ್ಪಲೇಬೇಕು. ಅಧಿಕಾರದಲ್ಲಿ ಇರುವವರು ಈಗಲಾದರೂ ಇತ್ತ ಗಮನಹರಿಸಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳದೇ ಹೋದರೆ ಪರಿಸ್ಥಿತಿ ಕೈಮೀರಿಹೋದೀತು.

ಭಾರತಕ್ಕೆ ಕಾಶ್ಮೀರದ ಸೇರ್ಪಡೆಯಾದದ್ದೆ ವಿಶೇಷ ಸನ್ನಿವೇಶದಲ್ಲಿ, ವಿಶಿಷ್ಟವಾದ ರೀತಿಯಲ್ಲಿ ಎನ್ನುವುದನ್ನು ಮರೆಯುವಂತಿಲ್ಲ. ಉತ್ತರದ ಗಡಿಯಲ್ಲಿರುವ ಈ ಸುಂದರ ಪ್ರದೇಶ ತನ್ನದೇ ಆದ ವೈಶಿಷ್ಟ್ಯ ಹೊಂದಿದ್ದು, ಬಹುಸಂಖ್ಯಾತರು ಇಸ್ಲಾಮ್ ಧರ್ಮೀಯರಾಗಿದ್ದರೂ, ಎಲ್ಲ ಧರ್ಮೀಯರೂ ಸಹಬಾಳ್ವೆ ನಡೆಸುತ್ತಿದ್ದರು. ಹಿಂದೂ ರಾಜನ ಆಡಳಿತೆಯಲ್ಲಿ, ಭಾರತ ಸಂವಿಧಾನದ ೩೭೦ನೇ ವಿಧಿಯ ಷರತ್ತಿನೊಡನೆ ಅದು ಭಾರತಕ್ಕೆ ಸೇರ್ಪಡೆಯಾಯಿತು. ಇತರ ರಾಜ್ಯಗಳಂತೆ ಭಾರತದೊಂದಿಗೆ ಐಕ್ಯವಾಗಲಿಲ್ಲ. ರಾಜ್ಯ ರಕ್ಷಣೆ, ಹಣ ಚಲಾವಣೆ, ವಿದೇಶಿ ವ್ಯವಹಾರ, ಸಂಪರ್ಕ ಸಾಧನೆಗಳನ್ನು ಭಾರತ ಸರಕಾರ ವಹಿಸಿಕೊಂಡಿತು. ಉಳಿದದ್ದೆಲ್ಲ ರಾಜ್ಯ ಸರಕಾರಕ್ಕೆ ಬಿಟ್ಟದ್ದು, ಅದು ತನ್ನದೇ ಆದ ಸಂವಿಧಾನ, ಧ್ವಜ, ಶಾಸನಸಭೆ ಮತ್ತು ಪ್ರಧಾನಮಂತ್ರಿಯನ್ನು ಹೊಂದಿರಬಹುದೆಂಬುದು ೩೭೦ನೇ ವಿಧಿಯ ಸಾರಾಂಶ. ಪ್ರಾರಂಭದಲ್ಲಿ ಹಾಗೆಯೇ ಇತ್ತು ಕೂಡ. ಭಾರತದ ಇತರ ರಾಜ್ಯಗಳೂ ಇದೇ ಬಗೆಯ ಸ್ವಾಯತ್ತತೆಯನ್ನು ಬಯಸಿಯಾವು ಎಂಬ ಭೀತಿಯಿಂದ ಕ್ರಮೇಣ ಕಾಶ್ಮೀರದ ವಿಶೇಷಸ್ಥಾನ ಅದೃಶ್ಯವಾಯಿತು. ೩೭೦ನೇ ವಿಧಿ ಇದ್ದರೂ ಅದು ಪೂರ್ಣವಾಗಿ ಜಾರಿಗೆ ಬರಲಿಲ್ಲ. ಹಿಂದುತ್ವವಾದಿಗಳು ಕಾಶ್ಮೀರ ಭಾರತದಲ್ಲಿ ವಿಲೀನವಾಗಬೇಕು, ೩೭೦ನೇ ವಿಧಿ ರದ್ದಾಗಬೇಕು ಎಂದು ಕೂಗೆಬ್ಬಿಸಿದ ಮೇಲೆ, ಕಾಂಗ್ರೆಸ್ಸಿನ ಒಂದು ವಿಭಾಗ ಇದಕ್ಕೆ ಒತ್ತಾಸೆ ನೀಡಿದಾಗ ಪರಿಸ್ಥಿತಿ ಬದಲಾಯಿತು. ಕಾಶ್ಮೀರದಲ್ಲಿ ಪ್ರತ್ಯೇಕತಾವಾದಿಗಳ ಚಳವಳಿಯು ಬೆಳೆಯುವುದಕ್ಕೆ ಅವಕಾಶವಾಯಿತು. ಕಾಶ್ಮೀರದ ಮೊದಲ ಪ್ರಧಾನಿಯಾಗಿದ್ದ, ಭಾರತಕ್ಕೆ ಕಾಶ್ಮೀರದ ಸೇರ್ಪಡೆಯ ರೂವಾರಿಯಾಗಿದ್ದ ನಾಯಕ ಷೇಕ್ ಅಬ್ದುಲ್ಲಾ ಇವರ ದೀರ್ಘಕಾಲದ ಬಂಧನ, ಬಿಡುಗಡೆ, ನ್ಯಾಷನಲ್ ಕಾನ್ಫರೆನ್ಸ್‌ನ ಅಭ್ಯುದಯ, ಹುರಿಯತ್ ಕಾನ್ಫರೆನ್ಸ್ ಅಸ್ತಿತ್ವಕ್ಕೆ ಬಂದದ್ದು, ಪ್ರತ್ಯೇಕವಾದಿಗಳು ನೆಲೆ ಕಂಡದ್ದು ಎಲ್ಲ ಈಗ ಇತಿಹಾಸ.

ಇಂದು ಸಂಭವಿಸುತ್ತಿರುವ ಘಟನೆಗಳನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸಬೇಕು. ಏಕೆಂದರೆ ಇದು ಈಡೇರಿಸದ ಎಲ್ಲ ಭರವಸೆಗಳ ವಿರುದ್ಧ ಪ್ರತಿಭಟನೆಯ ಪರಾಕಾಷ್ಠೆಯಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಜನತೆಯ ಆಶೋತ್ತರಗಳಿಗೆ ಸಮರ್ಪಕವಾಗಿ ಸ್ಪಂದಿಸದೆ, ತಾತ್ಕಾಲಿಕ ಪರಿಹಾರಗಳ ಮೊರೆಹೊಕ್ಕು ರಾಜಕೀಯ ಲಾಭ ಪಡೆಯುವುದಕ್ಕೆ ನಡೆಸಿದ ಹುನ್ನಾರವೆ ಪರಿಸ್ಥಿತಿ ಹದಗೆಡಲು ಮೂಲ. ಕಾಶ್ಮೀರದ ಕತೆ ಈಡೇರದ ಭರವಸೆಗಳ, ಕಳೆದುಕೊಂಡ ಅವಕಾಶಗಳ ಸರಮಾಲೆಯಾಗಿದೆ. ಈಗಿನ ಘಟನೆಗಳ ಹಿನ್ನೆಲೆಯಲ್ಲಿ ಯುಪಿಎ ಪ್ರಧಾನಿ ಮನಮೋಹನ ಸಿಂಗ್ ಸರ್ವಪಕ್ಷಗಳ ಸಭೆಯಲ್ಲಿ ಕಾಶ್ಮೀರಕ್ಕೆ ಸ್ವಾಯತ್ತತೆ ನೀಡುವುದರ ಪ್ರಸ್ತಾಪ ಮಾಡಿದ್ದಾರೆ. ಉದ್ಭವಿಸಿರುವ ಸಮಸ್ಯೆಗೆ ರಾಜಕೀಯ ಪರಿಹಾರ ಕಾಣಬೇಕು ಎಂಬುದಾಗಿ ಸಂಬಂಧಪಟ್ಟವರೆಲ್ಲ ಹೇಳುತ್ತಿದ್ದಾರೆ. ಆದರೆ ಯಾರು ಮೊದಲ ಹೆಜ್ಜೆ ಇರಿಸಬೇಕು ? ಬೆಕ್ಕಿನ ಕತ್ತಿಗೆ ಗಂಟೆಕಟ್ಟುವ ಕತೆಯಾಗಿದೆ ಇದು. ಕೆಲ ವರ್ಷಗಳ ಹಿಂದೆ ಕಾಶ್ಮೀರ ವಿಧಾನಸಭೆ ರಾಜ್ಯದ ಸ್ವಾಯತ್ತತೆ ಕುರಿತು ನಿರ್ಣಯವೊಂದನ್ನು ಅಂಗೀಕರಿಸಿತ್ತು. ಕೇಂದ್ರ ಸರಕಾರ ಆಗ ಸೂಕ್ತ ಕ್ರಮ ತೆಗೆದುಕೊಳ್ಳಲು ಅವಕಾಶವಿತ್ತು. ಆದರೆ ಮತಗಟ್ಟೆ ರಾಜಕಾರಣದ ಲೆಖ್ಖಾಚಾರದಿಂದಾಗಿ ಎಲ್ಲವೂ ತಲೆಕೆಳಗಾದುವು. ಇವತ್ತು ಕಾಶ್ಮೀರದಲ್ಲಿ ಸಹಜಸ್ಥಿತಿ ಉಂಟುಮಾಡಲು ಸಂಕುಚಿತ ಮತಗಟ್ಟೆ ರಾಜಕೀಯಕ್ಕೆ ಮಾರುಹೋಗದೆ ಉನ್ನತ ಮಟ್ಟದ ರಾಜಕೀಯ ಮುತ್ಸದ್ದಿತನ ಪ್ರದರ್ಶಿಸುವ ಅಗತ್ಯವಿದೆ. ಕಾಶ್ಮೀರಕ್ಕೆ ಸ್ವಾಯತ್ತತೆಯನ್ನು ಗಂಭೀರವಾಗಿ ಪರಿಶೀಲಿಸುವುದರ ಜೊತೆಗೆ, ಇತರ ಬೇಡಿಕೆಗಳನ್ನೂ ಈಡೇರಿಸುವತ್ತ, ಮುಖ್ಯವಾಗಿ ಪೊಲೀಸ್ ಪಡೆಯ ದೌರ್ಜನ್ಯಗಳ ಬಗ್ಗೆ ಜನರ ಅಹವಾಲುಗಳನ್ನು ಪರಿಗಣಿಸುವ ಬಗ್ಗೆ ಕ್ರಮ ಕೈಗೊಳ್ಳಬೇಕು. ಪ್ರಜಾಪ್ರಭುತ್ವ ಶಕ್ತಿಗಳು ಅಂಥ ಪ್ರಯತ್ನಕ್ಕೆ ಒತ್ತಾಸೆ ನೀಡುತ್ತವೆ.

# ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ನೆಲೆ ನೀಡಬೇಕೆ ?

**ಇಂ**ದಿನ ಜಾಗತೀಕರಣದ ಯುಗದಲ್ಲಿ ಚಾಲ್ತಿಯಲ್ಲಿರುವ ಮಾರುಕಟ್ಟೆ ಶಕ್ತಿಗಳು ಒಂದು ಅಂಶವನ್ನಂತೂ ದೃಢಪಡಿಸಿವೆ. ಅದೆಂದರೆ, ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾವಂತರು ಮತ್ತು ಪರಿಣತ ನೌಕರರಿಲ್ಲದೆ ದೇಶೀಯ ಮಾರುಕಟ್ಟೆಯನ್ನು ವಿಸ್ತರಿಸುವುದಾಗಲಿ, ಸಮಗ್ರ ದೇಶೀಯ ಉತ್ಪಾದನೆಯ ವೇಗವನ್ನು ಸತತವಾಗಿ ಮುಂದುವರಿಸಿಕೊಂಡು ಹೋಗುವುದಾಗಲಿ ಸಾಧ್ಯವಿಲ್ಲ. ಆದಾಗ್ಯೂ ಉನ್ನತ ಶಿಕ್ಷಣದ ಗುಣಮಟ್ಟವು ಮೂಲತಃ ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನೇ ಹೆಚ್ಚು ಅವಲಂಬಿಸಿರುತ್ತದೆ. ಎಂದೇ ಸಮರ್ಥ ಶಾಲಾ ಶಿಕ್ಷಣ ವ್ಯವಸ್ಥೆಯು ಉನ್ನತ ಶಿಕ್ಷಣ ಸಂಸ್ಥೆಗಳು ಗಳಿಸುವ ಸಾಧನೆಗಳಿಗೆ ಅತ್ಯವಶ್ಯಕ ಎಂಬುದನ್ನು ಅಲ್ಲಗಳೆಯಲಾಗದು.

ಅಸಮಾನತೆಯು ತಾಂಡವವಾಡುತ್ತಿರುವ, ಶೇಕಡ ೭೦ರಷ್ಟು ಜನರು ಒಂದು ಹೊತ್ತಿನ ಊಟಕ್ಕೂ ಪರದಾಡುತ್ತಿರುವ ನಮ್ಮೀ ಸಮಾಜದಲ್ಲಿ ಶಿಕ್ಷಣದ ಹಕ್ಕನ್ನು ಜಾರಿಗೆ ತಂದ ಮಾತ್ರಕ್ಕೆ ಇಂದಿನ ಶೈಕ್ಷಣಿಕ ಕ್ಷೇತ್ರದ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿಲ್ಲ. ಶಿಕ್ಷಣದ ಹಕ್ಕಿನ ಜೊತೆಜೊತೆಗೆ ಆಹಾರದ ಹಕ್ಕು ಮತ್ತು ಉದ್ಯೋಗದ ಹಕ್ಕು ಜಾರಿಗೊಂಡಾಗ ಮಾತ್ರ ನಿರೀಕ್ಷಿತ ಗುರಿಯತ್ತ ಸಾಗಬಹುದಾಗಿದೆ.

ಉನ್ನತ ಮಟ್ಟದ ಶಿಕ್ಷಣ ನೀಡುವ ಮತ್ತು ಸಮರ್ಥ ನಿರ್ವಹಣೆ, ಉತ್ತರದಾಯಿತ್ವ ಮತ್ತು ಪಾರದರ್ಶಕತೆಗಳನ್ನು ಜಾರಿಗೆ ತರುವ ಉದ್ದೇಶದಿಂದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಮೇ ೨೦೧೦ರಲ್ಲಿ ನಾಲ್ಕು ಮಸೂದೆಗಳನ್ನು ಲೋಕಸಭೆಯಲ್ಲಿ ಮಂಡಿಸಿತು. ಅವುಗಳಲ್ಲಿ ಹೆಚ್ಚಿನ ಗಮನ ಸೆಳೆದದ್ದು, ವಿಸ್ತೃತ ಚರ್ಚೆಗೆ ಒಳಗಾದದ್ದು, ವಿದೇಶಿ ಶಿಕ್ಷಣ ಸಂಸ್ಥೆಗಳ ಕುರಿತ ಮಸೂದೆ. ನಮ್ಮದೇ ದೇಶೀಯ ಸಾಮಾಜಿಕ ಬಂಡವಾಳವನ್ನು ಹೆಚ್ಚಿಸುವ ಮಹತ್ಕಾರ್ಯದಲ್ಲಿ ಶಿಕ್ಷಣ ಕ್ಷೇತ್ರದ ಗುಣಮಟ್ಟವು ಅತ್ಯಂತ ಪ್ರಮುಖವಾದುದು ಎಂದು ಮನಗಾಣಲು ನಮ್ಮ ಆಡಳಿತ ವರ್ಗಕ್ಕೆ ನಾಲ್ಕು ದಶಕಗಳು ಬೇಕಾಯಿತು. ಶಿಕ್ಷಣ ಕ್ಷೇತ್ರದ ವಿವಿಧ ಸಮಸ್ಯೆಗಳ ಕುರಿತು ೧೯೬೬ರಷ್ಟು ಹಿಂದೆಯೇ ಕೊಠಾರಿ ಆಯೋಗ ಸವಿವರವಾಗಿ ದಾಖಲಿಸಿದೆ. ಈ ಆಯೋಗದ ಶಿಪಾರಸ್ಸುಗಳನ್ನು ಸಂಬಂಧಪಟ್ಟವರಾರೂ ಗಂಭೀರವಾಗಿ ಪರಿಗಣಿಸಲೇ ಇಲ್ಲ. ಬದಲಾಗಿ, ಅವನ್ನು ವಿರೋಧಿಸುವಂತಹ ಕ್ರಮಗಳನ್ನು ಯಥೇಚ್ಛವಾಗಿ ಜಾರಿಗೊಳಿಸಿದ್ದಾರೆ. ಪರಿಣಾಮವಾಗಿ ಶಿಕ್ಷಣ ಕ್ಷೇತ್ರವು ಕ್ಷೀಣಿಸುತ್ತಲೇ ಸಾಗಿತು. ಜಾಗತಿಕ ಮಾರುಕಟ್ಟೆಯಲ್ಲಿ ಪೈಪೋಟಿಗಿಳಿಯಲು ಶಿಕ್ಷಣದ ಗುಣಮಟ್ಟವನ್ನು ಉತ್ತಮಗೊಳಿಸಬೇಕೆಂಬ ಮಾತಿರಲಿ, ಕನಿಷ್ಠ ಸಾರ್ವತ್ರಿಕ ಸಾಕ್ಷರತೆಯನ್ನೂ ಸಾಧಿಸಲಾಗಿಲ್ಲ ಎಂಬ ವಾಸ್ತವಾಂಶದ ಬಗೆಗೆ ಒಂದೆರಡು ದಶಕಗಳ ಹಿಂದೆ ದಿಢೀರನೆ ಅರಿವು ಉಂಟಾದುದು ಹಾಸ್ಯಾಸ್ಪದವೆನಿಸಿದರೂ, ಅದೊಂದು ಗಮನಾರ್ಹ ಬೆಳವಣಿಗೆಯೆ.

ತನ್ನೆಲ್ಲ ವೈಫಲ್ಯಗಳಿಗೆ ಮಾರುಕಟ್ಟೆ ಎಂಬುದು ಮಾತ್ರ ಪರಿಹಾರ ನೀಡಲು ಸಾಧ್ಯ ಎಂಬ ಅರ್ಥಹೀನ, ಜನವಿರೋಧಿ ಅಭಿಪ್ರಾಯ ಸದ್ಯದ ಕೇಂದ್ರ ಸರ್ಕಾರಕ್ಕೆ ಇದೆ. ಪರಿಣಾಮವಾಗಿ ಖಾಸಗಿ ವಿಶ್ವವಿದ್ಯಾನಿಲಯಗಳು, ಯಾವುದಕ್ಕೂ ಪ್ರಯೋಜನವಾಗದ, ತೋರಿಕೆಗೆ ಮಾತ್ರ ವೃತ್ತಿಪರರು ಎಂದು ಬಿಂಬಿಸಿಕೊಳ್ಳುವ ಪಂಡಿತ ಶಿಖಾಮಣಿಗಳನ್ನು ತಯಾರು ಮಾಡುವ ವೃತ್ತಿಪರ ಸಂಸ್ಥೆಗಳು ನಾಯಿಕೊಡೆಗಳಂತೆ ತಲೆ ಎತ್ತುತ್ತಿವೆ. ಈ ಪ್ರಕ್ರಿಯೆ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಬಿಕ್ಕಟ್ಟುಗಳು ಹುಟ್ಟಿಕೊಳ್ಳಲು ಕಾರಣವಾಗುತ್ತಿದೆ. ಸಮಸ್ಯೆಯನ್ನು ಬಗೆಹರಿಸಲು ಕೇಂದ್ರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರು ದೌಡಾಯಿಸಿದ್ದು ಮಾತ್ರವಲ್ಲ, ೨೦೨೦ರ ಹೊತ್ತಿಗೆ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಶೇಕಡ ೩೦ರಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ದಾಖಲಾಗಬೇಕೆಂಬ ದೃಷ್ಟಿಯಲ್ಲಿ ಭಾರತ-ಅಮೆರಿಕಾ ಜಂಟೀ ಸಮಿತಿಯೊಂದನ್ನು ರಚಿಸಹೊರಟಿರುವುದು ಆತಂಕದ ಸಂಗತಿ. ಶಿಕ್ಷಣ ಸಚಿವರ ಬೇಜವಾಬ್ದಾರಿ ನೀತಿಗಳಿಗೆ ಇದೊಂದು ಉದಾಹರಣೆ, ಅಷ್ಟೆ.

೭೦೦ ಹೊಸ ವಿಶ್ವವಿದ್ಯಾನಿಲಯಗಳು, ೩೫,೦೦೦ ಹೊಸ ಕಾಲೇಜುಗಳೇ ಅಲ್ಲದೆ, ಹೊಸ ತಾಂತ್ರಿಕ ಸಂಸ್ಥೆಗಳು ಮತ್ತು ಉನ್ನತ ಮಟ್ಟದ ಮ್ಯಾನೇಜ್‌ಮೆಂಟ್ ಸಂಸ್ಥೆಗಳನ್ನು ತೆರೆಯುವ ದಿಶೆಯಲ್ಲಿ ಭಾರತ ಸರ್ಕಾರ ಆಲೋಚಿಸುತ್ತಿದೆಯೆಂದು ಹೇಳಲಾಗುತ್ತಿದೆ. ಈ ಸಂಸ್ಥೆಗಳಿಗೆ ಸಮರ್ಥ ಶಿಕ್ಷಕರನ್ನು ತರುವುದಾದರೂ ಎಲ್ಲಿಂದ ಎಂಬುದರ ಬಗ್ಗೆ ಯಾರೂ ಗಮನ ಹರಿಸುತ್ತಿಲ್ಲ.

ಇದುವರೆಗೆ ಅಮೆರಿಕಾದಲ್ಲೇ ಅವಕೃಪೆಗೆ ಒಳಗಾದ, ಅಲ್ಲಿನ ವಿದ್ಯಾರ್ಥಿಗಳಿಂದಲೇ ತಿರಸ್ಕೃತಗೊಂಡ ಕೇವಲ ಮೂರು ವಿದೇಶಿ ವಿಶ್ವವಿದ್ಯಾನಿಲಯಗಳು ಸರ್ಕಾರದ ಪ್ರಸ್ತಾವದ ಬಗ್ಗೆ ಆಸಕ್ತಿ ತೋರಿವೆ. ವಿದೇಶಿ ಎಂಬ ಹೆಸರಿನಲ್ಲಿ ಎಷ್ಟು ಕಳಪೆ ಮಟ್ಟದ ವಿಶ್ವವಿದ್ಯಾನಿಲಯಗಳು ನಮ್ಮಲ್ಲಿ ಕಾಲಿರಿಸಲು ಮುಂದಾಗುತ್ತಿವೆ ಎಂಬುದು ಇದರಿಂದ ಸ್ಪಷ್ಟವಾಗಿದೆ. ಹಾರ್ವರ್ಡ್ - ಆಕ್ಸ್‌ಫರ್ಡ್‌ಗಳು ಇಲ್ಲಿಗೆ ಧಾವಿಸಲು ತುದಿಗಾಲಲ್ಲೇನೂ ನಿಂತಿಲ್ಲ.

ನಮ್ಮ ರಾಷ್ಟ್ರದ ಉನ್ನತ ಶಿಕ್ಷಣ ಕ್ಷೇತ್ರ ಎದುರಿಸುತ್ತಿರುವ ಸವಾಲಿಗೆ ಹತ್ತು ಹಲವು ಮಜಲುಗಳಿವೆ. ಕೊಠಾರಿ ಆಯೋಗ ಮಾಡಿದ ಶಿಫಾರಸಿನಂತೆ ಸಮಗ್ರ ದೇಶೀಯ ಉತ್ಪಾದನೆಯ ಶೇಕಡ ೬ರಷ್ಟು ಹಣವನ್ನು ಶಿಕ್ಷಣಕ್ಕಾಗಿ ಬಜೆಟ್‌ನಲ್ಲಿ ಮೀಸಲಾಗಿಡಲು ಕೇಂದ್ರ ಸರ್ಕಾರಕ್ಕೆ ಇನ್ನೂ ಸಾಧ್ಯವಾಗಿಲ್ಲ. ಶಿಕ್ಷಣ ಕ್ಷೇತ್ರಕ್ಕೆ ಬಜೆಟ್‌ನಲ್ಲಿ ಮೀಸಲಿಡುವ ಮೊತ್ತ ದಶಕಗಳಿಂದಲೂ ಶೇಕಡ ೩ರ ಸುತ್ತ ಗಿರಕಿ ಹೊಡೆಯುತ್ತಿದೆ, ಎಂದರೆ ಆ ಕ್ಷೇತ್ರದ ಬಗ್ಗೆ ಸರ್ಕಾರಕ್ಕೆ ಇರುವ ಕಳಕಳಿಯ ಅಭಾವವನ್ನು ಊಹಿಸಿಕೊಳ್ಳಬಹುದು. ಜಪಾನ್ ಸೇರಿದಂತೆ ಕೆಲವು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಶಿಕ್ಷಣಕ್ಕೆ ಬಜೆಟ್ಟಿನ ಶೇಕಡ ೧೦ರಷ್ಟು ಮೊತ್ತವನ್ನು ನೀಡಲಾಗುತ್ತಿದೆ.

(೧೦ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)
ಆದರೆ ಅದು ಭಗವದ್ಗೀತೆಯ ಕರ್ತೃವು ನೀಡಿದ 'ಧರ್ಮಕ್ಷೇತ್ರ'ವೆಂಬ ವಿಶೇಷಣಕ್ಕೆ ಯೋಗ್ಯವಾಗಿಲ್ಲ. ಹಿಂದಿನ ಪುರಾಣ ಕಲ್ಪನೆಯಲ್ಲೂ ಅದು ರಣಕ್ಷೇತ್ರವೇ ವಿನಾ ಧರ್ಮಕ್ಷೇತ್ರವಲ್ಲ. ಧರ್ಮವನ್ನು ರಕ್ಷಿಸಲು ಅವತರಿಸಿದ್ದ ಕೃಷ್ಣರೂಪಿ ವಿಷ್ಣುವು ೧೮ ಅಕ್ಷೌಹಿಣಿಗಳಷ್ಟು ಸೈನ್ಯವನ್ನು ಕೊಲ್ಲಿಸದೆ ಧರ್ಮ ಸಂಸ್ಥಾಪನೆ ಮಾಡಲು ಅಸಮರ್ಥನಾದ. ಪಾತಕಿಗಳನ್ನು ಬದುಕಲು ಬಿಟ್ಟು ಧರ್ಮದ ದಾರಿಗೆ ಎಳೆಯಲು ಅವತಾರ ಪುರುಷನಿಗೂ ಸಾಧ್ಯವಾಗಲಿಲ್ಲವೇ ಎಂಬ ಮಾನಸಿಕ ಹಿಂಸೆ ಕುರುಕ್ಷೇತ್ರದಲ್ಲಿ ಓಡಾಡುತ್ತಿರುವಾಗೆಲ್ಲಾ ಬಾಧಿಸುತ್ತದೆ. ಕೃಷ್ಣನ ಪಾಡೇ ಅದಾದರೆ ಇನ್ನು ನಮ್ಮ ''ಜನನಾಯಕರು'' ಏನು ಮಾಡಬಲ್ಲರು! ಆದ್ದರಿಂದ ಅವರು ಧರ್ಮಾಂಧರಾಗುತ್ತಾರೆ ಇಲ್ಲವೆ ಸ್ವದೇಶ ಧರ್ಮಕ್ಕೆ ವಿಮುಖರಾಗಿ ಒಬಾಮಾನ ವಂದಿ ಮಾಗಧರಾಗುತ್ತಾರೆ. ಅತಿರಮ್ಯವಾದ ಬ್ರಹ್ಮಸರೋವರ ಮತ್ತು ಸುಂದರವಾದ ಕುರುಕ್ಷೇತ್ರ ವಿಶ್ವವಿದ್ಯಾನಿಲಯದ ಆವರಣ, ಇವೆರಡೇ ಕುರುಕ್ಷೇತ್ರಕ್ಕೆ ಶೋಭೆ ತರುವ ಅಂಶಗಳೆಂದು ಭಾಸವಾಗುತ್ತದೆ. ಹತ್ತಿರದಲ್ಲೇ ಉತ್ಖನನಗೊಂಡಿರುವ ಹರ್ಷಕೀ ಟಿಲಾ ಎಂಬುದಿದೆ. ಅಲ್ಲದೆ, ಹರ್ಯಾಣದಲ್ಲಿ ಹರಪ್ಪ ನಾಗರಿಕತೆಯ ಕಾಲದ ಎರಡು ಪ್ರಮುಖ ತಾಣಗಳಿವೆ. ಕುರುಕ್ಷೇತ್ರಕ್ಕೆ ಹೋಗುವ ಬದಲು ಅವನ್ನು ನೋಡಹೋಗುವುದು ಹೆಚ್ಚು ಹಿತಕರ. ವಿಶ್ವವಿದ್ಯಾನಿಲಯದ 'ಹೊರಗು' ಸುಂದರ; ಆದರೆ 'ಒಳಗು' ಹೇಗಿದೆಯೆಂಬುದು ಒಂದು ದಿನದ ಭೇಟಿಯಿಂದ ತಿಳಿಯುವುದಿಲ್ಲ. ಬೆಂಗಳೂರು ವಿಶ್ವವಿದ್ಯಾಲಯಕ್ಕಿರುವಂತೆ ಅದಕ್ಕೂ ನ್ಯಾಕ್‌ನ 'ಎ' ದರ್ಜೆಯ ಅರ್ಹತಾ ಪತ್ರ ದೊರೆತಿದೆಯೆಂಬುದನ್ನು ದಪ್ಪಕ್ಷರಗಳಲ್ಲಿ ಬರೆದಿದ್ದಾರೆ. ಅದನ್ನು ನೋಡಿದಾಗ ನಮ್ಮಲ್ಲಿರುವಂತೆ ಅಲ್ಲಿಯೂ ಅಧ್ವಾನಗಳ ರಾಶಿ ಇದೆಯೇನೋ ಎಂಬ ಬೇಸರ ಮೂಡುತ್ತದೆ. ಕುರುಕ್ಷೇತ್ರವೆಂದಮೇಲೆ ದ್ರೋಣಾಚಾರ್ಯ ಇರಲೇಬೇಕಲ್ಲ. ವಿಶ್ವವಿದ್ಯಾನಿಲಯದ ಒಂದು ಮಹಾದ್ವಾರ ಅವನ ಹೆಸರಿನಲ್ಲಿದೆ. ದ್ರೋಣನೆಸಗಿದ ಅಪಚಾರಗಳನ್ನು ಇಲ್ಲಿಯ ದ್ರೋಣರು ಎಸಗುತ್ತಿದ್ದರೆ ಅದು ಭಯಂಕರ. ಬರಗೂರರು 'ಏಕಲವ್ಯ' ಚಲನಚಿತ್ರದಲ್ಲಿ ''ನೀನು ದ್ರೋಣನಾಗಬೇಡ, ಸದಾ ಏಕಲವ್ಯನಾಗಿರು'' ಎಂದು ಆಗ್ರಹಿಸಿರುವುದು ನೆನಪಿಗೆ ಬಂತು. ಕುರುಕ್ಷೇತ್ರ ನಗರದಿಂದ ನಾಲ್ಕೈದು ಕಿಲೋಮೀಟರ್ ದೂರದಲ್ಲಿ ಜ್ಯೋತಿಸರ ಇದೆ. ಶ್ರೀಕೃಷ್ಣ ಭಗವಾನನು ಅರ್ಜುನನಿಗೆ ಗೀತೋಪದೇಶ ನೀಡಿದ್ದು ಅಲ್ಲೇ ಎಂದು ಹೇಳುವುದು ರೂಢಿ. ಗೀತಾಮಾಹಾತ್ಮ್ಯವನ್ನು ಸಾರುವ 'ಬೆಳಕು-ಧ್ವನಿ' ಕಾರ್ಯಕ್ರಮವನ್ನು ಸರ್ಕಾರ ಆಯೋಜಿಸಿದೆ. ಆದರೆ ಆಗಸ್ಟ್ ೪ರಂದು ಕಾರ್ಯಕ್ರಮ ರದ್ದಾಯಿತು. ಏಕೆಂದರೆ, ಆ ಮಹತ್ವದ ಕಾರ್ಯಕ್ರಮದಲ್ಲಿ ಆಸಕ್ತಿ ಇದ್ದವರಾರೂ ಇರಲಿಲ್ಲ (ಪ್ರಸ್ತುತ ಲೇಖಕನನ್ನು ಬಿಟ್ಟು). ''ಇದು ನಮಗೆ ಶಿವರಾತ್ರಿಯ ಕಾಲ. ಎಲ್ಲ ಭಕ್ತರೂ ಹರದ್ವಾರ ಮುಂತಾದೆಡೆಗಳಿಗೆ ಹೋಗಿಬಿಟ್ಟಿರುತ್ತಾರೆ, ನೋಡಿ'' ಎಂದರು ಸರ್ಕಾರಿ ಅಧಿಕಾರಿಯೊಬ್ಬರು.

ಕೇಂದ್ರ ಸರ್ಕಾರವು ಕುರುಕ್ಷೇತ್ರದಲ್ಲಿ ಎರಡು ಸ್ವಾಗತಾರ್ಹ ವಸ್ತುಪ್ರದರ್ಶನಗಳನ್ನು ಏರ್ಪಡಿಸಿದೆ: ಒಂದು, ವಿಜ್ಞಾನ ಕೇಂದ್ರ; ಇನ್ನೊಂದು, ಕೃಷ್ಣ ಸಂಗ್ರಹಾಲಯ. ವಸ್ತುನಿಷ್ಠ ದೃಷ್ಟಿಯಿಂದ ಭಾರತೀಯ ವಿಜ್ಞಾನದ ಗಳಿಕೆಗಳನ್ನು ದಾಖಲಿಸಿರುವುದು ನಿಜಕ್ಕೂ ಸಂತಸ ತರುತ್ತದೆ. ರಾವಣನ ಬಳಿ ವಿಮಾನವಿತ್ತೆಂದು ವಾದಿಸುವ ಬೆಂಗಳೂರಿನ ಸಂಸ್ಕೃತ ಪಂಡಿತರು ಅದನ್ನೆಲ್ಲಾ ವಿಜ್ಞಾನ ಕೇಂದ್ರವು ದಾಖಲಿಸಿಲ್ಲವೆಂದು ಕ್ರುದ್ಧರಾದರೆ ಆಶ್ಚರ್ಯವಿಲ್ಲ. ಶುಲ್ಬಸೂತ್ರದ ಪ್ರಮೇಯಗಳು, ವೈಶೇಷಿಕ ದರ್ಶನದ ಭೌತವಿಜ್ಞಾನ, ಆರ್ಯಭಟಾದಿಗಳ ಖಗೋಳ ವಿಜ್ಞಾನದ ಕಾಣ್ಕೆಗಳು, ಚರಕನ ವೈದ್ಯಕೀಯದ ತಳಹದಿ, ಮುಂತಾದುವನ್ನೆಲ್ಲಾ ಅಂಗೀಕಾರಾರ್ಹ ರೀತಿಯಲ್ಲಿ ಕಾಣಿಸಿರುವುದು ಸಮಾಧಾನ ತರುತ್ತದೆ. ಋಗ್ವೇದದ ಕಾಲವನ್ನು ಹುಚ್ಚುಹುಚ್ಚಾಗಿ ಕ್ರಿ.ಪೂ. ೧೫,೦೦೦ ಎನ್ನುವ ಅನೈತಿಹಾಸಿಕ ಮೂರ್ಖತನವನ್ನು ಕೈಬಿಟ್ಟು ಸಂಕೋಚ ಇಲ್ಲದೆ ಅದನ್ನು ಕ್ರಿ.ಪೂ. ೧೫೦೦ ಎಂದೇ ನಮೂದಿಸಿರುವುದು ಐತಿಹಾಸಿಕ ದೃಷ್ಟಿಯ ಕುರುಹಾಗಿದೆ. ವಿನಾಕಾರಣ ವೈಭವೀಕರಣವಿಲ್ಲದಿರುವುದು ವಿಜ್ಞಾನಕ್ಕೆ ಸಂದ ಮರ್ಯಾದೆಯಾಗಿದೆ. ನಮ್ಮ ರಾಜ್ಯದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯ ಹುಟ್ಟಿಕೊಂಡಿದೆ. ಅದೇನಾದರೂ ಇಂತಹ ಕೇಂದ್ರ ಸ್ಥಾಪಿಸಿದರೆ ಈ ಮಟ್ಟದ ವೈಜ್ಞಾನಿಕ ವಸ್ತುನಿಷ್ಠತೆಯನ್ನು ಕಾಪಾಡಿಕೊಳ್ಳಲೆಂದು ಆಶಿಸಬೇಕಾಗಿದೆ. ಆಸೆ ಈಡೇರುವ ಭರವಸೆ ಬಹಳವಿಲ್ಲ, ಏಕೆಂದರೆ ಸಂಸ್ಕೃತ ವಿಶ್ವವಿದ್ಯಾಲಯದ ಒಂದು ಕಂಭ ತಾವೆಂದು ಭಾವಿಸಿಕೊಂಡಿರುವ ವಿದ್ವಾಂಸರನೇಕರು ಮಾನ್ಯ ಎಸ್. ಎಲ್. ಭೈರಪ್ಪನವರ ಮಾದರಿಯವರು. ಮಹಿಳೆಯರಿಗೆ ನ್ಯಾಯಾಲಯಗಳು ಸಂವಿಧಾನೋಕ್ತ ನ್ಯಾಯ ನೀಡಬಾರದು, ಧರ್ಮಶಾಸ್ತ್ರೋಕ್ತ ನ್ಯಾಯ ನೀಡಬೇಕೆಂಬ ಅದ್ಭುತ ಸಲಹೆಯನ್ನು ಭೈರಪ್ಪನವರು ಇತ್ತೀಚೆಗಷ್ಟೇ ನೀಡಿದಾಗ ಸಂಸ್ಕೃತ ವಿದುಷಿಯರನೇಕರು ಅಲ್ಲಿದ್ದರು. ಎಲ್ಲಾ ಚಪ್ಪಾಳೆ ಹೊಡೆದು ಸಂತೃಪ್ತರಾದರಂತೆ! ''ಸ್ವಾಮಿಗಳೆ, ಧರ್ಮಶಾಸ್ತ್ರವು ನಿಂತ ನೀರಲ್ಲ. ಅದು ಕಾಲದಿಂದ ಕಾಲಕ್ಕೆ ಬದಲಾಗಿದೆ. ಅಶೋಕನ ಕಾಲದ ಧರ್ಮಶಾಸ್ತ್ರವೇ ಬೇರೆ, ಗುಪ್ತರ ಕಾಲದ್ದೇ ಬೇರೆ. ನೀವು ಯಾವ ಕಾಲದ ಧರ್ಮಶಾಸ್ತ್ರದ ಮಾತನ್ನಾಡುತ್ತಿದ್ದೀರಿ'' ಎಂಬ ಪ್ರಶ್ನೆ ಕೇಳುವ ಬದಲು ವಿದುಷಿಯರು ಹಸನ್ಮುಖಿಗಳಾಗಿ ರಾರಾಜಿಸುತ್ತಿದ್ದರು! ಕೊಳೆತ ಮನಸ್ಸುಗಳನ್ನು ಶುಚಿ ಮಾಡಿಕೊಳ್ಳುತ್ತಾರೆ ಎಂಬುದು ಭ್ರಮೆ ಎನಿಸಿಬಿಟ್ಟಿತು. ಬಾಲ್ಯವಿವಾಹ, ಜಾತಿಕಟ್ಟಳೆ, ಅಧೀನತೆ, ವೈಧವ್ಯದ ಖಂಡನೀಯ ರೀತಿನೀತಿಗಳು, ಎಲ್ಲವನ್ನು ಮಹಿಳೆಯ ಮೇಲೆ ಹೇರುವುದು ಇವರಿಗೆ ಧರ್ಮಶಾಸ್ತ್ರ, ಸಮಾನತೆಯ ಕಾನೂನನ್ನು ಅಪೇಕ್ಷಿಸುವ ಸಂವಿಧಾನ ನಿರರ್ಥಕ. ಇದು ವೈಜ್ಞಾನಿಕ ದೃಷ್ಟಿ ಖಂಡಿತ ಅಲ್ಲ.

ಕುರುಕ್ಷೇತ್ರದ ಕೃಷ್ಣ ಸಂಗ್ರಹಾಲಯವೂ ಸೊಗಸಾಗಿದೆ. ಎಲ್ಲ ರಾಜ್ಯಗಳ ಕಲಾಪ್ರಕಾರಗಳೂ ಅಲ್ಲಿ ಪ್ರಾತಿನಿಧ್ಯ ಹೊಂದಿವೆ, ಕೃಷ್ಣನನ್ನು ಪರಂಪರೆ ಹೇಗೆ ಕಂಡಿದೆಯೆಂಬುದು ಪ್ರತಿಫಲಿತವಾಗಿದೆ. ಹಲವು ಹಸ್ತಪ್ರತಿ ಗ್ರಂಥಗಳೂ ಇವೆ. ಜ್ಯೋತಿಸರಕ್ಕಿಂತಲೂ ಹೆಚ್ಚು ಆಕರ್ಷಣೀಯವಾಗಿರುವ ವಿಜ್ಞಾನ ಕೇಂದ್ರ ಮತ್ತು ಕೃಷ್ಣ ಸಂಗ್ರಹಾಲಯ ಕುರುಕ್ಷೇತ್ರಕ್ಕೆ ಮೆರುಗು ನೀಡಿವೆ. ಆದರೆ 'ಪನೋರಮ' ಎಂದು ಕುರುಕ್ಷೇತ್ರದ ಯುದ್ಧವನ್ನು ವಿಸ್ತಾರವಾದ ಹರಹಿನಲ್ಲಿ ಚಿತ್ರಿಸಹೋಗಿ ಒಂದು ಪೇಲವವಾದ ಯುದ್ಧಭೂಮಿಯ ಪ್ರಶ್ನಾರ್ಹ ಚಿತ್ರವನ್ನು ರಚಿಸಿರುವುದು ಬೇಸರವುಂಟುಮಾಡುತ್ತದೆ. ಮಾಸ್ಕೋದಲ್ಲಿ ಇರುವ ಬೊರೋದಿನೋ ಯುದ್ಧಭೂಮಿಯ ಪನೋರಮ ನೋಡಿ ಇದನ್ನು ಕಲ್ಪಿಸಿಕೊಂಡಂತಿದೆ, ಆದರೆ ಅನುಕರಣೆ ನೂರಕ್ಕೆ ನೂರರಷ್ಟು ವಿಫಲವಾಗಿದೆ.

ಕುರುಕ್ಷೇತ್ರಕ್ಕೆ ಹೋದಾಗ ಸಹಜವಾಗಿ ಹತ್ತಿರದಲ್ಲೆಲ್ಲೋ ಹಸ್ತಿನಾಪುರ ಇರಬಹುದೆಂಬ ಭಾವನೆ ಬರುತ್ತದೆ. ಇಂದ್ರಪ್ರಸ್ಥವೆಂಬುದು ಇಂದಿನ ದೆಹಲಿ ಎಂಬ ಮಾತು ಪ್ರಸಿದ್ಧ. ಆದರೆ ದುರ್ಯೋಧನನ ಹಸ್ತಿನಾಪುರವೆಲ್ಲಿ? ಅದರ ಹೆಸರೇ ಏಕೋ ಸ್ವಲ್ಪ ತಪ್ಪಾಗಿದೆಯೆ, ಅದು ಹಸ್ತಿನೀಪುರವೆಂದಿರಬೇಕಿತ್ತೆ, ಎಂದು ಕುರುಕ್ಷೇತ್ರ ವಿಶ್ವವಿದ್ಯಾಲಯದ ಅಧ್ಯಾಪಕರೊಬ್ಬರನ್ನು ಕೇಳಲಾಗಿ ಅವರು ತಲೆಯಾಡಿಸುತ್ತಾ ಹೋಗಿಬಿಟ್ಟರು. ಹರದ್ವಾರದ ಹಾದಿಯಲ್ಲಿ ಸಹಾರನ್‌ಪುರವೆಂಬ ಪಟ್ಟಣವಿದೆ. ಅದರ ಹತ್ತಿರ ಗಂಗೋಹ ಎಂಬ ಊರಿದೆ. ಅದರ ಬಳಿ ಹಸ್ತಿನಾಪುರ ಎಂಬ ಹಳ್ಳಿ ಈಗಲೂ ಇದೆಯೆಂದು ಗಂಗೋಹದ ಹಿರಿಯ ನಾಗರಿಕರೊಬ್ಬರು ಹೇಳಿದರು. ''ಆದರೆ ಅಲ್ಲಿ ಅರಮನೆ ಇಲ್ಲ, ಇರುವುವೆಲ್ಲಾ ವಿದುರನಂಥವರ ಮನೆಗಳೇ, ಅಲ್ಲಿಗೆ ಈಗಲೆ ಹೊರಟುಬಿಡಬೇಡಿ'' ಎಂದೂ ಅವರು ಎಚ್ಚರಿಸಿದರು.

* * *

**ಕೇಂ**ದ್ರ ಸರ್ಕಾರದ ಕೃಷಿ ಸಚಿವಾಲಯದಲ್ಲಿ ಶರದ್ ಪವಾರ್‌ನಂತಹ ಪರಮ ಬೇಜವಾಬ್ದಾರಿ ಶ್ರೀಮಂತನು ಮುಖ್ಯಸ್ಥನಾಗಿದ್ದರೂ ಆಗಾಗ್ಗೆ ಕೆಲವಾದರೂ ಜನಪರ ಕ್ರಮಗಳನ್ನು ನಿರ್ವಹಿಸುವವರು ಅಲ್ಲಿದ್ದಾರೆ. ಅವರಿಗೆ ಆರೋಗ್ಯ ಸಚಿವಾಲಯದ ತ್ರಿವೇದಿ ಎಂಬೊಬ್ಬರ ಬೆಂಬಲವಿದೆ. ಇವರು ಹಿರಿಯ ಕಾರ್ಯದರ್ಶಿಗಳಲ್ಲ, ಆದರೂ ಕಟ್ಟುನಿಟ್ಟು ಕ್ರಮಗಳಿಗಾಗಿ ಪಟ್ಟುಹಿಡಿಯುತ್ತಾರೆಂದು ಹೇಳುತ್ತಾರೆ. ನಮ್ಮ ತರಕಾರಿ, ಹಣ್ಣುಗಳು, ಸೊಪ್ಪು ಮಿರಿಮಿರಿ ಮಿನುಗುತ್ತಿರಬೇಕಂತೆ. ಆಗ ಅದರ ಬೆಲೆ ಏರಿಸುವುದು ಸುಲಭ. ಹೀಗೆನ್ನುವವರು ಬಹುರಾಷ್ಟ್ರೀಯ ಕಂಪನಿಗಳ ವಕ್ತಾರರು ಮತ್ತು ಅವರ ''ಸ್ವದೇಶಿ'' ಏಜೆಂಟರು. ಆದರೆ ಮಿರಿಮಿರಿ ಮಾಡುವುದು ಹೇಗೆ? ಹಾಗೆ ಮಾಡಿದಾಗ ತರಕಾರಿ-ಹಣ್ಣು-ಸೊಪ್ಪು ಪೌಷ್ಟಿಕತೆ ಉಳಿಸಿಕೊಂಡಿರುತ್ತವೆಯೋ, ಇಲ್ಲ, ಆರೋಗ್ಯಕ್ಕೆ ಧಕ್ಕೆ ತರಬಲ್ಲಂತಹ

ರಾಸಾಯನಿಕಗಳನ್ನು ತುಂಬಿಕೊಂಡಿರುತ್ತವೆಯೊ? ತ್ರಿವೇದಿ ಈ ಪ್ರಶ್ನೆಯನ್ನೆತ್ತಿ, ಕೃಷಿ ಸಚಿವಾಲಯವು ''ಮಿರಿಮಿರಿ ಏಜೆಂಟು''ಗಳನ್ನು ತಹಬಂದಿಗೆ ತರ ಬೇಕೆಂದು ಕೇಳಿದ್ದಾರೆ. ಗರ್ಭಿಣಿಯರಿಗೆ ಪ್ರಸವ ವೇದನೆಯನ್ನು ಕೃತಕವಾಗಿ ತರಿಸಲು ಬಳಸುವ ಒಂದು ಹಾರ್ಮೋನ್‌ಗೆ 'ಆಕ್ಸಿಟೋಸಿನ್' ಎಂದೋ ಏನೋ ಹೆಸರಿದೆಯಂತೆ. ಅದನ್ನು ಬಳಸಿದಾಗ ತರಕಾರಿ, ಇತ್ಯಾದಿಗಳು, ಮಿರಿಮಿರಿ ಹೊಳೆಯುತ್ತವಂತೆ. ಆದರೆ ಅದು ಸರ್ವಥಾ ಹಾನಿಕರವೆಂದು ತ್ರಿವೇದಿ ಪ್ರಯೋಗ ವಿಜ್ಞಾನದಿಂದ ಸಾಬೀತುಗೊಳಿಸಿ ಕೃಷಿ ಸಚಿವಾಲಯದ ನಿಷ್ಕ್ರಿಯತೆಯನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಅದನ್ನು ಬಹಿಷ್ಕರಿಸಲು ದೊಡ್ಡ ಕಂಪನಿಗಳ ವಿರೋಧ ಇದೆ, ಆದರೆ ಅದನ್ನು ಮೆಟ್ಟಿ ನಿಂತು ದೇಶದ ಮತ್ತು ದೇಹದ ಆರೋಗ್ಯ ರಕ್ಷಿಸಬೇಕೆಂದು ಕೃಷಿ ಸಚಿವಾಲಯಕ್ಕೆ ನಿರ್ದೇಶನ ನೀಡಿದ್ದಾರೆ. ಕೆಂಟಕಿ ಕೋಳಿ ಇದ್ದಂತೆ, ಆಕ್ಸಿಟೋಸಿನ್‌ನಿಂದ ಬೆಳೆದು ಕಂಗೊಳಿಸುವ ತರಕಾರಿ ಇದೆ. ಅಲ್ಲಿ ಕೋಳಿಗೆ ನರಕ, ಇಲ್ಲಿ ಮಾನವರಿಗೆ ನರಕ. ಕಾರ್ಪೊರೇಟ್ ಕೃಷಿ ತಂತ್ರಜ್ಞಾನವನ್ನು ಮೆಚ್ಚಿ ಹಾಡಿ ಹೊಗಳುವ ನಮ್ಮ ಶ್ರೀಮಂತರು ಹಾಗೂ ಕಳಪೆ ವಿಜ್ಞಾನಿಗಳು ತ್ರಿವೇದಿಯವರ ಸವಾಲನ್ನೆದುರಿಸುವ ಸಾಮರ್ಥ್ಯ ತೋರಬಲ್ಲರೇನು? ದೇಶವನ್ನು ಕೊಲ್ಲುವ ಕಾರ್ಪೊರೇಟ್ ಕೃಷಿ ಕಂಪನಿಗಳ ಹುನ್ನಾರವನ್ನು ಬಯಲಿ ಗೆಳೆದು ಸೋಲಿಸಬೇಕಾದ್ದು ಜನತೆಯ ಜವಾಬ್ದಾರಿ.

* * *

**ತಾ**ಲ್ಲೂಕು ಸ್ಥಳವೂ ಅಲ್ಲದ, ಗ್ರಾಮವೂ ಅಲ್ಲದ ಎರಡೂ ಲಕ್ಷಣಗಳನ್ನು ಉಳಿಸಿಕೊಂಡಿರುವ ಊರು ಸವಣೂರು. ಈಗ ಹಾವೇರಿ ಜಿಲ್ಲೆಯಲ್ಲಿ ಇರುವ ಈ ಸವಣೂರು ಈ ತಿಂಗಳಿಡೀ ಸುದ್ದಿಯಲ್ಲಿತ್ತು. ಅಲ್ಲಿರುವ ಭಂಗಿ ಜನಾಂಗದವರು ಮೈಮೇಲೆ ಮಲ ಸುರುವಿಕೊಂಡು ತಮ್ಮ ಬೇಡಿಕೆಗಾಗಿ ಪ್ರತಿಭಟಿಸಿದರು. ಮನವಿ, ಧರಣಿ, ಪ್ರತಿಭಟನೆ, ಉಪವಾಸ, ಆಮರಣ ಉಪವಾಸ ಪ್ರತಿಭಟನೆ, ಇಂಥ ಎಲ್ಲ ಶಸ್ತ್ರಗಳಿಗೂ ಲಕ್ಷ್ಯಕೊಡದ, ಕಿವಿಗೊಡದ ಸರಕಾರ ಇದ್ದಾಗ ಜನ ತಮಗೆ ತೋಚಿದ ಮಾರ್ಗ ಹಿಡಿಯುತ್ತಾರೆ. ಹೊಸ ಹೊಸ ಮಾರ್ಗ ಶೋಧಿಸುತ್ತಾರೆ. ಹಾಗೇ ಅಂದಿನ ನವಾಬನ ಕಾಲದಿಂದಲೂ ಊರ ಸಿರಿವಂತರ ಕಕ್ಕಸು ಬಳಿದು ಬದುಕುತ್ತ ಬಂದಿರುವ ಸವಣೂರಿನ ಭಂಗಿ ಜನಾಂಗದವರು ತಮ್ಮ ವಸತಿ ಸಮಸ್ಯೆ ಪರಿಹರಿಸಲು ಒತ್ತಾಯಿಸಿ ತಾವು ಎತ್ತಿಹಾಕುವ ಮಲವನ್ನೇ ಸಾರ್ವಜನಿಕ ವಾಗಿ ಮೈಮೇಲೆ ಸುರಿದುಕೊಂಡು ಪ್ರತಿಭಟಿಸಿದರು. ಅವರ ಈ ಕೃತ್ಯ ತಕ್ಷಣ ರಾಜ್ಯಾದ್ಯಂತ ಸುದ್ದಿಯಾಯಿತು. ಸವಣೂರಿನ ಜನ ಮೂಗುಮುಚ್ಚಿಕೊಂಡರೆ, ಸುದ್ದಿ ಓದಿದ ರಾಜ್ಯದ ಜನ ಮೂಗಿನ ಮೇಲೆ ಬೆರಳಿಟ್ಟು ಕೊಂಡರು. ಸರಕಾರ ಮಿಸುಕಾಡಿತು. ಅಧಿಕಾರಿಗಳು ಅಲುಗಾಡಿದರು. ಟಿವಿ ಕ್ಯಾಮರಾಗಳು ಓಡಾಡಿದವು. ಅವರ ವಿವರವಾದ ಸಂದರ್ಶನಗಳು ವಿವಿಧೆಡೆ ಪ್ರಕಟವಾದುವು. ವಿಶೇಷ ವರದಿಗಾರರು, ವಿರೋಧ ಪಕ್ಷಗಳ ನಾಯಕರು, ಜಗದ್ಗುರುಗಳು ಎಲ್ಲರೂ ಸವಣೂರಿನ ಭಂಗಿ ಜನಾಂಗದವರನ್ನು ಭೆಟ್ಟಿ ಯಾದರು. ಒಂದು ಮಲಮಜ್ಜನಕ್ಕೆ ಎಂಥಾ ಶಕ್ತಿ ಬಂತು ನೋಡಿ! ಜನತೆ, ಸರಕಾರ, ಮಾಧ್ಯಮ, ವಿರೋಧ ಪಕ್ಷಗಳು ಎಲ್ಲರೂ ಅಯ್ಯೋ ಪಾಪ, ಅಂದರು. ಕೊನೆಗೂ ಒಂದು ತಿಂಗಳೊಳಗೆ ಅವರ ಬೇಡಿಕೆ ಈಡೇರಿತು. ಬೇಡಿಕೆ ಏನಿತ್ತು ಎಂದರೆ, ೭೦ ವರ್ಷಗಳಿಂದ ವಾಸವಾಗಿರುವ ಭಂಗಿ ಕುಟುಂಬದವರ ಮನೆಗಳಿಗೆ ಹಕ್ಕುಪತ್ರ ಕೊಡಿ ಎನ್ನುವುದು. ಅದನ್ನು ಪಡೆಯಲು ಇಷ್ಟೆಲ್ಲಾ ನಡೆಯಿತು. ಅವರ ಬೇಡಿಕೆ ಈಡೇರಿದ್ದು ಸಂತೋಷ. ಆದರೆ ನಗರಗಳ ಪೌರ ಕಾರ್ಮಿಕರು ವರ್ಷಾನುಗಟ್ಟಲೆ ಹೋರಾಟ ಧರಣಿ ನಡೆಸುತ್ತಲೇ ಇದ್ದಾರೆ. ಭಂಗಿಗಳ ಆಧುನಿಕ ಹೆಸರು 'ಪೌರಕಾರ್ಮಿಕರು' ಎಂದು. ಬೆಂಗಳೂರಿನಂತಹ ವಿಶ್ವದ ಗಮನ ಸೆಳೆದ ಮಹಾನಗರದಲ್ಲಿ ಪೌರ ಕಾರ್ಮಿಕರಿಗೆ ಸಿಗುವ ತಿಂಗಳ ಸಂಬಳ ಸರಾಸರಿ ೨೦೦೦ ರೂಪಾಯಿ. ಆ ಹಣವನ್ನು ನಗರಸಭೆ ಕೊಡುವುದಿಲ್ಲ, ನಗರಸಭೆ ಗುತ್ತಿಗೆದಾರರಿಗೆ ಕೊಡುತ್ತಿದೆ. ಗುತ್ತಿಗೆದಾರರು ಪೌರಕಾರ್ಮಿಕರಿಗೆ ಕೊಡುತ್ತಾರೆ. ಮಹಾನಗರಸಭೆ ಪೌರಕಾರ್ಮಿಕರ ಸಲುವಾಗಿ ವರ್ಷಕ್ಕೆ ೧೨೦ ಕೋಟಿ ರೂ.ಗಳನ್ನು ಗುತ್ತಿಗೆದಾರರಿಗೆ ಕೊಡುತ್ತದೆ. ಇದರಲ್ಲಿ ೪೦ ಕೋಟಿ ಮಾತ್ರ ಕಾರ್ಮಿಕರ ಪಾಲಿಗೆ ಬಂದು ಉಳಿದ ೮೦ ಕೋಟಿ ಗುತ್ತಿಗೆದಾರರಿಗೆ, ಮಹಾನಗರ ಸಭೆಯ ಗುಮಾಸ್ತನಿಂದ ಹಿಡಿದು ಕಮಿಶನರ್‌ವರೆಗೆ, ಸದಸ್ಯನಿಂದ ಮಂತ್ರಿಯವರೆಗೆ ಹಂಚಲ್ಪಡುತ್ತಿದೆ. ಹೀಗಿದ್ದಾಗ ಪೌರಕಾರ್ಮಿಕರ ಕೂಗು ಕೇಳುವವ ರ್‍ಯಾರು? ಇವರದು ಕಾಯಂ ನೌಕರಿಯೂ ಅಲ್ಲ. ಶಾಲಪ್ಪ ಸಮಿತಿಯು ಪೌರಕಾರ್ಮಿಕರಿಗೆ ಬೂಟು, ಕೈಗವಚ, ಮಾಸ್ಕ್, ಸೋಪು ಇವನ್ನು ಕೊಡಬೇಕೆಂದು ಹೇಳಿದೆ. ಸಫಾಯಿ ಕರ್ಮಚಾರಿ ಕಾಯಿದೆ (೧೯೮೩) ಮುನಿಸಿಪಾಲ್ಟಿಯ ಒಟ್ಟು ಆದಾಯದ ಪ್ರತಿಶತ ೪೫ರಷ್ಟು ಪೌರಕಾರ್ಮಿಕರಿಗೆ ಕೊಡಬೇಕೆಂದು ಹೇಳಿದೆ. ಆದರೆ ಕೊಡುವವರ್‍ಯಾರು? ಪಡೆಯುವುದಾದರೂ ಹೇಗೆ? ಸರಕಾರಗಳು ಸಾಮಾನ್ಯ ಪ್ರತಿಭಟನೆಗಳಿಗೆ ಜಗ್ಗುವುದಿಲ್ಲ, ಸಾಮಾನ್ಯ ಹೋರಾಟಗಳನ್ನು ಮಾಧ್ಯಮಗಳು ಗಮನಿಸು ವುದಿಲ್ಲ, ಅದಕ್ಕೇ ಪಾಪ, ಸವಣೂರಿನ ಭಂಗಿಗಳು ಮೈಮೇಲೆ ಮಲ ಸುರಿದುಕೊಳ್ಳುವ ಸ್ಥಿತಿ ಬಂದೊದಗಿತು. ಈ ಮಾದರಿಯನ್ನು ಸ್ವಲ್ಪ ಬದಲಾಯಿಸಿ ಪೌರ ಕಾರ್ಮಿಕರು ಹೊಸ ಮಾದರಿಯೊಂದನ್ನು ಕಂಡುಕೊಳ್ಳ ಬಹುದು. ಅದೆಂದರೆ, ಇಡೀ ನಗರವನ್ನು, ಚರಂಡಿ ಗಳನ್ನು ಸ್ವಚ್ಛ ಮಾಡುವ ಈ ಜನ ಅದನ್ನೆಲ್ಲ ತಮ್ಮ ಮೈಮೇಲೆ ಸುರಿದುಕೊಳ್ಳುವ ಬದಲು ಸಂಬಂಧಪಟ್ಟ ಅಧಿಕಾರಿ ಮಂತ್ರಿಗಳ ಮನೆ ಮುಂದೆ ಹಾಕುವುದು ಒಳಿತು. ಇಂಥ ಒಂದು ಮಾದರಿಯನ್ನು ಸವಣೂರಿನ ಭಂಗಿ ಸಮುದಾಯದವರು ಪೌರ ಕಾರ್ಮಿಕರಿಗೆ ತೋರಿಸಿಕೊಟ್ಟಿದ್ದಾರೆ.

* * *

**ಕಾಂ**ಗ್ರೆಸ್‌ನ ಪಾದಯಾತ್ರೆ ಯಶಸ್ವಿಯಾಗಿ ಬಳ್ಳಾರಿಗೆ ತಲುಪಿ ನಾಯಕರು ತಂತಮ್ಮ ಸ್ಥಾನಗಳಿಗೆ ಹಿಂತಿರುಗಿದ್ದಾರೆ. ಅಲ್ಲಿಗೆ ಶಸ್ತ್ರಚಿಕಿತ್ಸೆ ಯಶಸ್ವಿಯಾಯಿತು ಎಂದೇ ಹೇಳಬಹುದು. ಆದರೆ ಇಡೀ ಜಾಥಾ ಸಂದರ್ಭದಲ್ಲಿ ಅಕ್ರಮ ಗಣಿಗಾರಿಕೆ, ಇಂದಿನ ಸ್ಥಿತಿಗತಿ, ಗಣಿಗಳ್ಳರ ಕಳ್ಳತನ ಇದಾವುದೂ ಗಂಭೀರವಾಗಿ ಚರ್ಚೆಯಾಗಲಿಲ್ಲ. ಬರೀ ಬೈಗುಳಗಳ ಕೊಡು ಕೊಳ್ಳುವಿಕೆ. ನಾಡ ರಕ್ಷಣೆಗೆಂದು ಕಾಂಗ್ರೆಸ್ ನಾಯಕರು ಜಾಥಾ ನಡೆಸಿದರೆ ಸಂಪನ್ಮೂಲಗಳ ರಕ್ಷಣೆಯ ಬಗ್ಗೆ ಮಾತೇ ಇಲ್ಲ, ಬರೀ ಸಿಬಿಐ ತನಿಖೆ ಕುರಿತೇ ಮಾತು. ಇಂದು ನಾಡ ರಕ್ಷಣೆಯಾಗಬೇಕಾದರೆ ಗಣಿಗಾರಿಕೆ ರಾಷ್ಟ್ರೀಕರಣವಾಗಬೇಕು. ಆಗ ಮಾತ್ರ ನಾಡ ರಕ್ಷಣೆ ಯಾಗುತ್ತದೆ. ಗಣಿಗಳ್ಳತನದ ಆರೋಪ ಹೊತ್ತಿರುವ ಬಿ.ಜೆ.ಪಿ.ಯವರು ಲೋಕಾಯುಕ್ತರಿಂದ ತನಿಖೆ ಆಗಬೇಕು ಎನ್ನುತ್ತಾರೆ. ಪಾದಯಾತ್ರೆ ಕಾಂಗ್ರೆಸ್ಸಿಗರು ಸಿಬಿಐನಿಂದ ತನಿಖೆ ಆಗಬೇಕು ಎನ್ನುತ್ತಾರೆ. ಇದು ಹಿಂದೆ ನಡೆದ ಹಗರಣಗಳ ಕುರಿತು ನಡೆಸಬೇಕಾದ ತನಿಖೆ. ಆದರೆ ಮುಂದಿನ ದಿನಗಳಲ್ಲಾದರೂ ಗಣಿ ಸಂಪತ್ತಿನ ರಕ್ಷಣೆ ಮತ್ತು ನಮ್ಮೆಲ್ಲ ಸಂಪನ್ಮೂಲಗಳ ಸದುಪಯೋಗವಾಗಬೇಕಾದರೆ ಅವು ರಾಷ್ಟ್ರೀಕರಣ ವಾಗಬೇಕು. ಆದರೆ ಈ ಬೇಡಿಕೆ ಯಾರ ಬಾಯಿ ಯಿಂದಲೂ ಬರುತ್ತಿಲ್ಲ. ಈ ಕಾಂಗ್ರೆಸ್‌ನ ಪಾದಪ್ರವಾಸ, ಬಿ.ಜೆ.ಪಿ.ಯ ಸಮಾವೇಶಗಳ, ಗದ್ದಲಗಳ ನಡುವೆ ರಾಜ್ಯದ ಕಮ್ಯುನಿಸ್ಟ್ ಪಕ್ಷದವರು ಗಣಿ ರಾಷ್ಟ್ರೀಕರಣ ವಾಗಬೇಕೆಂದು ಒತ್ತಾಯಿಸಿ ಆಗಸ್ಟ್ ೩ರಂದು ಬಳ್ಳಾರಿಯಲ್ಲಿ ಸಮಾವೇಶ ಮಾಡಿದರು. ಅದು ರಾಜ್ಯಾದ್ಯಂತ ಸುದ್ದಿಯಾಗಲೇ ಇಲ್ಲ. ಸುದ್ದಿಯಾದದ್ದು ಕಾಂಗ್ರೆಸ್ ಪಾದಯಾತ್ರಿಗಳ ಗಡ್ಡ ಎಷ್ಟು ಬೆಳೆಯಿತು, ತೂಕ ಎಷ್ಟು ಇಳಿಯಿತು, ಶ್ರೀರಾಮುಲು ತಲೆಯು ಎಷ್ಟು ಹೇಗೆ ನುಣುಪಾಗಿತ್ತು ಎಂಬಂತಹ ಮಾಹಿತಿ ಪತ್ರಿಕೆ, ಟಿವಿಗಳಲ್ಲಿ ಪುಟಗಟ್ಟಲೆ, ಗಂಟೆಗಟ್ಟಲೆ ಬಂದುವು. ಇನ್ನುಳಿದಂತೆ ಅವರಿಬ್ಬರ ಬೀದಿ ಜಗಳದ ಮಟ್ಟದ ಅಗ್ಗದ ಹೇಳಿಕೆಗಳು. ಆದರೆ ನಾಡ ರಕ್ಷಣೆಗಾಗಿ ಆಗಬೇಕಾದ ಗಣಿಗಾರಿಕೆ ರಾಷ್ಟ್ರೀಕರಣದ ವಿಷಯ ಹಾಗೇ ಉಳಿದಿದೆ. ೮-೯ ತಿಂಗಳ ಹಿಂದೆ ಬೆಂಗಳೂರಿ ನಲ್ಲಿ ಎಡಪಕ್ಷಗಳು, ಪ್ರಗತಿಪರ ಸಂಘಸಂಸ್ಥೆಗಳು ಗಣಿಗಾರಿಕೆಯನ್ನು ರಾಷ್ಟ್ರೀಕರಣಗೊಳಿಸಬೇಕೆಂದು ಒತ್ತಾಯಿಸಿ, ದೊಡ್ಡ ರೀತಿಯಲ್ಲಿ ರಾಜಭವನ್ ಚಲೋ ಕಾರ್ಯಕ್ರಮವನ್ನು ಸಂಘಟಿಸಿದ್ದು ನೆನಪಿಗೆ ಬರುತ್ತದೆ. ಒಟ್ಟಾರೆಯಾಗಿ, ಕಾಂಗ್ರೆಸ್‌ಗೆ ಕಳ್ಳರ ಬಗ್ಗೆ ಸಿಟ್ಟಿದೆಯೇ ಹೊರತು ಕಳ್ಳತನದ ಬಗ್ಗೆ ಅಲ್ಲ ಎಂಬುದು ಸತ್ಯ. ಈ ರಾಜ್ಯದಲ್ಲಿ, ಪರರಾಜ್ಯಗಳಲ್ಲಿ ಕಾಂಗ್ರೆಸ್‌ನವರೂ ಗಣಿ ಲೂಟಿಯಲ್ಲಿ ತೊಡಗಿರುವುದರಿಂದ ಅವರು ಬಿ.ಜೆ.ಪಿ. ಕಳ್ಳರ ಕುರಿತು ಮಾತನಾಡಬಲ್ಲರೇ ಹೊರತು ಕಳ್ಳತನದ ಕುರಿತಲ್ಲ. ಅದಕ್ಕೇ ಹೇಳಿದ್ದು ಕಾಂಗ್ರೆಸ್‌ನ ಪಾದಯಾತ್ರೆಯ ಒಟ್ಟಾರೆಯ ಪರಿಣಾಮವೆಂದರೆ ಶಸ್ತ್ರಚಿಕಿತ್ಸೆ ಯಶಸ್ವಿ, ರೋಗಿ ಸಾವು ಎಂದು.




## ಆಗಸ್ಟ್ ಸಂಚಿಕೆ

ಆಗಸ್ಟ್ ೨೦೧೦ರ ಸಂಚಿಕೆಯಲ್ಲಿ, 'ಜೀವ ಭಂಜಕ ಜೀತ' ಲೇಖನದಲ್ಲಿ ಜೀತದ ಹಲವಾರು ಮುಖಗಳನ್ನು ಪರಿಚಯಿಸಿ, ಅದರಿಂದಾಗುವ ದುಷ್ಪರಿಣಾಮಗಳ ಬಗ್ಗೆ ವಿವರಿಸಿ, ಇದೊಂದು ಅಮಾನವೀಯ ಹೇಯಕೃತ್ಯವೆಂದು ಬಹು ಉತ್ತಮವಾಗಿ ಚಿತ್ರಿಸಿದ್ದಾರೆ. ಜೀತ ಪದ್ಧತಿಯಲ್ಲಿ ಮನುಷ್ಯನನ್ನು ಪ್ರಾಣಿಗಳಂತೆ ನಡೆಸಿಕೊಳ್ಳುವುದು ಅತ್ಯಂತ ಹೀನ ಕೃತ್ಯ. ಸಮಾಜದಲ್ಲಿ ಮೇಲುವರ್ಗ, ಕೆಳವರ್ಗಗಳ ಅಸ್ತಿತ್ವವನ್ನು ಆರ್ಥಿಕ ಸಮಾನತೆಯಿಂದ ತೊಡೆದುಹಾಕಿ ಜೀತಪದ್ಧತಿಯನ್ನು ನಿರ್ಮೂಲನೆ ಮಾಡಬಹುದೇ ಹೊರತು ಬೇರೆ ಮಾರ್ಗಗಳಿಂದ ಮಾಡಲು ಹಲವು ಶತಮಾನಗಳೇ ಬೇಕಾಗಬಹುದೇನೋ!

ತುಮಕೂರು **ವಾಮನ ರಾವ್**

### ಸೂಕ್ತ ಮುಖಪುಟ

ಎಲ್ಲೆಡೆ ಮಳೆಯಿರುವಾಗ ಬಂದ 'ಹೊಸತು' (ಆಗಸ್ಟ್ ಸಂಚಿಕೆ) ಕೂಡ ಮಳೆಯನ್ನು ಹೊತ್ತುತರಬೇಕೆ ? ಆಲಿಕಲ್ಲುಗಳನ್ನು ಹೆಕ್ಕುತ್ತಿರುವ ದೃಶ್ಯ ನನ್ನನ್ನು ಬಾಲ್ಯಕ್ಕೆ ಎಳೆದೊಯ್ಯಿತು. ಈಗ ಎಲ್ಲೆಡೆ ರೆಫ್ರಿಜರೇಟರ್ ಇರುವುದರಿಂದ ಮಂಜುಗಡ್ಡೆಯ ವಿಶೇಷ ಗೊತ್ತಾಗುವುದಿಲ್ಲ. ಈಗ್ಗೆ ಸುಮಾರು ನಲವತ್ತು-ನಲವತ್ತೈದು ವರ್ಷಗಳ ಹಿಂದೆ ಮುಂಗಾರು ಮಳೆಯೊಡನೆ ಬೀಳುತ್ತಿದ್ದ 'ಆಲಿಕಲ್ಲು'ಗಳು ಆಕರ್ಷಣೆಯ ವಿಷಯವಾಗಿತ್ತು. ಮೈ, ಬಟ್ಟೆ ನೆನೆಯುವುದನ್ನು ಲೆಕ್ಕಿಸದೆ 'ಹೆಕ್ಕುತ್ತಿದ್ದ' ಆಲಿಕಲ್ಲುಗಳು ಎಷ್ಟು ಚೆನ್ನಾಗಿರುತ್ತಿತ್ತು!

ಪಿ. ಎಂ. ರಾಜನ್ ಪರಿಚಯಿಸಿದ ಕಲಾವಿದ ಶಿವಕುಮಾರ್ ಅವರ ಚಿತ್ರಗಳು ಗಮನಾರ್ಹ. ಈ ಅಂಕಣದಲ್ಲಿ ಕಲಾವಿದರ ಕೃತಿಗಳ ಪರಿಚಯ ಅಭಿನಂದನೀಯ!

ದೇಶ ಕಂಡ ಅಪ್ರತಿಮ ರಾಜಕಾರಣಿಗಳ ಪೈಕಿ ಜ್ಯೋತಿ ಬಸು ಒಬ್ಬರು. ಅವರಿಗೆ ಅವರೇ ಸಾಟಿ! ಪರಿಚಯ ಲೇಖನ ಸಂಪಾದಕರ ಲೇಖನಿಯಲ್ಲಿ ಸಮರ್ಥವಾಗಿ ಮೂಡಿಬಂದಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಹೊಸ ಪಿಂಚಣಿ ಕುರಿತು ಚಿಂತನ-ಮಂಥನ

ಪಿಂಚಣಿ ಎಂಬುದು ನೌಕರನು ಹಿಂದೆ ಸಲ್ಲಿಸಿದ ಸೇವೆಗಾಗಿ ನಿಯತಕಾಲಿಕ ವಿಶ್ರಾಂತಿ ವೇತನ. ಸರ್ಕಾರಗಳು ನಿವೃತ್ತಿ ವೇತನವನ್ನು ಪ್ರತಿ ತಿಂಗಳೂ, ಪ್ರತಿ ನೌಕರನಿಗೆ ಜೀವಮಾನದ ಕೊನೆಯ ಘಟ್ಟದ ತನಕ ಸಂದಾಯ ಮಾಡುತ್ತಾ ಬಂದಿವೆ. ಸರ್ಕಾರಿ ನೌಕರರ ಕೆಲಸಕ್ಕೆ ಅದೇ ತರಹದ ಕೆಲಸಕ್ಕೆ ಖಾಸಗಿಯಲ್ಲಿ ದೊರಕುವ ಸಂಬಳಕ್ಕಿಂತ ಕಡಿಮೆ ಇದ್ದು, ಅದೇ ಕಾರಣ ಇದನ್ನು ಸೇವೆ ಎಂದು ಪರಿಗಣಿಸಲಾಗಿದೆ.

ಇತ್ತೀಚೆಗೆ, ಕೇಂದ್ರ ಸರ್ಕಾರವು ಜನವರಿ ೧, ೨೦೦೪ ಮತ್ತು ರಾಜ್ಯ ಸರ್ಕಾರ ಜನವರಿ ೧, ೨೦೦೬ರಿಂದ ಹೊಸದಾಗಿ ನೇಮಕಗೊಂಡ ಎಲ್ಲಾ ಸರ್ಕಾರಿ ನೌಕರರಿಗೆ ಬಹು ಹಿಂದಿನಿಂದ ಬಂದಂತಹ ಪಿಂಚಣಿ ಯೋಜನೆಯನ್ನು ದಿಢೀರನೆ ಕೈಬಿಟ್ಟು 'ದೇಣಿಗೆ ಆಧಾರಿತ ಹೊಸ ಪಿಂಚಣಿ' ಯೋಜನೆಯನ್ನು ಜಾರಿಗೊಳಿಸಿದೆ.

**ಹೊಸ ಪಿಂಚಣಿ ಆದೇಶ**

ಈ ಯೋಜನೆಯ ಪ್ರಕಾರ ಸರ್ಕಾರವು ಪ್ರತಿ ತಿಂಗಳು ನೌಕರರಿಂದ ಒಟ್ಟು ವೇತನದ ಶೇಕಡ ೧೦ರಷ್ಟು ಹಣ ವಸೂಲಿ ಮಾಡಿ, ಅದಕ್ಕೆ ಸಮನಾಗಿ ಆಯಾ ಸರ್ಕಾರವು ಅಷ್ಟೇ ಹಣವನ್ನು ಸೇರಿಸಿ, ಖಾಸಗಿ ಷೇರು ಮಾರುಕಟ್ಟೆಯಲ್ಲಿ ತೊಡಗಿಸಿ, ಅದರಿಂದ ಬಂದ ಲಾಭಾಂಶದಿಂದ ನೌಕರರ ನಿವೃತ್ತಿಯ ನಂತರ ಅವರಿಗೆ ಪಿಂಚಣಿಯನ್ನು




ಕೊಡಲಾಗುತ್ತದೆಯಂತೆ! ಆಕಸ್ಮಾತ್ತಾಗಿ ಷೇರು ಮಾರುಕಟ್ಟೆ ಕುಸಿದರೆ, ಹೂಡಿಕೆದಾರರ ಕಂಪನಿ ದಿವಾಳಿಯಾದರೆ, ನೌಕರರು ತಮ್ಮ ಸೇವಾ ಅವಧಿಯಲ್ಲಿ ಕಷ್ಟಪಟ್ಟು ಸಂಪಾದಿಸಿ ಸಂಗ್ರಹಿಸಿ ಕೊಟ್ಟ ಹಣಕ್ಕೆ ಯಾವುದೇ ಖಚಿತವಾದ ಭರವಸೆ ಇರುವುದಿಲ್ಲ. ತನ್ನದೇ ಹಣವನ್ನು ನೌಕರನು ೬೦ ವರ್ಷ ವಯಸ್ಸಿನವರೆಗೆ ಹಿಂಪಡೆಯುವ ಅವಕಾಶವಿಲ್ಲದೆ, ಯಾವುದೇ ರೀತಿಯ ತೆರಿಗೆ ವಿನಾಯಿತಿ ಇರದೆ, ನೌಕರನ ಹಣವು ಷೇರು ಕಂಪನಿಯು ಆಕಸ್ಮಾತ್ತಾಗಿ ಲಾಭವಾಗಿದ್ದರೆ, ನೌಕರನೂ ಕೋಟ್ಯಧಿಪತಿ ಆಗಬಹುದು. ಇಲ್ಲದಿದ್ದರೆ ಭಿಕ್ಷುಕನಾಗಬಹುದು. ಒಟ್ಟಾರೆ, ನೌಕರನಿಗೆ ನಿವೃತ್ತಿ ನಂತರ ಗಂಡಾಂತರದಲ್ಲಿ ತಳ್ಳುವ ಬಹಳಷ್ಟು ಸೂಚನೆಗಳು ಈ ಆದೇಶದಲ್ಲಿ ಕಂಡುಬರುತ್ತವೆ.

ಈಗಾಗಲೇ ನೈಜೀರಿಯಾ, ಅಮೆರಿಕಾ, ಬ್ರಿಟನ್, ಐರ್ಲೆಂಡ್, ಜಪಾನ್ ಮತ್ತು ಲ್ಯಾಟಿನ್ ಅಮೆರಿಕಾದಂತಹ ದೇಶಗಳಲ್ಲಿ ಪಿಂಚಣಿ ನಿಧಿಯನ್ನು ಷೇರು ಮಾರುಕಟ್ಟೆಯಲ್ಲಿ ಹೂಡಿ ದಿವಾಳಿಯಾಗಿ, ಈ ನೀತಿಯ ವಿರುದ್ಧ ನೌಕರರು ಬೀದಿಗಿಳಿದು ಬೃಹತ್ ಪ್ರಮಾಣದಲ್ಲಿ ಪ್ರತಿಭಟಿಸಿದ್ದಾರೆ. ಹೀಗಾಗಬಾರದು ನಮ್ಮ ದೇಶದ ನೌಕರರ ಸ್ಥಿತಿ.

ನಮ್ಮ ದೇಶದಲ್ಲಿಯೂ ಪ್ರಸ್ತುತ ಹೊಸ ಪಿಂಚಣಿ ಯೋಜನೆಯಲ್ಲಿ ಪಿಂಚಣಿ ಆಯೋಗ ತೊಡಗಿಸಿಕೊಳ್ಳುತ್ತಿರುವ ಷೇರು ಹಾಗೂ ಖಾಸಗಿ ಕಂಪನಿಗಳು ದಿವಾಳಿಯಾಗಿವೆ. ಉದಾಹರಣೆಗೆ, ಸತ್ಯಂ ಕಂಪನಿಯು ದಿವಾಳಿಯಾಗಿದ್ದು ಎಲ್.ಐ.ಸಿ. ಮನಿಬ್ಯಾಕ್ ಪಾಲಿಸಿಯ ಬಾಂಡುಗಳ ಬೆಲೆ ಮೂಲ ಬೆಲೆಗಿಂತ ಇಳಿಮುಖವಾಗಿದೆ. ಯುಟಿಸಿ ಬಾಂಡ್‌ಗಳ ಬೆಲೆ ನೆಲಕಚ್ಚಿದೆ. ಷೇರು ಮಾರುಕಟ್ಟೆಯಂತೂ ತೀವ್ರ ನಿಗಾ ಘಟಕದಲ್ಲಿ ದಾಖಲಾಗಿ ಸಾವು ಬದುಕಿನ ನಡುವೆ ಸೆಣಸಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ. ಪರಿಸ್ಥಿತಿ ಹೀಗಿರುವಾಗ ಸರ್ಕಾರದ ಜೂಜು ವ್ಯವಹಾರದ ಈ ನೂತನ ದೇಣಿಗೆ ಆಧಾರಿತ ಪಿಂಚಣಿಯನ್ನು ಸಮರ್ಥಿಸಿಕೊಳ್ಳುವುದು ಅದೆಷ್ಟು ಸೂಕ್ತ!

ವಾಸ್ತವದಲ್ಲಿ ಮೊಸಳೆಯು ಮೃಷ್ಟಾನ್ನ ಭೋಜನವನ್ನು ಉಣ್ಣಲು ಕೊಡುವೆ ಎಂದು ಸುಳ್ಳು ಹೇಳಿ ಮಂಗನನ್ನು ತಿನ್ನಲು ಹೊಂಚುಹಾಕಿ ನದಿಯೊಳಗೆ ಹೊತ್ತೊಯ್ದಂತೆ, ಈ ಹೊಸ ಪಿಂಚಣಿಯಲ್ಲಿ ಅದೆಷ್ಟು ಸಂಚಕಾರವಿದೆಯೆಂದು ಯಾರು ಬಲ್ಲರು! ಆದ್ದರಿಂದ ನೌಕರರು ಹೊಸ ಪಿಂಚಣಿಯ ಸಾಧಕ-ಬಾಧಕ ತಿಳಿಯುವುದು ಅಷ್ಟೇ ಮುಖ್ಯ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ಕಾರವು ಈ ಹೊಸ ಪಿಂಚಣಿ ನೀತಿ ಜಾರಿಗೊಳಿಸುವ ಮುನ್ನ (ನೌಕರರ) ಪ್ರಜೆಗಳ ಮನ್ನಣೆ ತೆಗೆದುಕೊಳ್ಳಬೇಕಾಗಿತ್ತು. ಆದರೆ, ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿ ಮೇರೆಗೆ ಸರ್ಕಾರವು ಈ ಹೊಸ ನೀತಿಯನ್ನು ತುರ್ತಾಗಿ ಜಾರಿಗೊಳಿಸಿದೆ.

ಕಾರಣವಿಷ್ಟೆ, ಸರ್ಕಾರದ ಹೇಳಿಕೆ ಪ್ರಕಾರ ಹೊಸ ಪಿಂಚಣಿ ಜಾರಿಗೊಳಿಸುವುದರಿಂದ ಸರ್ಕಾರಗಳ ಆರ್ಥಿಕ ಹೊರೆ ಕಡಿಮೆಯಾಗುತ್ತದೆ ಎಂದು. ಇದರ ವ್ಯತಿರಿಕ್ತವಾಗಿ ಹಿಂದಿನ ಹಳೆಯ ಪಿಂಚಣಿ ನೀತಿಯಲ್ಲಿ ನೌಕರರಿಗೆ ಪಿಂಚಣಿ ನೀಡಲು ಸರ್ಕಾರ ಕೂಡಿಡಬೇಕಾಗಿದ್ದ ಮೊತ್ತ ಒಂದು ಅಂದಾಜಿನ ಪ್ರಕಾರ ಅವರ ಮಾಸಿಕ ವೇತನದ ಶೇಕಡ ೧೦ಕ್ಕಿಂತ ಕಡಿಮೆ. ಆದರೆ ನೂತನ ಪಿಂಚಣಿ ಯೋಜನೆಯ ಪ್ರಕಾರ ಪ್ರತಿ ತಿಂಗಳು ನೌಕರನ ಜೊತೆಗೆ ಸಂದಾಯಮಾಡುವ ದೇಣಿಗೆಯು ಅವನ ಮಾಸಿಕ ವೇತನ ಶೇಕಡ ೧೦ರಷ್ಟು. ಅಂದರೆ ಈಗಿರುವ ನೌಕರರು ಭರಿಸುವ ಹಣವೇ ಜಾಸ್ತಿ ಎಂದಾಯ್ತು. ಅಂದಮೇಲೆ ಸರ್ಕಾರದ ಬೊಕ್ಕಸದ ಮೇಲೆ ಆರ್ಥಿಕ ಹೊರೆ ಕಡಿಮೆ ಹೇಗಾಗುತ್ತದೆ? ಹಾಗಾದರೆ ಯಾರ ಹಿತಾಸಕ್ತಿಗಾಗಿ ಸಮಸ್ತ ನೌಕರರ ಹಾಗೂ ಸಾರ್ವಜನಿಕ ಬೊಕ್ಕಸದ ಹಣವನ್ನು ಪಿಂಚಣಿ ರೂಪದಲ್ಲಿ ಪ್ರತಿ ತಿಂಗಳು ಷೇರುಮಾರುಕಟ್ಟೆಗೆ ದೂಡುತ್ತದೆ?

ನೌಕರನ ಪಾಲಿನ ಒಂದು ಭಾಗವನ್ನು ಸರ್ಕಾರೀ ಕ್ಷೇತ್ರದ ಕಡಿಮೆ ಬಡ್ಡಿಯ ರಕ್ಷಿತ ಠೇವಣಿಯಲ್ಲಿ ಇಡುವುದು; ಮಿಕ್ಕಭಾಗವನ್ನು ಅವರ ಆಯ್ಕೆಗೆ ನೀಡುವ ಷೇರುಗಳ ಪಟ್ಟಿಯಲ್ಲಿ, ನೌಕರನ ತೀರ್ಮಾನದಂತೆ ಹೂಡುವುದು ಈ ಕಾರ್ಯವಿಧಾನ. ಷೇರುಮಾರುಕಟ್ಟೆಯ ವ್ಯವಹಾರ ಅರಿಯದ ನೌಕರನನ್ನೇ ಅವನ ತೀರ್ಮಾನಗಳಿಗೆ ಹೊಣೆ ಮಾಡುವ ತಂತ್ರವೂ ಇದರಲ್ಲಿ ಅಡಗಿದೆ.

ಸರ್ಕಾರವು, ''ಪಿಂಚಣಿ ಸಂದಾಯ ಮಾಡಬೇಕಾದದ್ದು ಸರ್ಕಾರಿ ನೌಕರರಿಗೆ ನ್ಯಾಯೋಚಿತ ಹಕ್ಕು ಎಂದು ಈ ಕುರಿತಾಗಿ ಸರ್ವೋಚ್ಚ ನ್ಯಾಯಾಲಯವು ೧೯೮೩ರಲ್ಲಿ ಶ್ರೀ ಡಿ. ಎಸ್. ನಕಾರ್ ಮತ್ತಿತರರು ಮತ್ತು ಭಾರತ ಸರ್ಕಾರದ ನಡುವಿನ ಪ್ರಕರಣದಲ್ಲಿ ಪಿಂಚಣಿ ಎಂಬುದು ಮಾಲೀಕನ ಮರ್ಜಿಯಾಗಲಿ, ದಯಾ ಭಿಕ್ಷೆ ಅಥವಾ ದಾನವಾಗಲಿ ಅಲ್ಲ, ಬದಲಿಗೆ ಅದು ನೌಕರನು ತನ್ನ ತಾರುಣ್ಯದಲ್ಲಿ ನಿರಂತರವಾಗಿ ಸಲ್ಲಿಸಿದ ಸೇವೆಗೆ ತಾನೇ ಗಳಿಸಿದ ವೇತನವಾಗಿದೆ. ನಿವೃತ್ತ ನೌಕರರು, ಸ್ವಾವಲಂಬನೆ ಮತ್ತು ಆತ್ಮಗೌರವದಿಂದ ನಿವೃತ್ತಿಪೂರ್ವ ಜೀವನದ ಮಟ್ಟದಲ್ಲಿ ಬದುಕಲು ಸಾಧ್ಯವಾಗುವಂತೆ ಪಿಂಚಣಿ ವೇತನ ಇರಬೇಕು'' ಎಂದು ಹೇಳಿದೆ. ಪಿಂಚಣಿಯು ಮುಂದೂಡಿದ ಸಂಬಳದ ಭಾಗವೇ ಎಂಬುದೂ ಸಿದ್ಧಾಂತವಾಗಿದೆ.

ಆದ್ದರಿಂದ ಸರಕಾರಿ ನೌಕರರಿಗೆ ಪಿಂಚಣಿ ಕೊಡಲು ಸರ್ಕಾರಕ್ಕೆ ಹೊರೆಯಾಗುತ್ತದೆ ಎನ್ನುವುದು ಒಂದು ಪಿಳ್ಳೆನೆವ. ಇನ್ನೊಂದೆಡೆ, ಸರ್ಕಾರಗಳ ದುಂದುವೆಚ್ಚ, ಪಾರ್ಥೇನಿಯಂನಂತೆ ಹರಡಿರುವ ಭ್ರಷ್ಟಾಚಾರ, ದೊಡ್ಡ ದೊಡ್ಡ ಕಾರ್ಪೊರೇಟ್ ಸಂಸ್ಥೆಗಳಿಗೆ ಕಡಿವಾಣವಿಲ್ಲದ ರಿಯಾಯಿತಿ ಇವುಗಳಿಗೆಲ್ಲಾ ಕಡಿವಾಣ ಹಾಕಿದರೆ, ಒಟ್ಟಾರೆ ಸರ್ಕಾರದ ಒಲವು ಜನ ಹಿತಾಸಕ್ತಿಯ ಪರವಿದ್ದರೆ, ಸಮಾಜಕ್ಕಾಗಿ ದುಡಿಯುವಂಥ ನೌಕರರಿಗೆ ಹತ್ತು ಹಲವು ಕಲ್ಯಾಣ ಯೋಜನೆಗಳೊಂದಿಗೆ ಮಾಸಿಕ ಪಿಂಚಣಿಯನ್ನು ಕೊಡಲು ಸಾಧ್ಯವಿದೆ. ಈ ದಿಶೆಯಲ್ಲಿ ಸರ್ಕಾರ ಚಿಂತನ ಮಾಡಲಿ.

*ಬಿಜಾಪುರ* **ಲಲಿತಾ ಬಿಜ್ಜರಗಿ**

### ಜ್ಯೋತಿ ಬಸು ಎಂಬ ವಿಸ್ಮಯ

ಜ್ಯೋತಿ ಬಸು ಅವರ 'ಅಧಿಕೃತ' ಜೀವನ ಚರಿತ್ರೆಗೆ 'ಭಕ್ತಿ'ಯಿಂದ ಬರೆದ ಶ್ರೀ ಬರಗೂರು ರಾಮಚಂದ್ರಪ್ಪ ಅವರ ಮುನ್ನುಡಿ ಹಾಗೂ ಜಿ.ಆರ್. ಅವರಿಗೆ ಉಂಟಾದ 'ವಿಸ್ಮಯ' ಎರಡನ್ನೂ ಓದಿದ ನಂತರ ಒಂದೆರಡು ವಿಷಯಗಳನ್ನು ತಕ್ಷಣಕ್ಕೆ ಹೇಳಲೇಬೇಕೆಂಬ ಒತ್ತಾಯ ಉಂಟಾಗಿದೆ. ನಾನು ಈ ಅಧಿಕೃತ ಜೀವನ ಚರಿತ್ರೆಯನ್ನು ಇನ್ನೂ ಓದಿಲ್ಲ. ಅನಧಿಕೃತವೆನ್ನಬಹುದಾದ, ವಿಪುಲವಾದ ಮಾಧ್ಯಮದ ಮೂಲಕ ಮಾಹಿತಿಗಳನ್ನು ಗಮನಿಸಿದ್ದೇನೆ. ಅವರ ಸಮಕಾಲೀನನಾಗಿಯೂ ತಿಳಿದಿದ್ದೇನೆ. ಅವರ ಪಕ್ಷದ ಯುವ ಕಾರ್ಯಕರ್ತರು ಇತರರು ನಡೆಸುವ ಸಾಮಾಜಿಕ ಕಾರ್ಯಕ್ರಮಗಳಲ್ಲೂ ಅಧಿಕೃತ ಅಪ್ಪಣೆ ಪಡೆಯದೇ ಹೋಗಲಾರದ ಪರಿಸ್ಥಿತಿ ನನಗಿಲ್ಲ. ಮಾರ್ಕ್ಸ್‌ವಾದದ ಬಗ್ಗೆ ಯಾವೊಂದು ರಾಜಿಗೂ ಒಗ್ಗದ ಹೊರತು ಕಮ್ಯುನಿಸ್ಟನಾಗಿ ಈ ಅನಿಸಿಕೆಯನ್ನು ಹಂಚಿಕೊಳ್ಳುತ್ತಿರುವ ಮಾರ್ಕ್ಸ್‌ವಾದಿಗಳು ಯಾವುದೇ ಕಮ್ಯುನಿಸ್ಟ್ ಬಣದಲ್ಲಿ ಇದ್ದರೂ ಅವರ ಬಗ್ಗೆ ನನಗೆ ಆದರವಿದೆ. ಅಂಥ ಇಪ್ಪತ್ತಕ್ಕೂ ಹೆಚ್ಚು ಬಣಗಳಿವೆಯಂತೆ ಈಗ! ಒಂದಿದ್ದದ್ದು ಎರಡಾದುದು ಮೊದಲಿಗೆ ಸಿಪಿಐ (ಎಂ) ಹುಟ್ಟಿಕೊಂಡಾಗ. 'ಎಂ' ಅಂದರೆ ಮಾವೋವಾದಿ ಎಂದು ಬಹಿರಂಗವಾಗಿ ಹೇಳಿಕೊಳ್ಳಲಾರದ ಸಂದರ್ಭ ಅದು. ಮುಂದೆ ಬಂದ ಬಣಗಳೆಲ್ಲಾ ಅದರ ಕವಲುಗಳು. ಅದರ ಬಹುಮುಖ್ಯ ಕವಲು 'ಮಾವೋವಾದಿ'. ಈಗ ಬೂರ್ಷ್ವಾ ವ್ಯವಸ್ಥೆಯನ್ನು ಎದುರಿಸಲೂ ಸಮಯವಿಲ್ಲದೆ, ಅದೇ 'ಮಾವೋವಾದಿ'ಯೊಡನೆ ಅಂತಿಮ ಹೋರಾಟವನ್ನು ನಡೆಸುವ ಪರಿಸ್ಥಿತಿಗೆ ಬಂದಿರುವುದು ಚೋದ್ಯವಾದರೂ ಶೋಚನೀಯ. ನಾನು ಅಭ್ಯಾಸ ಮಾಡಿದ ಮಾರ್ಕ್ಸ್‌ವಾದಿ ಕೃತಿಗಳಲ್ಲಿ ಎಲ್ಲಿಯೂ ಪಕ್ಷ ಒಡೆಯುವುದನ್ನು ಹೋರಾಟವೆಂದು ಹೇಳಿದ್ದನ್ನು ಕಾಣೆ. ಸೈದ್ಧಾಂತಿಕ ಹೋರಾಟಗಳು ಕಾರ್ಮಿಕ ಸಂಘಗಳನ್ನು, ಸಾಂಸ್ಕೃತಿಕ ಸಂಸ್ಥೆಗಳನ್ನು, ಚಳುವಳಿಗಳನ್ನು ಒಡೆಯುವ ಅಗತ್ಯವೇನಿಲ್ಲ. ಡಾಂಗೆಯವರ ಪ್ರಸಂಗ ನೆಪವಾಗಿತ್ತೇ ವಿನಾ, ಪಕ್ಷ ಒಡೆದಿದ್ದು ಮಾವೋ ಚಿತಾವಣೆಯಿಂದಲೇ ವಿನಾ ಆಂತರಿಕವಾಗಿ ಇದ್ದ ವಾಸ್ತವತೆಗಳ ಆಧಾರದ ಮೇಲೆ ಅಲ್ಲ. ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಬೌದ್ಧಿಕ ಕಸರತ್ತಿನಲ್ಲಿ ತೀರ್ಮಾನವಾಗದಾಗ, ಚಳುವಳಿಗಳ ಅನುಭವದಲ್ಲಿ ಪರಿಹಾರವಾಗುತ್ತವೆ; ಮಾರ್ಕ್ಸ್‌ವಾದೀ ಚರ್ಚೆಗಳೊಳಗಿನ ವೈರುದ್ಧ್ಯಗಳು ಅಪರಿಹಾರ್ಯ ದ್ವಂದ್ವಗಳಲ್ಲಿವೆ ಎಂಬುದು ಮಾರ್ಕ್ಸ್‌ವಾದದ ಪ್ರಥಮ ಪಾಠ. ಇದಕ್ಕೆ ಕಾಲ ಮಾಗಲಿ ಎಂದು ಕಾಯದೆ ಪಕ್ಷ ಒಡೆಯಲು ಮುಂದಾದರೆ ಅವರು ಮಾರ್ಕ್ಸ್‌ವಾದಿಗಳಾಗುವುದಿಲ್ಲ, ಅವಕಾಶವಾದಿಗಳಾಗುತ್ತಾರೆ.

ಮಾರ್ಕ್ಸ್‌ವಾದೀ ಹಾದಿಯಲ್ಲಿ ಸಾಮಾಜಿಕ ಕ್ರಾಂತಿಯನ್ನು ಸಂಘಟಿಸಲು ಪಕ್ಷ ಒಂದು ಸಾಧನೆಯಷ್ಟೆ. ಈ ಪಕ್ಷದ ಸಂರಚನೆಯ ಮಾದರಿ ಅದಕ್ಕೆ ಬಾಧಕವಾದರೆ, ಆಗ ಹೊಸ ರೂಪದ ಪಕ್ಷವನ್ನೇ ಸ್ಥಾಪಿಸಿಕೊಳ್ಳಬೇಕಾಗುತ್ತದೆ. ಹರಿದುಹಂಚಿಹೋಗಿರುವ ಎಡಪಕ್ಷಗಳು ಈಗಲಾದರೂ ಒಂದೇ ವೇದಿಕೆಯಲ್ಲಿ ರಾಜಕೀಯ ನಡೆಸಲು ಮುಂದಾಗದಿದ್ದರೆ ಬರುವ ಚುನಾವಣೆಯಲ್ಲಿ ತಮ್ಮ ಮಾನ್ಯತೆಯನ್ನು ಕಳೆದುಕೊಳ್ಳುವ ಅಪಾಯದಿಂದ ಹೊರಬರಲು ಸಾಧ್ಯವಾಗದು. ಚಿದಂಬರಂ ಅವರದು ಅದೇ ಎಣಿಕೆ. ಇನ್ನು ಮೂರು ವರ್ಷಗಳಲ್ಲಿ ನಕ್ಸಲರನ್ನು ಮಟ್ಟಹಾಕುತ್ತೇನೆ ಅನ್ನುವಾಗ ಈ ಲೆಕ್ಕಾಚಾರವೂ ಇದೆ. ನಕ್ಸಲರೂ ಸೇರಿ ಎಲ್ಲ ಎಡಪಂಥೀಯ ಒಲವಿನವರು ರಾಜಕೀಯವಾಗಿ ಐಕ್ಯತೆಯ ಕಾರ್ಯ ನಿರೂಪಿಸಿಕೊಳ್ಳಲು ಇದು ತಕ್ಕ ಸಮಯ. ತಕ್ಕ ಸಮಯ ಏಕೆಂದರೆ ಬಸು ಅವರ ನಿರ್ಗಮನದೊಡನೆ ಅಂದಿನ ಮೊದಲ ತಲೆಮಾರಿನ ನಾಯಕರೆಲ್ಲಾ ಹಿಂದೆ ಸರಿದಂತಾಗಿದೆ. ಹೊಸ ಹಾಳೆ, ಹೊಸ ಲೆಕ್ಕ ಬರೆಯೋಣ. ಜಿ.ಆರ್. ಇದನ್ನೇ ಹೇಳಿದ್ದಾರೆ ಎನಿಸುತ್ತದೆ ನನಗೆ.

*ಬೆಂಗಳೂರು* **ಕೆ. ಎಸ್. ಪಾರ್ಥಸಾರಥಿ**

### 'ಕವಲು' – ಒಂದು ಪ್ರತಿಕ್ರಿಯೆ

ವಿದ್ಯೆ ಕಲಿತ ಹೆಂಗಸರ ಬಗೆಗೆ, ಅದರಲ್ಲೂ ಆಧುನಿಕ ಶಿಕ್ಷಣ ಪಡೆದವರ ಬಗೆಗೆ ಡಾ|| ಭೈರಪ್ಪನವರಿಗೆ ಅದೇಕೋ ಭಾರಿ ಗುಮಾನಿ ಇರುವಂತಿದೆ. ಇಂತಹವರು ತಮ್ಮನ್ನು ನಂಬಿದವರನ್ನೂ ಹಾಳುಮಾಡಿ, ತಾವೂ ಹಾಳಾಗುತ್ತಾರೆ – ಎಂದು ಅವರ ಹಲವು ಕಾದಂಬರಿಗಳು ಪ್ರತಿಪಾದಿಸುತ್ತವೆ. ಉದಾಹರಣೆಗೆ, 'ವಂಶವೃಕ್ಷ' ಕಾದಂಬರಿಯ ಕಾತ್ಯಾಯನಿಯು ತಾರುಣ್ಯದಲ್ಲಿಯೆ ವಿಧವೆಯಾದ ಮೇಲೆ, ತನ್ನ ಅತ್ತೆಯ ಇಚ್ಛೆಯಂತೆ ತಲೆ ಬೋಳಿಸಿಕೊಂಡು, ಕೆಂಪು ಸೀರೆಯುಟ್ಟು ಮಡಿ ಹಿಡಿಯದೆ ಅಥವಾ ಮಾವನವರ ಉಪದೇಶದಂತೆ ಉಪನಿಷತ್ತು, ಭಗವದ್ಗೀತೆಗಳ ಅಧ್ಯಯನದಲ್ಲೂ ತೊಡಗದೆ ಕಾಲೇಜು ಸೇರಿ ಇಂಗ್ಲಿಷ್ ವಿದ್ಯೆ ಕಲಿಯುತ್ತಾಳೆ. ಆಮೇಲೆ ತನ್ನ ಬದುಕಿನ ಬಗ್ಗೆ ನಿರ್ಧಾರವನ್ನು ತಾನೇ ತೆಗೆದುಕೊಂಡು ಪುನಃ ಮದುವೆಯಾಗುತ್ತಾಳೆ. ಅತ್ತೆ-ಮಾವಂದಿರ ಕೋಪ ತಾಪ, ಶಾಪಗಳಿಗೆ ಗುರಿಯಾಗುತ್ತಾಳೆ; ಅವಳ ಬದುಕು ದುರಂತವಾಗುತ್ತದೆ. ಈ ಸಂದರ್ಭದಲ್ಲಿ ಅವಳು ಕುಟುಂಬದ ಹಿರಿಯರು ಪ್ರತಿನಿಧಿಸುವ, ಪರಂಪರಾಗತ ಯಜಮಾನ ಪ್ರಧಾನ (ಫ್ಯೂಡಲ್) ಕುಟುಂಬ ವ್ಯವಸ್ಥೆಗೆ ಹೊಂದಿಕೊಳ್ಳುವುದಿಲ್ಲ – ಎಂಬುದಷ್ಟೇ ಆಕೆಯ ದುರಂತಕ್ಕೆ ಪ್ರಮುಖ ಕಾರಣವೆನ್ನುವಂತೆ ತೋರಿಸಲಾಗಿದೆ. ಆದರೆ, ಕಾತ್ಯಾಯನಿಯು ಮರುವಿವಾಹವಾಗುವುದನ್ನು ತಮ್ಮವಾದ ಚಾತುರ್ಯದಿಂದ ವಿರೋಧಿಸುವ ಶ್ರೋತ್ರಿಯರ ಹಟಮಾರಿತನ, ಕಾತ್ಯಾಯನಿಯ ಮಗನನ್ನೂ 'ತಾಯಿಯಿಂದ ಕಿತ್ತುಕೊಳ್ಳುವ', 'ಸನಾತನ ಧರ್ಮವನ್ನೂ ಬದುಕುತ್ತಿದ್ದ' ಶ್ರೋತ್ರಿಯರ ಕ್ರೌರ್ಯ, ಕಾಠಿಣ್ಯಗಳನ್ನೂ ಹಿನ್ನೆಲೆಗೆ ಸರಿಸಿ, ಅವರ ಪಾತ್ರವನ್ನೂ ವೈಭವೀಕರಿಸಲಾಗಿದೆ.

ಡಾ|| ಭೈರಪ್ಪನವರ ಇತ್ತೀಚಿನ ಕೃತಿ 'ಕವಲು' ಕಾದಂಬರಿಯಲ್ಲಿ ಸ್ತ್ರೀಯರ ವಿದ್ಯಾಭ್ಯಾಸ ಮತ್ತು ಮಹಿಳಾಪರ ಕಾನೂನುಗಳ ಬಗೆಗೆ ಕಾದಂಬರಿಕಾರರಿಗೆ ಎಷ್ಟೊಂದು ಅಸಹನೆಯಿದೆಯೆಂಬುದನ್ನು ಡಾ|| ಸುಮಿತ್ರಾ ಬಾಯಿಯವರು ತಮ್ಮ ಲೇಖನದಲ್ಲಿ ಬಹು ಸಮರ್ಥವಾಗಿ ಅನಾವರಣಗೊಳಿಸಿದ್ದಾರೆ.

ಮಹಿಳೆಯರಿಗೆ (ಸುಶಿಕ್ಷಿತರಿಗೆ ಕೂಡ) ಉಂಟಾಗುವ ಕಿರುಕುಳವನ್ನು ಕೆಲವು ಮಟ್ಟಿಗಾದರೂ ಕಡಿಮೆ ಮಾಡುವ ದೃಷ್ಟಿಯಿಂದ ಮಾಡಿರುವ ಈ ಕಾನೂನಿನ ದುರುಪಯೋಗ ಆಗಿಲ್ಲವೆಂದಾಗಲಿ, ಕಾನೂನಿನ ಮೂಲಕ ಸ್ತ್ರೀ ಶೋಷಣೆಯನ್ನು ತಪ್ಪಿಸಬಹುದೆಂದಾಗಲಿ ಯಾರೂ ವಾದಿಸಲಾರರು. ಆದರೆ ತಮ್ಮ ಕೃತಿ ರಚನೆಯ ಅನುಕೂಲಕ್ಕೆ ತಕ್ಕಂತೆ ಒಂದೆರಡು ಸಂದರ್ಭಗಳನ್ನು ಆರಿಸಿಕೊಂಡು (ಅಥವಾ ಕಲ್ಪಿಸಿಕೊಂಡು), ಅದನ್ನೇ ಸಾರ್ವತ್ರೀಕರಣಗೊಳಿಸಿ ಹೆಂಗಸರು (ಗಂಡಸರೂ ಕೂಡ) ಓದಕೂಡದು ಎಂಬ ನಂಜುಂಡೇಗೌಡನ ಮಾತು ತಮಾಷೆಯಾಗಿ ಕಂಡರೂ ಕಾದಂಬರಿಯಲ್ಲಿ ಪ್ರಗತಿಗಾಮಿಗಳಾದ ಮಹಿಳೆಯರ ಬಗೆಗೆ ವ್ಯಕ್ತವಾಗಿರುವ ಅಸಹನೆಯನ್ನು ಅಲಕ್ಷಿಸುವಂತಿಲ್ಲ.

ವಿಚಾರಗೋಷ್ಠಿಯೊಂದರಲ್ಲಿ ಡಾ|| ಭೈರಪ್ಪನವರು ಸದ್ಯದ ಮಹಿಳಾಪರವಾದ ಕಾನೂನು ಮತ್ತು ಅದನ್ನು ಆಧರಿಸಿದ ನ್ಯಾಯಾಲಯದ ತೀರ್ಪುಗಳು ಕೂಡ ಅಸಮರ್ಪಕವಾಗಿವೆ; ಆದ್ದರಿಂದ ಧರ್ಮಶಾಸ್ತ್ರವನ್ನು ಆಧರಿಸಿ ನ್ಯಾಯದಾನಮಾಡುವ ನೂತನ ವ್ಯವಸ್ಥೆ ಅಸ್ತಿತ್ವಕ್ಕೆ ಬರಬೇಕೆಂದು ಪ್ರವಚಿಸಿದ್ದಾರೆ! ಯಾವ ಧರ್ಮಶಾಸ್ತ್ರ? ಕುಲನಾರಿಯ ''ಕಾರ್ಯೇಷು ದಾಸೀ.... ಶಯನೇಷು

ವೇಶ್ಯಾ...'' ಎಂದು ವಿಧಿಸುವ ಹಿಂದೂಧರ್ಮಶಾಸ್ತ್ರ (ಮನುಧರ್ಮಶಾಸ್ತ್ರ?)ವನ್ನೇ – ಎಂಬ ಪ್ರಶ್ನೆಯನ್ನು ವಿಮರ್ಶಕರು ಕೇಳಬೇಕಾಗುತ್ತದೆ.

ಕಡೆಯದಾಗಿ ಒಂದು ಮಾತು; ಡಾ॥ ಭೈರಪ್ಪನವರು ತಮ್ಮ ಕಾದಂಬರಿಯ ವಸ್ತುವಿನ್ಯಾಸವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ''ಇದೇ ಇಡೀ ಭಾರತೀಯ ಸಮಾಜದ ಸತ್ಯವೆಂದು ಹೇಳುವುದು ಭೋಳೆತನವಷ್ಟೇ ಹೊರತು ಬೇರೆ ಅಲ್ಲ'' – ಎಂದಿದ್ದಾರೆ ಡಾ॥ ಸುಮಿತ್ರಾಬಾಯಿಯವರು. ಭೋಳೆತನ (ಹಳಗನ್ನಡ ಬೋಟೆ...) ಎಂದರೆ ಮುಗ್ಧತೆ, ಸರಳತೆ ಎಂಬ ಅರ್ಥ ಬರುತ್ತೆ. ಡಾ॥ ಭೈರಪ್ಪನವರು ಸಿದ್ಧಾಂತಬದ್ಧರಾಗಿ, ಸಂಕಲ್ಪ ಪೂರ್ವಕವಾಗಿ ಬರವಣಿಗೆಯಲ್ಲಿ ತೊಡಗುವುದರಿಂದ ಇಲ್ಲಿನ ಪ್ರತಿಪಾದನೆಯನ್ನು ಭೋಳೆತನ ಎನ್ನುವುದು ಸಮಂಜಸವಾಗಲಾರದು.

*ಬೆಂಗಳೂರು* **ಕೆ. ಎಲ್. ಗೋಪಾಲಕೃಷ್ಣಯ್ಯ**

ಆಗಸ್ಟ್ ೨೦೧೦ರ 'ಹೊಸತು'ವಿನಲ್ಲಿ ಪ್ರಕಟವಾದ, ಡಾ॥ ಸುಮಿತ್ರಾಬಾಯಿಯವರು 'ಕವಲು' ಕಾದಂಬರಿಯ ಬಗ್ಗೆ ಬರೆದ ಲೇಖನಕ್ಕೆ ಪೂರಕವಾಗಿ ಈ ಪ್ರತಿಕ್ರಿಯೆ.

ಕರ್ನಾಟಕದ ಪ್ರತಿಗಾಮಿ ಚಿಂತಕ ಮತ್ತು ಅದೇ ಕಾರಣಕ್ಕೆ ಹೆಸರಾಂತ ಲೇಖಕರಾದ ಭೈರಪ್ಪನವರು ಈಗಾಗಲೇ 'ಆವರಣ'ದಲ್ಲಿ ಮುಸ್ಲಿಮರ ಬಗೆಗಿನ ತಮ್ಮ ಅಸಹನೆಯನ್ನು ಅನಾವರಣಗೊಳಿಸಿದ್ದಾರೆ. ಈಗ ಆಧುನಿಕತೆ, ಆಧುನಿಕ ಮಹಿಳೆಯರ ಸರದಿ. ಆಧುನಿಕರೆಂದು ಭೈರಪ್ಪನವರು ಚಿತ್ರಿಸುವ ಮಹಿಳೆಯರ ಪೋಷಾಕಿನಿಂದ ಹಿಡಿದು ಅವರ ನಡತೆಯವರೆಗೂ ಎಲ್ಲವೂ ಕೆಟ್ಟದ್ದು ಎಂದು ತೀರ್ಮಾನಿಸುವ ಪುರುಷಾಹಂಕಾರ ಈ ಕಾದಂಬರಿಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಜತೆಗೆ, ಮಹಿಳಾ ವಿಮೋಚನೆಯ ಚಿಂತನೆಯೇ ಭಾರತ ನಾರಿಯರನ್ನು ದಿಕ್ಕು ತಪ್ಪಿಸುತ್ತದೆ ಎಂಬ ಯೋಚನೆ.

ಮಹಿಳಾಪರವಾದ ಕಾನೂನುಗಳು ಯಾವುದೇ ಸಮಾಜದಲ್ಲಿ ತಮ್ಮಷ್ಟಕ್ಕೆ ತಾವು ಅಸ್ತಿತ್ವಕ್ಕೆ ಬಂದದ್ದಲ್ಲ. ದೀರ್ಘಕಾಲದ ಹೋರಾಟಗಳ ಪರಿಣಾಮವಾಗಿಯೇ ಅವು ಕನಿಷ್ಠಪಕ್ಷ ಗ್ರಂಥಸ್ಥವಾದುವು ಎನ್ನುವ ಸತ್ಯ ವಿದ್ವಾಂಸರೂ, ಸಂಶೋಧಕರೂ ಆದ ಭೈರಪ್ಪನವರಿಗೆ ತಿಳಿಯದ ವಿಷಯವಾಗಿರಲು ಸಾಧ್ಯವೇ ಇಲ್ಲ. ಆದರೂ ಆ ವಿಷಯವನ್ನು ಮರೆಮಾಚಿ, ಆಗೊಮ್ಮೆ ಈಗೊಮ್ಮೆ ಪ್ರಕಟವಾಗುವ ಅಂಥ ಕಾನೂನುಗಳ ದುರುಪಯೋಗವನ್ನೇ ದೊಡ್ಡದು ಮಾಡಿ ತಮ್ಮ ಬರಹದ ಮೂಲಕ ಮಹಿಳಾಪರ ಕಾನೂನುಗಳ, ಮಹಿಳಾ ವಿಮೋಚನಾ ಚಳುವಳಿಯ ವಿರುದ್ಧವೇ ಸಮರ ಸಾರಿದ್ದಾರೆ.

ಮಹಿಳೆ ಎಷ್ಟೇ ಆಧುನಿಕಳಾದರೂ, ಗಂಡಸಿಗೆ ಸಮಾನವಾಗಿ ಸಮಾಜದಲ್ಲಿ ವಿವಿಧ ಸ್ಥಾನಗಳಲ್ಲಿ ಸ್ಥಾನ ಪಡೆದಿದ್ದರೂ ಕಾದಂಬರಿಕಾರರಿಗೆ ಮುಖ್ಯವಾಗುವುದು ಅಂಥ ಮಹಿಳೆಯ ದೇಹ ರಚನೆಯೇ. 'ಕವಲು' ಕಾದಂಬರಿಯಲ್ಲಿ ಸೃಷ್ಟಿಯಾಗಿರುವ ಮಹಿಳಾ ಪೊಲೀಸ್ ಅಧಿಕಾರಿಯ ಚಿತ್ರಣ ಇದಕ್ಕೊಂದು ಸೂಕ್ತ ಉದಾಹರಣೆ. ಹಣೆಯಲ್ಲಿ ಕುಂಕುಮವಿಲ್ಲದಿದ್ದರೆ 'ಅವಳು ತುರುಕರವಳೊ', 'ಕಿರಸ್ತಾನದವಳೋ', ವಿಧವೆಯೋ, ಒಟ್ಟಿನಲ್ಲಿ ಆ ಮುಖದಲ್ಲಿ ಲೇಖಕರಿಗೆ ಬರೀ ಸೂತಕದ ಛಾಯೆಯೇ ಕಾಣುತ್ತದೆ. ಮಹಿಳೆ ಹೇಗೆ ಕಾಣಬೇಕೆಂಬುದನ್ನು ಸಂಪ್ರದಾಯ ಈಗಾಗಲೇ ನಿರ್ಧರಿಸಿದೆ ಎಂಬುದನ್ನು ಒಪ್ಪುವ ಭೈರಪ್ಪನವರನ್ನು ಮಹಾನ್ ಪ್ರತಿಗಾಮಿ ಎಂದಲ್ಲದೆ ಮತ್ತೇನೆನ್ನಬೇಕು ?

ಮುಸಲ್ಮಾನರ ನಂತರ, 'ಆಧುನಿಕ' ಮಹಿಳಾಪರ ಕಾನೂನುಗಳು, ಆಧುನಿಕ ಮಹಿಳೆಯರು ಭೈರಪ್ಪನವರ ಗುರಿಯಾದರು. ಆಧುನಿಕ ಭಾರತದಲ್ಲಿ ದಲಿತಪರ ಕಾನೂನುಗಳೂ, ಮುಖ್ಯವಾಗಿ ಅಸ್ಪೃಶ್ಯತೆಯ ವಿರುದ್ಧದ ನಿಯಮಗಳು ಜಾರಿಗೆ ಬಂದಿದ್ದು ಅವುಗಳಿಂದಾಗಿ ದಲಿತರ ಸ್ಥಿತಿ, ಎಲ್ಲ ರೀತಿಯಲ್ಲಿ ಅಲ್ಲದಿದ್ದರೂ ಸ್ವಲ್ಪಮಟ್ಟಿಗೆ ಸುಧಾರಿಸಿದೆ ಎನ್ನಬಹುದು. ಆದರೆ ಈ ಕಾನೂನುಗಳೂ ಎಲ್ಲೋ ಕೆಲವು ಕಡೆ ದುರುಪಯೋಗಗೊಂಡಿದ್ದು, ವರದಕ್ಷಿಣೆಯ ವಿರುದ್ಧದ ಕಾನೂನುಗಳ ರೀತಿಯಲ್ಲಿ – ಅದರಿಂದಾಗಿ ಮೇಲ್ಜಾತಿಯವರಿಗೆ ಉಂಟಾಗುವ 'ಮಹಾನ್ ಯಾತನೆ'ಯೂ ಸಂಶೋಧಕರಾದ ಭೈರಪ್ಪನವರ ದೃಷ್ಟಿಗೆ ಬಾರದಿರದು. ಮುಂದಿನ ದಿನಗಳಲ್ಲಿ ಅವರ ಲೇಖನಿಯಿಂದ ಈ ಕಾನೂನುಗಳನ್ನೂ ವಿರೋಧಿಸುವ ಮತ್ತೊಂದು ಕಾದಂಬರಿ ಹೊರಬಂದು, ಅದು ಮಾರಾಟದ ದಾಖಲೆಯಲ್ಲಿ 'ಆವರಣ', 'ಕವಲು'ಗಳನ್ನು ಮೀರಿಸುವ ಎಲ್ಲ ಸಾಧ್ಯತೆಗಳೂ ಈ ಸಮಾಜದಲ್ಲಿ ಲಭ್ಯವಿವೆ. ತಾಳ್ಮೆಯಿಂದ ಕಾಯೋಣ.

*ಬೆಂಗಳೂರು* **ನಗರಗೆರೆ ರಮೇಶ್**

---

*ಸಂಪಾದಕೀಯ (೫ನೇ ಪುಟದಿಂದ)*

ಪ್ರಾಥಮಿಕ ಹಂತದಲ್ಲೇ ವಿದ್ಯಾರ್ಥಿಗಳ ಬೌದ್ಧಿಕ ವಿಕಾಸಕ್ಕೆ ಸೂಕ್ತ ಅವಕಾಶಗಳನ್ನು ಕಲ್ಪಿಸುವುದು; ಹೆಚ್ಚಿನ ಸಂಖ್ಯೆಯಲ್ಲಿ ಸಮರ್ಥ ಶಿಕ್ಷಕರ ನೇಮಕ; ಬೋಧನಾ ವಿಧಾನ ಮತ್ತು ಸಂಶೋಧನೆಗಳು, ಆಧುನೀಕರಣ; ಈ ನೆಲದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತಿತರ ಅಭಿವೃದ್ಧಿ ಸಂಬಂಧಿತ ಅಗತ್ಯತೆಗಳನ್ನು ನೇರವಾಗಿ ಚರ್ಚಿಸುವ ಪಠ್ಯಕ್ರಮ – ಇವು ಒಳ್ಳೆಯ ಗುಣಮಟ್ಟದ ಉನ್ನತ ಶಿಕ್ಷಣಕ್ಕೆ ಬುನಾದಿಯಾಗಬಲ್ಲುವು.

ಆದ್ದರಿಂದ ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ಇಲ್ಲಿ ನೆಲೆಯೂರಲು ಅವಕಾಶ ನೀಡುವುದರ ಬದಲು (ಅಮೆರಿಕಾವೂ ಸೇರಿದಂತೆ ಹಲವು ರಾಷ್ಟ್ರಗಳಲ್ಲಿ ಯಶಸ್ವಿಯಾಗಿ ಜಾರಿಗೆ ತರಲಾಗಿರುವ) ನೆರೆಹೊರೆಯಲ್ಲೇ, ಎಂದರೆ ಆಯಾ ಪ್ರದೇಶಗಳಲ್ಲೇ ಶಾಲೆಗಳನ್ನು ಸ್ಥಾಪಿಸುವುದು ಸೂಕ್ತ. ಆಯಾ ಪ್ರದೇಶದ ಮಕ್ಕಳು ಈ ಶಾಲೆಗಳನ್ನು ಬಿಟ್ಟು ಎಲ್ಲೋ ದೂರದ 'ಪ್ರತಿಷ್ಠಿತ' ಶಾಲೆಗಳಿಗೆ ಹೋಗುವ ಅಭ್ಯಾಸ ಇಲ್ಲದಂತಾಗಬೇಕು. ಅದಕ್ಕಾಗಿ ಪ್ರತಿ ಶಾಲೆಯೂ ಪ್ರತಿಷ್ಠಿತವೆನಿಸಿಕೊಳ್ಳುವ ಮಟ್ಟದ್ದಾಗಬೇಕು, ಅವುಗಳ ಗುಣಮಟ್ಟವನ್ನು ಸಾರ್ವಜನಿಕರು - ಪೋಷಕರು ಸದಾ ಗಮನಿಸುತ್ತಾ ಉತ್ತಮಪಡಿಸಬೇಕು. ಇದರಿಂದಾಗಿ ಎಲ್ಲ ಜಾತಿಗಳು, ವರ್ಗಗಳ ವಿದ್ಯಾರ್ಥಿಗಳು ಒಂದೆಡೆ ಕಲೆತು ವಿದ್ಯಾರ್ಜನೆಗೆ ತೊಡಗುವುದರ ಮೂಲಕ ಹೊಸದೊಂದು ಜನಪರ ಸಂಸ್ಕೃತಿಗೆ ತೆರೆದುಕೊಳ್ಳುತ್ತಾರೆ. ಮತ್ತು ಸಮುದಾಯಗಳಲ್ಲಿ ಅನವಶ್ಯಕವಾದ ಮೇಲು-ಕೀಳು ಎಂಬಂತಹ ತಾರತಮ್ಯಗಳಿಗೆ ಎಡೆಮಾಡಿಕೊಡುವ ತಥಾಕಥಿತ 'ಇಂಗ್ಲಿಷ್' ಶಾಲೆಗಳಿಗೆ ಅವಕಾಶವಿರುವುದಿಲ್ಲ, ಅಲ್ಲದೆ ವಿದ್ಯಾರ್ಥಿಗಳು ಶಿಕ್ಷಣ ಅವಧಿಯ ಮಧ್ಯದಲ್ಲೇ ಶಾಲೆಗಳನ್ನು ಬಿಟ್ಟುಹೋಗುವುದನ್ನು ತಡೆಗಟ್ಟಬಹುದು. ಈ ಹಿನ್ನೆಲೆಯಲ್ಲಿ ಎಲ್ಲ ಜನಸಾಮಾನ್ಯರ ಕೈಗೆಟಕುವ, ಹೊಸ ಜನಪರ ರಾಷ್ಟ್ರೀಯ ಶಿಕ್ಷಣ ನೀತಿಯೊಂದನ್ನು ಜಾರಿಗೆ ತರಬೇಕಿದೆ. ಇಂದಿನ ಸರಕಾರದ ಚಿಂತನೆಯಂತೆ ಶಿಕ್ಷಣ ವ್ಯವಸ್ಥೆಯನ್ನು ವ್ಯಾಪಾರೀಕರಣಗೊಳಿಸುವುದರ ಜೊತೆಗೆ '೧೨ನೇ ಇಯತ್ತೆಯವರೆಗೆ ಪರೀಕ್ಷೆ ಇಲ್ಲ' ಎಂಬ ಹೊಸ ನೀತಿಯೂ ಜಾರಿಗೆ ಬಂದರೆ ಇಡೀ ಶಿಕ್ಷಣ ವ್ಯವಸ್ಥೆ ಕುಸಿದುಬೀಳುವುದರಲ್ಲಿ ಸಂದೇಹವಿಲ್ಲ.

ವಿದ್ಯಾರ್ಥಿಗಳಿಗೆ ಮಾನವೀಯ ಮೌಲ್ಯಗಳನ್ನು ಕಲಿಸುವುದಲ್ಲದೆ, ವೈಯಕ್ತಿಕ ಬೇಕುಬೇಡಗಳು ಮತ್ತು ಸಮಷ್ಟಿಯ ಹಿತಾಸಕ್ತಿಗಳ ನಡುವೆ ಸೂಕ್ಷ್ಮ ಸಮತೋಲನವನ್ನು ಕಾಪಾಡಿಕೊಳ್ಳುವಂತಹ ಮನೋಧರ್ಮವನ್ನು ಅವರಲ್ಲಿ ರೂಢಿಸುವುದು ಶಿಕ್ಷಣದ ಮೂಲ ಉದ್ದೇಶವಾಗಿರಬೇಕು. ಖಾಸಗಿ ಅಕಾಡೆಮಿಗಳು, ವಿಶೇಷ ಕೋಚಿಂಗ್ ಕೇಂದ್ರಗಳು ವಿದ್ಯಾರ್ಥಿಗಳನ್ನು, ಅವರ ಪೋಷಕರನ್ನು ಈ ಮಹದೋದ್ದೇಶದಿಂದ ವಿಮುಖರನ್ನಾಗಿಸುತ್ತಿವೆ. ಇವು ವ್ಯಕ್ತಿತ್ವ ರೂಪಿಸುವ ಬದಲು ವಿದ್ಯಾರ್ಥಿಗಳನ್ನು ಅಂಕ ಗಳಿಸುವ ಯಂತ್ರಗಳನ್ನಾಗಿ ಪರಿವರ್ತಿಸಲು ಆಶಿಸುತ್ತವೆ. ಆದರೆ ಅದಷ್ಟೇ ಶಿಕ್ಷಣದ ಗುರಿಯಲ್ಲ.

ಶಿಕ್ಷಣ ವ್ಯವಸ್ಥೆ ಎಂಬುದು ಆಯಾ ನೆಲದ, ದೇಶದ, ಸಾಂಸ್ಕೃತಿಕ ವಿಕಾಸದ ಪ್ರಕ್ರಿಯೆಯ ಒಂದು ಭಾಗ. ಈ ಪ್ರಾಥಮಿಕ ಪರಿಜ್ಞಾನವೂ ಇಲ್ಲದ ನಮ್ಮ ಆಳುವ ವರ್ಗಗಳು ಶಿಕ್ಷಣವನ್ನೇ ಪಾಶ್ಚಾತ್ಯ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳಹೊರಟಿರುವುದು ಅವರ ಮೂರ್ಖತನಕ್ಕೆ ಸಾಕ್ಷಿಯಾಗಿದೆ. ನಮ್ಮ ಇಡೀ ಶಿಕ್ಷಣ ವ್ಯವಸ್ಥೆಯನ್ನು ಪ್ರಾಥಮಿಕ ಹಂತದಿಂದ ಮೇಲಿನವರೆಗೆ ಕೂಲಂಕಷವಾದ ಮರುಪರೀಕ್ಷೆಗೆ ಒಡ್ಡುವುದು ಇಂದಿನ ಅಗತ್ಯತೆಯಾಗಿದೆ. ಈ ಕುರಿತು ಸಲಹೆ, ಸಹಕಾರಗಳನ್ನು ನೀಡಲು ನಮ್ಮಲ್ಲೇ ಸಾಕಷ್ಟು ಸಂಖ್ಯೆಯಲ್ಲಿ ಪ್ರತಿಭಾವಂತರಿದ್ದಾರೆ, ತಜ್ಞರಿದ್ದಾರೆ. ಮನಮೋಹನ ಸಿಂಗ್, ಸಿಬಲ್ ಅವರಂತಹವರಿಗೆ ಈ ಕುರಿತು ಮನವರಿಕೆ ಮಾಡಿಕೊಡಲು ವ್ಯಾಪಕ ಜನಾಂದೋಲನಗಳ ಅಗತ್ಯವಿದೆ. ಅದನ್ನು ಉಪೇಕ್ಷಿಸಿ ವಿದೇಶಿ ವಿಶ್ವವಿದ್ಯಾಲಯಗಳನ್ನು ಆಮದು ಮಾಡಿಕೊಂಡರೆ ಲಾಭವೇನಾದರೂ ಇದ್ದರೆ ಅದು ಗುಲಗಂಜಿ ಮಾತ್ರದ ಸಮಾಜದ ವಿಭಾಗಕ್ಕೆ ಮಾತ್ರ. ಮೂಲತಃ ಅಂತಹ ಲಾಭವನ್ನೇನೂ ನಿರೀಕ್ಷಿಸುವಂತಹ ವಾತಾವರಣವಿಲ್ಲ.



ಕೆ. ವೆಂ. ರಾಜಗೋಪಾಲ

ಹಂಪೆಗೆ 'ಭಾಸ್ಕರ ಕ್ಷೇತ್ರ' ಎಂಬ ಹೆಸರನ್ನು ಮರೆಯಲಾಗದಂತೆ 'ಹಳೆಯ ಗೋಪುರ'ದ (ನದಿಯ ಕಡೆಗೆ ಹೋಗುವ ದ್ವಾರದ ಮೇಲಿನ ಗೋಪುರ) ನೆರಳಿನ 'ಪೆಂಡುಲಂ' ಚಲನೆಯನ್ನು ಕುರಿತು ಯಾರು ಬೇಕಾದರೂ ವಿಚಾರ ಮಾಡಬಹುದು. ಬೇರೆಯ 'ಗಡಿಯಾರದ' ಅನುಕೂಲವಿರದಿದ್ದ ಅಂದಿನ ಕೃಷ್ಣ(ದೇವ)ರಾಯನ ಹಂಪೆಯ ಆಳ್ವಿಕೆಯ ಸಮಯದಲ್ಲಿ ಸೂರ್ಯ ವಿಗ್ರಹ(ಗಳು)ವನ್ನೂ ಗೋಪುರದ ನೆರಳಿನಿಂದ, ಪಿನ್‌ಹೋಲ್ ಕ್ಯಾಮರಾ (ಜಪಾನಿನ ಕ್ಯಾಮರಾಗಳು ಕಳೆದ ಶತಮಾನದ, ಸ್ವಾತಂತ್ರ್ಯ ಪೂರ್ವದಲ್ಲಿ ಮಾರುಕಟ್ಟೆಯಲ್ಲಿ ದೊರಕುತ್ತಿದ್ದುವು. ನನ್ನ ಬಾಲ್ಯದ ನೆನಪು) ಪ್ರಾಯೋಗಿಕತೆಗೆ 'ಕಾಲದ ಗಣನೆ'ಯುನ್ನು, ವರ್ಷದಲ್ಲಿ ಚಂದ್ರನ ಚಲನೆಯನ್ನು ಗುರುತಿಸುತ್ತಾ, ಅರಿತುಕೊಳ್ಳುವ 'ವೈಜ್ಞಾನಿಕತೆ'ಯ 'ರೀತಿ'ಯೆಂದು ಹೇಳಬಹುದಾಗಿದೆ.



# ಶ್ರೀಕೃಷ್ಣ (ದೇವ) ರಾಯನ ಕಾಲದ ಸೂರ್ಯ

**ಕ**ರ್ನಾಟಕದಲ್ಲಿ ಸೂರ್ಯ ಪ್ರತಿಮೆಗಳ ಸಂಖ್ಯೆ, ಎಣಿಕೆಗೆ ಮೀರುವಂತೆ ನೂರಾರು, ಸುಮಾರು ಸಾವಿರ, ಎನ್ನಬಹುದಾಗಿದೆ. ಇದಕ್ಕೆ ಪೂಜೆ-ಪುನಸ್ಕಾರಗಳನ್ನು ಗುರುತಿಸುವುದಾದರೆ 'ರಥಸಪ್ತಮಿ'ಯು ಮೀಸಲಾಗಿದೆ. ಅಲ್ಲದೆ ಸೂರ್ಯನ ಪ್ರತಿಮೆಗಳನ್ನು ದೇಗುಲಗಳಲ್ಲಿ ಹೊರಭಾಗದಲ್ಲಿ, ಅಂದರೆ ದೇಗುಲದ ಪ್ರಾಕಾರಗಳಲ್ಲಿ ಇರಿಸಲಾಗಿದೆ. ಅಲ್ಲಿಯೇ ಸೂರ್ಯನ ಪ್ರತಿಮೆಯು ಸರಿಸುಮಾರು ರಾಷ್ಟ್ರಕೂಟರ ಕಾಲದಿಂದಲೂ ಇರುವಂತೆ ಪ್ರತಿಮೆಗಳ ಸ್ವರೂಪದಿಂದ ಗುರುತಿಸಬಹುದಾಗಿದೆ. ಅಂದರೆ ಸೂರ್ಯಾರಾಧನೆಯು ಬಹಳ ಹಿಂದಿನಿಂದ ಒಂದು ಅವಶ್ಯಕತೆಯಾಗಿ ಕಂಡುಬಂದಿದ್ದು ಪುರಾಣಗಳ ಬೆಂಬಲವಿಲ್ಲದಂತಾಗಿ ದ್ವೈತ-ಅದ್ವೈತ-ವಿಶಿಷ್ಟಾದ್ವೈತಗಳ ವಿಕಾಸದಲ್ಲಿ ಕರಗಿಹೋಗಿರಬಹುದಾಗಿದೆ. ಉದಾಹರಣೆಗೆ, ಹೊಯ್ಸಳ ದೇವಸ್ಥಾನಗಳಲ್ಲಿ ಸೂರ್ಯನಿಗೆ ಮೊದಲಿದ್ದ ಸ್ಥಾನದಿಂದ ಪಲ್ಲಟವಾದಂತೆ ಎರಡನೆಯ ದರ್ಜೆಯ ಸ್ಥಾನವನ್ನು ಕಾಣುತ್ತೇವೆ. ಬೇಲೂರಿನಲ್ಲಿಯೇ ಚೆನ್ನಕೇಶವನಿಗೆ ಪೂಜೆಯ ಸ್ಥಾನ ದೊರಕಿದ ಮೇಲೆ ಅದೇ ಪ್ರಾಕಾರದಲ್ಲಿರುವ ಗೋಡೆಯಲ್ಲಿನ ಅಲಂಕಾರಕ್ಕೆ ಬಳಸಲಾಗಿದೆ. (ಇದಕ್ಕೆ ರಾಮಾನುಜರು ಕಾರಣರಿರಬಹುದು ಅಥವಾ ಅವರ ಶಿಷ್ಯರು ಮೊದಲಾಗಿ ಭಕ್ತರ ಮನೋಧರ್ಮ - ಇರಬಹುದು.) ಒಟ್ಟಿನಲ್ಲಿ, ಸೂರ್ಯನ ಸ್ಥಾನಮಾನವು ಹನ್ನೆರಡನೇ ಶತಮಾನದ ಮೊದಲ ಭಾಗದಿಂದಲೇ ಸ್ಥಾನಪಲ್ಲಟವಾಗಿದ್ದರೂ 'ರಥಸಪ್ತಮಿ'ಯಲ್ಲಿ ರಥೋತ್ಸವವು – ಬ್ರಾಹ್ಮಣರೂ ಸೇರಿದಂತೆ, ಆದರೂ ಇತರರ ಇಚ್ಛೆಯಂತೆ ಉದಯಕಾಲದ ಆಚರಣೆಯಾಗಿ ಉಳಿದಿರುವುದನ್ನು ಹಲವಾರು ಹಳೆಯ ದೇಗುಲಗಳಲ್ಲಿ ಕಾಣುವಂತಾಗಿದೆ.

ಸೂರ್ಯನನ್ನು ವಿಷ್ಣು-ಶಿವರಂತೆ ನಿತ್ಯಾರಾಧನೆಗೆ ಯೋಗ್ಯವಲ್ಲವೆನ್ನುವಂತೆ ಮಾಡಲಾಗಿದೆ – ಆದರೂ ಹಳೆಯ ಪ್ರತಿಮೆಗಳು ಉಳಿದಿವೆ. ಇವುಗಳಲ್ಲಿ ಹಂಪೆಯ ವಿರೂಪಾಕ್ಷ ದೇಗುಲವೂ ಒಂದು. ಈ ಬಗೆಯ ಪೂಜೆಯನ್ನು ಸ್ವಾಮಿಗಳು ಹಾಗೂ ರಾಜಗೌರವ ಪಡೆಯುವ ಪ್ರಮುಖ ಪೂಜಾರಿಗಳಿಂದ ನಡೆಸಲಾಗುತ್ತಿದೆ. ರಥಸಪ್ತಮಿಯಲ್ಲಿ ಉತ್ಸವದ ಮೆರವಣಿಗೆಗೆ ಸಾಮಾನ್ಯ ಜನತೆಯು ಜವಾಬುದಾರಿಯನ್ನು ವಹಿಸುತ್ತದೆ. (ಕೊನಾರ್ಕ್‌ನಲ್ಲಿ ಉತ್ಸವವು ಸೂರ್ಯದೇಗುಲಕ್ಕೆ ಸೇರಿದ್ದರೂ ಸೂರ್ಯನದಲ್ಲ!) ಆದುದರಿಂದ ದೇಗುಲದ ಪ್ರಾಕಾರದಲ್ಲಿ ಒಂದು ಸಾಮಾನ್ಯ ಸೇವಕ ಧರ್ಮದ ಪ್ರತಿಮೆಯಂತೆ ಕಾಪಾಡಲಾಗುತ್ತದೆ. ಆದುದರಿಂದ ಸೂರ್ಯ ಪ್ರತಿಮೆಗೆ ನೇರ ಪೂಜೆ ನಿತ್ಯಪೂಜೆ ಇತ್ಯಾದಿಗಳ ವೈಭೋಗವು 'ಸಲ್ಲ'.

ಈ ಬಗ್ಗೆ ಕೃಷ್ಣ(ದೇವ)ರಾಯನು ಅನುಸರಿಸಿದ ಪದ್ಧತಿಯು ಗಮನಾರ್ಹವಾಗಿದೆ. ಅದು ಸೂರ್ಯಾರಾಧನೆಗೆ ಸೇರಿದ ವಿಷಯವಾಗಿದೆ : ಪ್ರತಿಮೆಯು (ಒಂದು ಸಣ್ಣದು ಕೂಡ) ಕೃಷ್ಣ ರಾಯನ ಗೋಪುರಕ್ಕೆ ಹೊಂದಿಕೊಂಡಂತೆ ಪಶ್ಚಿಮಾಭಿಮುಖವಾಗಿ ವಿರೂಪಾಕ್ಷನ ನಿತ್ಯಪೂಜೆ ಇತ್ಯಾದಿ ವೈಭವಗಳನ್ನು ನೋಡುತ್ತಿರುವ 'ಭಕ್ತ'ನಂತೆ ಉಳಿದಿದೆಯಷ್ಟೆ - (ಇಂದಿಗೂ ಕಂಡುಬರುವ 'ಸೂರ್ಯನ ಗತಿ' ಹೀಗಿದೆ).

* * *

'ಹಂಪೆ'ಯನ್ನು ಪಂಪಾ ಕ್ಷೇತ್ರ – ಎಂದು ಕರೆಯುವಂತೆಯೇ ಭಾಸ್ಕರ ಕ್ಷೇತ್ರ – ಎಂದೂ ಕರೆಯಲಾಗಿದೆ. ಇದಕ್ಕೆ ಪಂಪಾಪತಿಯ ಗರ್ಭಗುಡಿಯು ಆಧಾರವಾಗಿರುತ್ತದೆ. ತುಂಗಭದ್ರೆಯ ದಂಡೆಯ ಮೇಲೆ ನಿಂತಿರುವ ಈ ಕ್ಷೇತ್ರವನ್ನು ಭಾಸ್ಕರ ಕ್ಷೇತ್ರ ಎನ್ನುವಲ್ಲಿ ಭಾಸ್ಕರಾಚಾರ್ಯ (ಎರಡನೆಯ !)ನ ಕೊಡುಗೆಯಿರುತ್ತದೆ.

ಇತ್ತೀಚೆಗೆ ಈ ಭಾಸ್ಕರಾಚಾರ್ಯನ ಸ್ಥಳವನ್ನು ಶೋಧಿಸತೊಡಗಿದಾಗ ಇಂದಿಗೂ ಪ್ರಸಿದ್ಧ ವಿರುವ ಕುಂದಾಪುರಕ್ಕೆ (ದಕ್ಷಿಣ ಕನ್ನಡ-ಉಡುಪಿ ಜಿಲ್ಲೆ) ಸಮೀಪವಿರುವ ಮಣೂರು ಗ್ರಾಮಕ್ಕೆ ಅಂಟಿಕೊಂಡಂತಿರುವ 'ಭಾಸ್ಕರ ಬೆಟ್ಟು' ಎಂಬ ಒಂದು ಹಳೆಯ ಮಠ (ಇದಕ್ಕೆ 'ಸ್ವಾಮಿ'ಗಳಿಲ್ಲ!)ವಿದೆ. ಇಲ್ಲಿಯ ವಿಶೇಷವೆಂದರೆ ರಥಸಪ್ತಮಿಗೆ ಸಂಬಂಧಿಸಿದಂತೆ ಒಂದು ಸಣ್ಣ ಆಳೆತ್ತರ ಜಗುಲಿಯಿರುವ ಸುಮಾರು ಆರುನೂರು ವರ್ಷಗಳ (ಅಂದಾಜು) ಹಿಂದಿನ ಒಂದು ಸಣ್ಣ ಗುಡಿ: ಇದರ ಮಾಹಿತಿಗಳು ಕಳೆದುಹೋಗಿವೆಯಾದರೂ ಗುಡಿಯಲ್ಲಿ ಈಗ ಒಂದು ಪೀಠದ ಮೇಲೆ ಮತ್ತೊಂದು ಪಾನುಬಟ್ಟಲು - ಪೀಠವಿದ್ದು, ಅದರಲ್ಲಿ ಒಂದು ಸಣ್ಣ ಶಿವಲಿಂಗದ ಸ್ಥಾಪನೆಯಿದೆ. ಈ ಲಿಂಗವು ಎಲ್ಲಾ ಕಾಲದಲ್ಲಿಯೂ ಸೂರ್ಯೋದಯಕ್ಕೆ ತೆರೆದುಕೊಂಡಿರುವಂತೆ ದಿಗಂತ (ಹೊರೈಜ಼ನ್)ವು ತೆರವಾಗಿದೆ. ಇದು ಅಂದರೆ ದೇಗುಲದ ಎದುರಿಗೆ ಒಂದು ಕೊಳವಿದೆ – ಕೆಲವು ಪುರಾತನವಾದ – ಪ್ರಾದೇಶಿಕವಾದ ಔಷಧೋಪಚಾರಗಳಿಗೆ ಈ ಮಠವು ಪ್ರಸಿದ್ಧವಾಗಿರುವುದು ಕೂಡ ಒಂದು ಬಗೆಯಲ್ಲಿ 'ಗೋಪ್ಯ' ವೆನ್ನಿಸಿಕೊಂಡಿದೆ - ಇದರ ವಾರಸುದಾರಿಕೆಯನ್ನು ಇಂದು ಒಬ್ಬ ಹಣ್ಣುಮುದುಕಿಯು ವಹಿಸಿದ್ದಾರೆ. ಇಲ್ಲಿಯ ಸುತ್ತಮುತ್ತಲಿನ ಹಳೆಯ ಪೈಕಿಯ ರೈತಾಪಿಗಳು ಈ ದೇಗುಲದ 'ಭಕ್ತಾವಳಿ'ಯಾಗಿ ಸಲ್ಲಿಸುವ ಕಾಣಿಕೆಯಿಂದ ಸೂರ್ಯಾರಾಧನೆಯನ್ನು ಮರೆತರೂ ಈ ಪುಟ್ಟ ದೇಗುಲವನ್ನು ತಮ್ಮ ಪಾರಂಪರಿಕ ಆಚರಣೆಗೆ ಬಳಸಿಕೊಳ್ಳುತ್ತಿದ್ದಾರೆ. (ಈ ಮಾಹಿತಿಯನ್ನು ನಾನು ನೋಡಿ ವಿಚಾರಿಸಿರುವುದರಲ್ಲಿ ಗೆಳೆಯ ಸುರೇಂದ್ರ ಅಡಿಗರ ಸಂಪೂರ್ಣ ಸಹಕಾರವನ್ನು ಮರೆಯುವಂತಿಲ್ಲ, ಕೃತಜ್ಞತೆಗಳು) ಆದುದರಿಂದ ಈ ಕ್ಷೇತ್ರವನ್ನು ಭಾಸ್ಕರಾಚಾರ್ಯನ ಸಂಬಂಧದ 'ಪ್ರಾಯೋಗಿಕ ಕೇಂದ್ರ'ವಾಗಿದ್ದಿರಬಹುದು ಎಂದು ಗುರುತಿಸಲು ಸಾಧ್ಯ ವಾಗಿದೆ: ಈತನು 'ಲೀಲಾವತಿ' ಎಂಬ ವಿಶಿಷ್ಟ ಹಾಗೂ ನಮ್ಮ 'ಗಣಿತ ಕೃತಿ'ಯ ರಚನಕಾರನೆಂಬುದಷ್ಟೇ ಮುಖ್ಯ ವಾಗಿದೆ. (ಇದರ ವಿವರಗಳನ್ನು ನಮ್ಮ ವಿದ್ವಾಂಸರು 'ಬಲ್ಲವ'ರು ಮತ್ತು 'ಈ ಗಣಿತಜ್ಞ'ನನ್ನು 'ಹಂಪೆ'ಯ ಸಂದರ್ಭದಲ್ಲಿ ಉಳಿಸಿರುವಂತಿದೆ. ಆದುದರಿಂದಾಗಿ 'ಭಾಸ್ಕರ ಕ್ಷೇತ್ರ'ವಾಗಿದೆ). ಒಟ್ಟಿನಲ್ಲಿ ಈ ಭಾಸ್ಕರಾಚಾರ್ಯನು ಕನ್ನಡಿಗ ಮತ್ತು 'ದಕ್ಷಿಣ ಕನ್ನಡ'ದವನು ಎಂಬುದನ್ನು ಗುರುತಿಸಬಹುದಾಗಿದೆ. ಈತನು 'ಸೂರ್ಯ ಸಿದ್ಧಾಂತದ ಒಬ್ಬ 'ಪ್ರಾಯೋಗಿಕ ಗುರು ಯಾ ಪಂಡಿತ' ಎಂಬುದನ್ನು ಹಂಪೆಯ ವಿರೂಪಾಕ್ಷ ಸನ್ನಿಧಿಯಲ್ಲಿ ಗುರುತಿಸಬಹುದಾಗಿದೆ.



ಕೃಷ್ಣ (ದೇವ)ರಾಯನ ಆಳ್ವಿಕೆಯಲ್ಲಿ ಗರ್ಭಗುಡಿಯಲ್ಲಿದ್ದಿರಬಹುದಾದ ಆತನ ಪಟ್ಟಾಭಿಷೇಕ ಮಂಟಪದ ಹಿಂಬದಿಗೆ ಉಳಿದಿರುವ ಗರ್ಭಗುಡಿಯ, ಅದಕ್ಕೆ ಸೇರಿದಂತೆ ಅಂತರಾಳದ ಮುಂದಿನ 'ನೃತ್ಯ ಮಂಟಪ'ವನ್ನು ಹಾಳುಮಾಡದೆ ಉಳಿಸಿರುವ ಹಿರಿಮೆಯನ್ನು – ಮಂಟಪವನ್ನು ಒಳಗೊಂಡಂತೆಯೇ ಪಟ್ಟಾಭಿಷೇಕದ ಮಂಟಪಕ್ಕೆ ಸೇರಿಸಿರುವ 'ರಚನೆ'ಯನ್ನು ಯಾರುಬೇಕಾದರೂ ಅರಿತುಕೊಳ್ಳಬಹುದಾಗಿದೆ. ಈ ನೃತ್ಯ ಮಂಟಪದಲ್ಲಿ ಗರ್ಭಗುಡಿಯಿಂದ ಎಡಗಡೆಯ ಕಂಬದಲ್ಲಿ 'ನಾಟ್ಯ ಮಯೂರಿ'ಯ ಕೆತ್ತನೆಯಿದೆ. ಇಂದಿಗೂ ಈ ಮಂಟಪದಲ್ಲಿ ಹೊರಗಿನಿಂದ ತಂದಿರಿಸಿದ ಬಸವಣ್ಣನ ಚಿಕ್ಕ ಪ್ರತಿಮೆ ಹೊಂದಿದೆ. ಇದು ವಿರೂಪಾಕ್ಷನ ದರ್ಶನಕ್ಕಾಗಿ ತಂದಿರಿಸಿರುವ ಹೊಂದಾಣಿಕೆಯಾಗಿದೆ. ಈ ನೃತ್ಯ ಮಂಟಪವು ಗರ್ಭಗುಡಿಯ ಸೂರ್ಯ ಪ್ರತಿಮೆಗೆ – ಈಗ ಈ ಪ್ರತಿಮೆಯು ಕೃಷ್ಣದೇವರಾಯನ ಗೋಪುರಕ್ಕೆ ಅಂಟಿಕೊಂಡಂತೆ ಒಂದು ಹಳೆಯ ಗೂಡಿನಲ್ಲಿ ಇರಿಸ ಲಾಗಿದೆ. ಇದರ ಜೊತೆಗೆ ಮತ್ತೊಂದು ಸುಮಾರು ಎರಡು ಅಡಿ ಎತ್ತರದ ಮತ್ತೊಂದು ಸೂರ್ಯ ವಿಗ್ರಹವೂ ಇದೆ - ವಿರೂಪಾಕ್ಷನಂತೆ ಈ ವಿಗ್ರಹಗಳಿಗೆ ಪೂಜೆಯಿರುವಂತಿಲ್ಲ. ಇಂಥ ಅವಜ್ಞತೆಯನ್ನು ಗುರುತಿಸಲು ಅಡ್ಡಿಗಳಿಲ್ಲ. ಈ ವಿಗ್ರಹವು ಕೀರ್ತಿಮುಖವಿಲ್ಲದ ಪ್ರಭಾವಳಿಯಿಂದ ಕಪ್ಪುಕಲ್ಲಿನ (ಗ್ರಾನೈಟ್ ?) ಕಮಲಗಳಿಂದ ಮತ್ತು ಕಿರೀಟದಿಂದ ಅಲಂಕೃತವಾಗಿದೆ. ಇದಕ್ಕೆ ರಥಸಪ್ತಮಿಯಂದು ಉದಯಕಾಲದ ಪೂಜೆಯಿರುವಂತೆ ತಿಳಿದುಬಂದಿದೆ. ಇದೇ 'ಹಂಪೆಯ ಸೂರ್ಯ' ಎಂದು ಅನುಮಾನಿಸಬಹುದು.

(೧) ಈ ವಿಗ್ರಹದ (ಗಳ) ಅವಜ್ಞತೆಯನ್ನು ಗಮನಿಸಿದಲ್ಲಿ ಸೂರ್ಯನ ಆರಾಧನೆಗೆ ಸಂಬಂಧಿಸಿರಬೇಕಾದ 'ಕಾಲದ ಗಣನೆ' ಮುಖ್ಯ. ಪಂಚಾಂಗದ ಲೆಕ್ಕಾಚಾರದಲ್ಲಿ 'ಸಂಕ್ರಾಂತಿ' ಯನ್ನು ಗುರುತಿಸುವುದಕ್ಕಾಗಿ, ರಥಸಪ್ತಮಿಯಲ್ಲಿ 'ರಥಯಾತ್ರೆ' ನಡೆಸುವುದಕ್ಕಾಗಿ ಸೂರ್ಯನ ಪೂಜೆ ಪುನಸ್ಕಾರಗಳು ಇಂದಿಗೂ ಎಲ್ಲ ಹಳೆಯ ಪ್ರಸಿದ್ಧ ದೇಗುಲಗಳಲ್ಲಿಯೂ 'ಆಚರಣೆ'ಯಾಗುತ್ತಿದೆಯಷ್ಟೆ! (ಇದಕ್ಕೆ ನನ್ನ 'ರಥಸಪ್ತಮಿ'ಯನ್ನು ಕುರಿತ ಲೇಖನವನ್ನು ನೋಡಬಹುದು.)

(೨) ಇದಕ್ಕೆ ಬದಲಾದಂತೆ 'ವಿರೂಪಾಕ್ಷ' ಗುಡಿಗೆ ಸಮಾನಾಂತರವಾಗಿರುವಂತೆ ಯಾತ್ರಿಕರನ್ನು ಆಕರ್ಷಿಸುವ. ಕತ್ತಲಕೋಣೆಯ ಗೋಡೆಯ ಮೇಲೆ ಹಳೆಯ ಮೊದಲ ಗೋಪುರದ 'ತಲೆಕೆಳಗಾದ' ನೆರಳಿನ ಪ್ರದರ್ಶನವನ್ನು ಈಗಲೂ ನೋಡಬಹುದಾಗಿದೆ.

ಇದರ 'ತಾತ್ಪರ್ಯ'ವನ್ನು ಅರಿತುಕೊಳ್ಳಬೇಕಾದ ಅವಶ್ಯಕತೆಯಿದೆಯಷ್ಟೆ! ಈ ನೆರಳು, ಪೂರ್ವಕ್ಕೆ ಅಭಿಮುಖವಾಗಿದೆ. ಆದುದರಿಂದ ಸಂಜೆಯ ಕಡೆಗೆ ದಿನವು ಸಮೀಪಿಸುತ್ತಿದ್ದಂತೆ ಮಾಯವಾಗುತ್ತದೆ. ಆದರೂ ಬೆಳಗಿನಿಂದ ಸೂರ್ಯನ ಬೆಳಕು ಹೊಮ್ಮುತ್ತಿದ್ದಂತೆ ಒಂದು ರಂಧ್ರದ (ಸುಮಾರು ಹತ್ತು ಅಡಿಗಳು ಇರಬಹುದಾದ ರಂಧ್ರ) ಮೂಲಕ ಬೀಳುವ ನೆರಳು ತಲೆಕೆಳಗಾದ ಗೋಪುರವನ್ನು ಗೋಡೆಯ ಮೇಲೆ ಬೀಳಿಸುವಲ್ಲಿ ಪಂಚಾಂಗದ ಹೊಂದಾಣಿಕೆ [ಪ್ರತಿದಿನ ಬೆಳಗಿನ ಸಮಯದಲ್ಲಿ ಗುರುತುಮಾಡುತ್ತಾ ಹೋದರೆ ಪಂಚಾಂಗಕ್ಕೆ ಉಪಯುಕ್ತವಾದ 'ಮಾಹಿತಿ'ಯಾಗುತ್ತದೆ. ಈ ನೆರಳು ಇಡೀ ವರ್ಷದಲ್ಲಿ 'ಪೆಂಡುಲಂ'ನಂತೆ ಎಡದಿಂದ (ಉತ್ತರದಿಂದ ದಕ್ಷಿಣಕ್ಕೆ, ಆರು ತಿಂಗಳೂ ಹಾಗೆಯೇ ದಕ್ಷಿಣದಿಂದ ಉತ್ತರಕ್ಕೆ ಆರು ತಿಂಗಳೂ) ಜರುಗುತ್ತದೆ]. ಬಲಕ್ಕೂ, ಬಲದಿಂದ ಎಡಕ್ಕೂ ಜರುಗುತ್ತಲೇ ಇರುತ್ತದೆ. ಇದು ಬರಿಯ ಊಹೆಯಲ್ಲ ಎಂಬುದನ್ನು ನಮ್ಮ ಪೂರ್ವಿಕರು ಸೂರ್ಯನ ನೆರಳಿನಿಂದ ಒಂದು ಕಂಭ ಅಥವಾ ಒಬ್ಬ ವ್ಯಕ್ತಿಯ ಆಧಾರದಿಂದ ಗಂಟೆ ಅಥವಾ ಘಳಿಗೆಗಳನ್ನು ಗುಣಿಸುತ್ತಿದ್ದರು. ಅಲ್ಲದೆ ಸೂರ್ಯನು 'ವರ್ಷ ದಾದ್ಯಂತ'ದಲ್ಲಿ ಹನ್ನೆರಡು ತಿಂಗಳು, ಉತ್ತರ-ದಕ್ಷಿಣ ಹಾಗೂ ದಕ್ಷಿಣೋತ್ತರ, ಅಯನಗಳಲ್ಲಿ ಚಲಿಸುವುದನ್ನು ಸೂರ್ಯನಿಗೆ ಸಂಬಂಧಿಸಿದ ದೇಗುಲಗಳಿಂದ – ಸುಮಾರು ಎಂಟನೇ ಶತಮಾನದಷ್ಟು ಹಿಂದಿನಿಂದಲಾದರೂ 'ಸಂಕ್ರಮಣ'ಗಳನ್ನು ಗುರುತು ಮಾಡುತ್ತಿದ್ದರು. ಇದಕ್ಕೆ ಒಂದು ಮುಖ್ಯ ಉದಾಹರಣೆಯಾಗಿ 'ಶೃಂಗೇರಿ'.ಯ ವಿದ್ಯಾಶಂಕರ ದೇಗುಲವನ್ನು, ಅಲ್ಲದೆ ಮಾನ್ಯಖೇಟ ಅಥವಾ ಮಳಖೇಡ ಅಥವಾ 'ಮಣ್ಣೆ'ಯ ಹಾಳು ದೇಗುಲಗಳನ್ನು ತೋರಿಸಬಹುದಾಗಿದೆ.

ಸೂರ್ಯನ ಉದಯಗಳಲ್ಲಿ ಕಿರಣಗಳು, ದ್ವಾದಶ ರಾಶಿಗಳಿಗನುಗುಣವಾಗಿ, (ಹನ್ನೆರಡು ಕಂಬಗಳು) ಶೃಂಗೇರಿಯ ವಿದ್ಯಾಶಂಕರ ದೇಗುಲದ ಮುಖ ಮಂಟಪದಲ್ಲಿ ಕಂಬದಿಂದ ಕಂಬಕ್ಕೆ ಜರುಗುತ್ತಾ ಹೋಗುವುದನ್ನು ಇಂದಿಗೂ 'ಪಂಚಾಂಗ ಶ್ರವಣ'ದಂತೆ ಕಾಣಬಹು ದಾಗಿದೆ. ಇದರಲ್ಲಿ ದೋಷವಿಲ್ಲದೆ ಇರಲಾರದು. ಆದರೆ ಇದರ ಪ್ರಾಯೋಗಿಕತೆ ಮುಖ್ಯವಾಗಿ 'ಸಂಕ್ರಾಂತಿ'ಯಲ್ಲದೆ 'ತುಲಾ' ಸಂಕ್ರಮಣವನ್ನೂ (ಒಟ್ಟು ಎರಡು ಬಾರಿ ದೇವರ ಪಾದಕ್ಕೆ ಉದಯ ಕಾಲದ ಕಿರಣ ಬೀಳುವುದನ್ನೂ) ಗುರುತಿಸುವಲ್ಲಿ 'ಸರಿಯಾಗಿ' ಇರುವಂತಿದೆ - ಇದು ಪ್ರಯೋಗಿಕ ಸತ್ಯ. ಸುಮಾರು ಎಂಟನೇ ಶತಮಾನದಷ್ಟು ಈಚಿನ 'ಅಧ್ಯಾಯ'ವೆನ್ನಬಹುದು. ಸೂರ್ಯಪಥವನ್ನು ಗಮನಿಸುವಲ್ಲಿ 'ಕಾಲ'ದ ಗಣನೆಯನ್ನು 'ಅರಿಯು'ವುದು ಒಂದು ವೈಜ್ಞಾನಿಕ-ಖಗೋಳಶಾಸ್ತ್ರಕ್ಕೆ ಸೇರಿದ ವಿಷಯವಾಗಿದೆ. ಭಾಸ್ಕರಾಚಾರ್ಯ IIನ ಕಾಲವನ್ನು ಕ್ರಿ.ಶ. ೧೪-೧೫-೧೬ನೇ ಅವಧಿಗೆ ಸೇರಿಸಬಹುದಾಗಿದೆ.

(೩) ಹಂಪೆಗೆ 'ಭಾಸ್ಕರ ಕ್ಷೇತ್ರ' ಎಂಬ ಹೆಸರನ್ನು ಮರೆಯಲಾಗದಂತೆ 'ಹಳೆಯ ಗೋಪುರ'ದ (ನದಿಯ ಕಡೆಗೆ ಹೋಗುವ ದ್ವಾರದ ಮೇಲಿನ ಗೋಪುರ) ನೆರಳಿನ 'ಪೆಂಡುಲಂ' ಚಲನೆಯನ್ನು ಕುರಿತು ಯಾರು ಬೇಕಾದರೂ ವಿಚಾರಮಾಡಬಹುದು. ಬೇರೆಯ 'ಗಡಿಯಾರದ' ಅನುಕೂಲವಿರದಿದ್ದ ಅಂದಿನ ಕೃಷ್ಣ (ದೇವ)ರಾಯನ ಹಂಪೆಯ

ಆಳ್ವಿಕೆಯ ಸಮಯದಲ್ಲಿ ಸೂರ್ಯ ವಿಗ್ರಹ(ಗಳು)ವನ್ನೂ ಗೋಪುರದ ನೆರಳಿನಿಂದ, ಪಿನ್‌ಹೋಲ್ ಕ್ಯಾಮರಾ (ಜಪಾನಿನ ಕ್ಯಾಮರಾಗಳು ಕಳೆದ ಶತಮಾನದ, ಸ್ವಾತಂತ್ರ್ಯ ಪೂರ್ವದಲ್ಲಿ ಮಾರುಕಟ್ಟೆಯಲ್ಲಿ ದೊರಕುತ್ತಿದ್ದುವು. ನನ್ನ ಬಾಲ್ಯದ ನೆನಪು) ಪ್ರಾಯೋಗಿಕತೆಗೆ 'ಕಾಲದ ಗಣನೆ'ಯುನ್ನು, ವರ್ಷದಲ್ಲಿ ಚಂದ್ರನ ಚಲನೆಯನ್ನು ಗುರುತಿಸುತ್ತಾ, ಅರಿತುಕೊಳ್ಳುವ 'ವೈಜ್ಞಾನಿಕತೆ'ಯ 'ರೀತಿ'ಯೆಂದು ಹೇಳಬಹುದಾಗಿದೆ. ಭಾಸ್ಕರಾಚಾರ್ಯನು ಇಂಥ ಪ್ರಾಯೋಗಿಕತೆ ಕಾರಣಕರ್ತನಾಗಿದ್ದಿರಬೇಕೆಂದು ನಮ್ಮ ಕೆಲವು ಹಳೆಯ, 'ಅವಶೇಷಗಳಂತೆ' ಇರುವ ದೇಗುಲಗಳಿಂದ ಗುರುತಿಸಲು ಸಾಧ್ಯವಾಗುತ್ತಿದೆ. ಈ ದೇಗುಲಗಳಲ್ಲಿ ಸೂರ್ಯೋದಯದ ಕಿರಣಗಳಿಗಾಗಿ ಅಧಿಷ್ಠಾನವನ್ನು ಎರಡು-ಮೂರು ಹಂತಗಳಲ್ಲಿ ಏರಿಸಿರುವುದನ್ನು ಉದಯ ಕಾಲದಲ್ಲಿ 'ಸೂರ್ಯ'ನನ್ನ ನೋಡಿದರೆ 'ಮೊದಲ ಆರ್ಷೇಯ ಮುಹೂರ್ತ'ವನ್ನೂ ಲೆಕ್ಕಾಚಾರ ಮಾಡುವ ಪದ್ಧತಿಯನ್ನೂ ಇದನ್ನು ಪಂಚಾಂಗದವರು 'ದೃಗ್ ಗಣಿತ' ಎನ್ನುವುದನ್ನೂ ಅರ್ಥಮಾಡಿಕೊಳ್ಳಬಹುದಾಗಿದೆ. ಇಂಥ ಪ್ರಯೋಗಗಳನ್ನು ಭಾಸ್ಕರಾಚಾರ್ಯನಿಗೆ ಅನ್ವಯಿಸಿದರೆ ತಪ್ಪಾಗಲಾರದು.

(೪) ಹೀಗೆ 'ಹಂಪೆ'ಯು ಭಾಸ್ಕರ ಕ್ಷೇತ್ರವಾಗಿದ್ದುದನ್ನು ಸರಿಯಾಗಿ ಅರಿತಿದ್ದಿರಬಹುದಾದ ಕ್ರಿ.ಶ. ೧೫೦೯ರಿಂದ ೧೫೨೯-೩೦ರ ಅವಧಿಯಲ್ಲಿ ಆಳಿದ ಕೃಷ್ಣ(ದೇವ) ರಾಯನನ್ನು ಗೌರವಿಸಬಹುದಾಗಿದೆ. ಇದು 'ಪರಕೀಯವಾದ', ಬಹುಶಃ ಪಾಶ್ಚಿಮಾತ್ಯ ಮೂಲದ ಗಣನೀಯವಾದ ಅರಿವಾಗಿದ್ದರಲೂಬಹುದು. ಈ ಅನುಮಾನಕ್ಕೆ ಅಡ್ಡಿಯಾಗುವ ಒಂದು ವಿಷಯವೆಂದರೆ ನಮ್ಮ 'ಸೂರ್ಯ' ದೇಗುಲಗಳು ಸುಮಾರು ಕ್ರಿ.ಶ.ದ ಏಳು-ಎಂಟನೇ ಶತಮಾನಗಳಷ್ಟು ಹಿಂದಿನವೆಂಬುದನ್ನು ನಮ್ಮ 'ಪಂಚಾಂಗ ಶ್ರವಣ'ಕ್ಕಾಗಿ, ಪ್ರತಿ 'ಯುಗಾದಿ'ಯಲ್ಲೂ ಇದು ಕಂಡುಬರುತ್ತಿರುವ ಅಭ್ಯಾಸ ಮತ್ತು ಕಾಲಗಣನೆಯ 'ಸತ್ಯ'ವಾಗಿದೆ.

ನಮ್ಮಿಂದಲೇ ಅವರಿಗೆ – 'ಪಾಶ್ಚಿಮಾತ್ಯರಿಗೆ' ಹೋಗಿದೆಯೆಂಬುದಾದರೆ ಅದಕ್ಕೆ ತಕ್ಕ ಮಾಹಿತಿಗಳೂ ಇಲ್ಲವಾಗಿರುವುದನ್ನೂ ಮರೆಯುವಂತಿಲ್ಲ. ಆದುದರಿಂದ 'ಅಭಿಮಾನ' ವಾಗುತ್ತದೆ. ಶಕ ವರ್ಷಗಳನ್ನು ಉದಾಹರಿಸುವುದಾದರೆ, ಅದಕ್ಕೂ ಹಿಂದೆ ಆರ್ಷೇಯ ಸಂಸ್ಕೃತಿಗಳಲ್ಲಿ ಸೂರ್ಯಾರಾಧನೆಯಿದ್ದುದಕ್ಕೆ ಇತಿಹಾಸವು 'ಮಣೆ' ಹಾಕುತ್ತದೆ.

ಆದರೂ 'ಹಂಪೆ'ಯಲ್ಲಿ ಕಾಲಗಣನೆಯು 'ಪೆಂಡುಲಂ' ನೆನಪಿಸುವ ರೀತಿಯಿಂದ ಶ್ರೀಕೃಷ್ಣ(ದೇವ) ರಾಯನಿಗೆ ವಂದನೆಗಳು.

**ಕ. ವೆಂ. ರಾಜಗೋಪಾಲ**
ಸಂಖ್ಯೆ ೩೯, 'ಸಹನ ಮಂದಿರ', ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಅಶ್ವತ್ ನಗರ, ಬೆಂಗಳೂರು - ೫೬೦ ೦೯೪

# ಬೆತ್ತಲೆ ಫಕೀರ



ನನ್ನ ಬದುಕು, ಹಾಗೆ ನಿನ್ನದೂ,
ಹಳೆಯ ಉಡುಪಿನಂತೆ
ಸಾವಿರ ಹೂಗಳ ಕುಸುರಿ ನೇಯ್ಗೆ ಅದಕ್ಕೆ,
ಆ ಹೂಗಳಲ್ಲಿ
ಕೆಲವಷ್ಟು ರಕ್ತದ್ದು, ಮತ್ತಷ್ಟು ಜ್ವಾಲೆಯದ್ದು,
ಕೆಲವು ಕಣ್ಣೀರಿನದ್ದು, ಮತ್ತೆ ಕೆಲವು ನಿಟ್ಟುಸಿರುಗಳದ್ದು,
ಕೆಲವು ಭಯದ್ದವಾದರೆ, ಮತ್ತಷ್ಟು ಪಾಪಗಳದ್ದು,
ಒಂದಷ್ಟು ಅರ್ಧ-ಮುಚ್ಚಿದ ನಗುವಿನವು,
ಮತ್ತೊಂದಷ್ಟು ಅರೆತೆರೆದ ಕಣ್ಣುಗಳಿಂದ ಹೊಮ್ಮುವ ಪದಗಳು;
ಹಳೆಯ ಉಡುಪೊಂದರಂತೆ
ನನ್ನ ಬದುಕು, ನಿನ್ನದೂ ಅಷ್ಟೆ.

ಅನಂತತೆಯೆಂಬುದು ಬೆತ್ತಲೆ ಫಕೀರ,
ಅವನುಟ್ಟ ಬಟ್ಟೆ, ಗಾಳಿ,
ಅವನುಡುಪು, ಮೇರುಗಳು,
ಕೆಲವೊಮ್ಮೆ ಅವನು ಚಂದಿರನ ಧರಿಸುತ್ತಾನೆ
ಅಥವಾ ಈಗಷ್ಟೆ ಉದಯಿಸಿದ ಸೂರ್ಯನ
ಬೆಳಕಲ್ಲಿ ತನ್ನ ದೇಹವ ಮುಚ್ಚಿಕೊಳ್ಳುತ್ತಾನೆ,
ಅಥವಾ ಹೂಬಣ್ಣದ ಮೃದು ರೇಶಿಮೆ ನುಣುಪಿನಿಂದಲೋ
ಹೂಗಂಧದ ಹೊಳೆವ ಬಟ್ಟೆಯಲ್ಲೋ
ತನ್ನ ದೇಹವ ತುಂಬಿಕೊಳ್ಳುತ್ತಾನೆ,
ಆದರೂ ಇವ ಅಲೆಯುವುದು ಬೆತ್ತಲೆಯಾಗೆ.
ರಾತ್ರಿ ಮತ್ತು ಹಗಲಿನ ಉಡುಪು
ಅವನ ಅಮೂರ್ತ ದೇಹವ
ಮುಚ್ಚಲಾರವು.

ನನ್ನ ಬದುಕು, ಅಂತೆ ನಿನ್ನದೂ,
ಅವನಿಗೆ ಹೊಸ ಉಡುಪನ್ನು ನೀಡುತ್ತದೆ,
ಸರಳ ವಿವೇಕದ ಜೀವಮಿಡಿತ ಇದು
ನಿತ್ಯವನ್ನು ತುಂಬಿಕೊಳ್ಳುವ
ಅನಂತದ ಬೆತ್ತಲು.

ಉರ್ದು ಮೂಲ : **ಅಲಿ ಸರ್ದಾರ್ ಜಾಫ್ರಿ**
ಕನ್ನಡಕ್ಕೆ : **ಜ. ನಾ. ತೇಜಶ್ರೀ**
ಸಂ. ೧೨೩, 'ಹೊನ್ನು', ಹಳೇ ಬೋರ್‌ವೆಲ್
ಆಫೀಸ್ ಹಿಂಭಾಗ, ವಿಶ್ವೇಶ್ವರಯ್ಯ ರಸ್ತೆ ಹತ್ತಿರ
ವಿದ್ಯಾನಗರ, ಹಾಸನ - ೫೭೩ ೨೦೧

# ನವಕರ್ನಾಟಕ ಪ್ರಕಾಶನದ ಮೂರು ಪುಸ್ತಕಗಳು







**ಕಾಡುಪ್ರಾಣಿಗಳ ಜಾಡಿನಲ್ಲಿ**
ಕೆ. ಉಲ್ಲಾಸ ಕಾರಂತ
ಬೆಲೆ : ರೂ. 80

**ಕಾಡಿನೊಳಗೊಂದು ಜೀವ**
ಕೆ. ಎಂ. ಚಿಣ್ಣಪ್ಪ
ಬೆಲೆ : ರೂ. 160

**ವನ್ಯಜೀವಿಗಳ ಜಾಡು ಹಿಡಿದು**
ಸಂಜಯ್ ಗುಬ್ಬಿ
ಬೆಲೆ : ರೂ. 120

ವನ್ಯಜೀವಿ ವಿಜ್ಞಾನಕ್ಕೆ ನೇರವಾಗಿ ಸಂಬಂಧಿಸಿದ ವೆನ್ನಬಹುದಾದ ಮೂರು ಪುಸ್ತಕಗಳನ್ನು ಓದಿದ ಮೇಲೆ ನವಕರ್ನಾಟಕ ಪ್ರಕಾಶನದ ಸುವರ್ಣ ಸಂಭ್ರಮದಲ್ಲಿ ಮತ್ತೊಂದು ಗರಿ ಮೂಡಿದ್ದು ಹೆಚ್ಚು ಗೋಚರವಾಯಿತು. ಅದೇ ಕನ್ನಡದ ಮಟ್ಟಿಗೆ 'ವನ್ಯಜೀವಿ ವಿಜ್ಞಾನ'ದಲ್ಲಿ ಮೊದಲನೆಯ ಹಂತದವೂ ಮುಖ್ಯವಾದಂಥವು ಎನ್ನಬಹುದಾದ ಸಾಹಿತ್ಯ ರಚನೆ.

ಮೂರು ವರ್ಷಗಳ ಹಿಂದೆ 'ಹುಲಿರಾಯನ ಆಕಾಶವಾಣಿ'ಯ ಪ್ರಕಟಣೆಯೊಂದಿಗೆ ಕಂಡುಬಂದ ಈ ನಡೆ ಈ ವರ್ಷ ಪ್ರಕಟವಾದ ಈ ಮೂರು ಕೃತಿಗಳ ಮೂಲಕ ಸ್ಪಷ್ಟವಾಗಿದೆ. ಡಾ|| ಉಲ್ಲಾಸ ಕಾರಂತರ ವಿಷಯ ಪರಿಣತಿ (ಹಾಗೆಯೇ ಚಿಣ್ಣಪ್ಪನವರ ಕ್ಷೇತ್ರ ಪರಿಣತಿ) ಮತ್ತು ಟಿ. ಎಸ್. ಗೋಪಾಲ ಅವರ ನಿರೂಪಣೆ – ಈ ಕೃತಿಗಳಲ್ಲಿ ಎರಡು ಸಾಧನೆಗಳನ್ನು ಸಾಧಿಸಿದೆ : (೧) ವನ್ಯಜೀವಿ ವಿಜ್ಞಾನದ ಮೂಲ ಲಕ್ಷಣಗಳನ್ನು – ಅದು ವನ್ಯಜೀವಿಗಳ ಬದುಕಿಗೆ ಸಂಬಂಧಿಸಿದ ಪರಿಮಾಣೀಕೃತ ಪ್ರಮೇಯಗಳಾಗಿರಬಹುದು ಇಲ್ಲವೇ ವನ್ಯಜೀವಿಗಳ ಆವಾಸದ ಅರಣ್ಯಕ್ಕೆ ಬರುವ ಅಪಾಯಗಳಾಗಿರಬಹುದು, ವೈಜ್ಞಾನಿಕ ಸ್ಪರ್ಶವೇ ಇಲ್ಲದ ರೂಢಿಗತ ಸಂಪ್ರದಾಯಗಳ ವಿಶ್ಲೇಷಣೆಯಾಗಿರಬಹುದು, ವನ್ಯ ಜೀವಿ ಅಧ್ಯಯನದ ವಿಧಾನಗಳಾಗಿಲಬಹುದು – ಸ್ಪಷ್ಟವಾಗಿ ನಮೂದಿಸಿರುವುದು. (೨) ವನ್ಯಜೀವಿಗಳ ಬದುಕಿನೊಂದಿಗೆ ಸಂಕೀರ್ಣವಾಗಿ ಬೆರೆತುಕೊಂಡಿರುವ ಮನುಷ್ಯ ಜೀವಿಗಳ ಬದುಕು - ಭಾವಗಳ ನಿರೂಪಣೆ. ಈ ಇಬ್ಬಗೆಯ ವಿವರಗಳು ಒಂದೇ ನಿರೂಪಣೆಯಾಗಿ ಬರುವ ಶೈಲಿ ಅಪೂರ್ವವಾದದ್ದು.

ಸಂಜಯ್ ಗುಬ್ಬಿಯವರ ಕೃತಿಯಲ್ಲೂ ಶಬ್ದಗಳಿಗಾಗಿಯೋ ವಿಷಯಗಳಿಗಾಗಿಯೋ ತಡಕಾಡಿದಂಥ ಸನ್ನಿವೇಶವೇ ಬರುವುದಿಲ್ಲ. ಹೇಳುವುದನ್ನು ನೇರವಾಗಿ ಸರಳವಾಗಿ ಹೇಳಿದ್ದಾರೆ.

'ಹುಲಿರಾಯನ ಆಕಾಶವಾಣಿ'ಯೂ ಸೇರಿದಂತೆ ಈ ನಾಲ್ಕು ಕೃತಿಗಳು ಒಂದೇ ವಿಷಯದ ಸುತ್ತ ಬೆಳೆದಿವೆ. ಅದನ್ನು ತೋರಿಸುವ ಸಂದರ್ಭ-ಸನ್ನಿವೇಶಗಳೂ ಕೃತಿಗಳಲ್ಲಿ ಬರುತ್ತವೆ. ಆದರೆ 'ಪುನರುಕ್ತಿ' ಎಂದು ಹೇಳಿಸಿಕೊಳ್ಳುವಂತೆ ಎಲ್ಲೂ ಆಗದಿರುವುದು ಈ ಬರಹಗಳ ಒಂದು ಧನಾತ್ಮಕ ಅಂಶ.

ನಾಲ್ಕೂ ಪುಸ್ತಕಗಳು ಶೈಕ್ಷಣಿಕ ಮಹತ್ವದ್ದವಾಗಿವೆ. ಇವು ಜನರ ಬಳಿ ಹೋದಷ್ಟೂ ವನ್ಯಜೀವಿಗಳ ಕ್ಷೇಮಕ್ಕೆ ಒಳ್ಳೆಯದಾಗುತ್ತದೆ. ಓದುಗರ ಅನುಕ್ರಿಯೆ ಈ ದಿಶೆಯಲ್ಲಿ ಹೊರಳಲಿ ಎಂದು ನಾನು ಆಶಿಸುತ್ತೇನೆ.

ಪುಸ್ತಕಗಳನ್ನು ಓದುತ್ತಿದ್ದಂತೆ ನನ್ನ ಮನಸ್ಸಿನಲ್ಲಿ ಇನ್ನೊಂದು ಯೋಚನೆ ಹೊಳೆಯಿತು. ಹಿಂದೆ 'ಪರಿಸರ ವಿಜ್ಞಾನ' ಎಂಬ ವಿಷಯ ಶಾಲಾ ಪಠ್ಯಗಳಲ್ಲಿ ಇರಲಿಲ್ಲ. ಆದರೆ ಈಗ ಆ ಹೆಸರು ಮಾತ್ರವಲ್ಲದೆ ಅದರ ಬೇರೆ ಬೇರೆ ಮಗ್ಗುಲುಗಳನ್ನು ಪರಿಚಯಿಸುವ ಪಾಠಗಳು ವಿಜ್ಞಾನ, ಸಮಾಜ ವಿಜ್ಞಾನ, ಸಾಹಿತ್ಯ – ಇವಕ್ಕೆ ಸಂಬಂಧಿಸಿದ ಪಠ್ಯಪುಸ್ತಕಗಳಲ್ಲಿ ಗೋಚರಿಸುತ್ತವೆ. ಪದ ಸಂಪದವನ್ನು ನೆನೆದರೆ ಕೆಲವು ಪದಗಳು ಬಳಕೆಗೆ ಬಂದರೂ sustainable, innovationನಂಥ ಕೆಲವು ಪದಗಳಿಗೆ ಶಿಷ್ಟ ಪದಗಳ ಉಪಯೋಗ ಆಗುತ್ತಾ ಇಲ್ಲ. ಅಂದರೆ ಪಾರಿಭಾಷಿಕ ಪದವೊಂದು ರೂಢಿಗೆ ಬರಲು ಕಾಲಾವಕಾಶ ಬೇಕಾಗುತ್ತದೆ. ಜಾಗತಿಕ ಹಾಗೂ ರಾಷ್ಟ್ರೀಯ ನೆಲೆಗಳಿಂದ ಯೋಚಿಸುವಾಗ ವನ್ಯಜೀವಿವಿಜ್ಞಾನದ ಮೂಲಭೂತ ವಿಷಯಗಳು ಶಾಲಾಪಠ್ಯದಲ್ಲಿ ಸೇರುವ ಸಾಧ್ಯತೆ ಭವಿಷ್ಯದಲ್ಲಿ ಹೆಚ್ಚಾಗುತ್ತಿದೆ ಎಂದು ಅನಿಸುತ್ತದೆ. ಆ ದೃಷ್ಟಿಯಿಂದ 'ವಿಜ್ಞಾನ-ತಂತ್ರಜ್ಞಾನ ಪದ ಸಂಪದ'ದಂಥ ಕೃತಿಯಲ್ಲಿ 'ವನ್ಯಜೀವಿ ವಿಜ್ಞಾನ'ಕ್ಕೆ ಸಂಬಂಧಿಸಿದ ಮೂಲ ಪದಗಳು ಇದ್ದಷ್ಟೂ ಸಮಕಾಲೀನತೆಗೆ ಸ್ಪಂದಿಸಿದಂತಾಗುತ್ತದೆ. ಈಗ ಸಾಧ್ಯವಾಗದೇ ಹೋಗಬಹುದು. ಆದರೆ ಮುಂದೆ ಇದು ಸಾಧ್ಯವಾಗಬಹುದು. (ಉದಾಹರಣೆಗೆ : browse, graze, barking dear, semi jungle, tiger block, secondary forest, semi evergreen, moist evergreen – ಇವಕ್ಕೆಲ್ಲ ವನ್ಯಜೀವಿ ವಿಜ್ಞಾನದಲ್ಲಿ ಸೂಕ್ಷ್ಮ ವ್ಯತ್ಯಾಸಗಳಿದ್ದು ಮಹತ್ವ ಪಡೆಯುತ್ತವೆ.


**ಅಡ್ಯನಡ್ಕ ಕೃಷ್ಣಭಟ್**
'ಸಾರಸ', ನಂ. ೨೩೦೧, ೨ನೇ ಅಡ್ಡರಸ್ತೆ, ವಿಜಯನಗರ
೨ನೇ ಹಂತ, ಮೈಸೂರು - ೫೭೦ ೦೧೭

# ಇನ್ನಿಲ್ಲವಾದ ಕಿ.ರಂ.

ದೆಹಲಿ - ಕುರುಕ್ಷೇತ್ರಗಳಲ್ಲಿ ಒಂದು ವಾರ ಕಳೆದು ಆಗಸ್ಟ್ ೭ನೇ ಶನಿವಾರದಂದು ಬೆಂಗಳೂರಿಗೆ ರೈಲಿನಲ್ಲಿ ರಾತ್ರಿ ೮.೫೦ಕ್ಕೆ ಹೊರಟೆ. ಹೆಚ್ಚು ಕಡಿಮೆ ಅದೇ ಸಮಯಕ್ಕೆ ಬೆಂಗಳೂರಿನಲ್ಲಿ ಪ್ರಿಯ ಮಿತ್ರ ಕಿ. ರಂ. ನಾಗರಾಜ ತಮ್ಮ ಅಂತಿಮ ಪ್ರಯಾಣ ನಡೆಸಿಬಿಟ್ಟಿದ್ದಾರೆ. ಅವರಿಗೆ ಯಾವಾಗಲೂ ಪುಲಕ ನೀಡುತ್ತಿದ್ದ ಬೇಂದ್ರೆಯವರನ್ನು ಕುರಿತು ಅಂದು ಸಂಜೆ ಯಥಾಪ್ರಕಾರ ಭರ್ಜರಿ ಉಪನ್ಯಾಸ ನೀಡಿ, ಮನೆಗೆ ಹಿಂದಿರುಗುವಾಗ ಆಸ್ಪತ್ರೆಗೆ ಹೋಗಿದ್ದರಂತೆ. ಅಲ್ಲೇ ಒಂದು ದಿನ ಉಳಿಯಬೇಕೆಂಬ ವೈದ್ಯರ ಸಲಹೆಯನ್ನು ತಳ್ಳಿಹಾಕಿ, ಕೆರಳಿ, ಮನೆಗೆ ತೆರಳಿದ ಕಿ.ರಂ. ಸ್ವಲ್ಪ ಕಾಲಾನಂತರ ತೆರಳಿಯೇಬಿಟ್ಟರು. ಅವರಿನ್ನಿಲ್ಲವೆಂದು ನಂಬುವುದು ನನಗೆ ಸಾಧ್ಯವಾಗಿಲ್ಲ. ನಾನವರನ್ನು ಕಡೆಯ ಬಾರಿ ಭೇಟಿಯಾದದ್ದು ಜುಲೈ ೧೬ರಂದು. ಸುಮಾರು ಹೊತ್ತು ಅಂದು ಜೊತೆಯಲ್ಲಿದ್ದೆವು. ಅಂದು ಡಾ॥ ಎಸ್. ಚಂದ್ರಶೇಖರ್ ಅವರ ಅಭಿನಂದನೆಯ ಭಾಗವಾಗಿ ಎರಡು ಗೋಷ್ಠಿಗಳನ್ನು ಆಯೋಜಿಸಲಾಗಿತ್ತು. ಬೆಳಗಿನ ಗೋಷ್ಠಿಗೆ ನಾನು ಮತ್ತು ಮಧ್ಯಾಹ್ನದ ಗೋಷ್ಠಿಗೆ ಕಿ. ರಂ. ಅಧ್ಯಕ್ಷರು. ಅವರ ಗೋಷ್ಠಿ ತಡವಾಗಿ ಆರಂಭವಾಯಿತಲ್ಲದೆ ಕೆಲವು ವಿದ್ವಾಂಸರು ಅತಿದೀರ್ಘ ಭಾಷಣಗಳನ್ನು ಮಾಡಿದರು. ಎಲ್ಲಾ ಡಾ॥ ಚಂದ್ರಶೇಖರ್ ಅವರ ಕೃತಿಗಳನ್ನು ಕುರಿತು. ಕಡೆಗೆ ಕಿ.ರಂ. ಮಾತನಾಡಬೇಕಾದ ವೇಳೆಗೆ ಮೊದಲೇ, ಉಪನ್ಯಾಸವನ್ನು ಶೀಘ್ರದಲ್ಲಿ ಮುಗಿಸಬೇಕೆಂದು ಚೀಟಿಯನ್ನು ಕೊಡಲಾಗಿತ್ತು. ಆದರೆ ಕಿ. ರಂ. ಬೇಸರಿಸದೆ ಲಕ್ಷಣವಾಗಿ ಮಾತನಾಡಿ ಇತಿಹಾಸ ಪ್ರಾಧ್ಯಾಪಕರಿಗೆ ಹೇಳಿದರು : ''ಭೈರಪ್ಪ 'ಆವರಣ'ದಂತಹ ಅಚಾರಿತ್ರಿಕ ಕೃತಿ ಪ್ರಕಟಿಸಿದಾಗ ನೀವೆಲ್ಲಾ ತೆಪ್ಪಗಿದ್ದಿರಿ; ಸಾಹಿತ್ಯ ವಿಮರ್ಶಕರಾದ ನಾವು ನಿಮ್ಮ ಕೆಲಸ ಮಾಡುವಂತಾಯಿತು. ನಿಮ್ಮ ಕರ್ತವ್ಯದಿಂದ ವಿಮುಖರಾಗಿದ್ದು ಜನಕ್ಕೆ, ಓದುಗರಿಗೆ ಎಸಗಿದ ಅಪಚಾರ. ಚಂದ್ರಶೇಖರ್ ಮಾಡುವಂತೆ ಇತಿಹಾಸ ಮತ್ತು ಸಾಹಿತ್ಯ ಪೂರಕ ಶಿಸ್ತುಗಳಾಗುವಂತೆ ಮಾಡಬೇಕಾದ್ದು ನಮ್ಮೆಲ್ಲರ ಕರ್ತವ್ಯ'', ಎಂದು. ನಂತರ ಹತ್ತಿರ ಬಂದ ಕಿ. ರಂ. ಹೇಳಿದರು, ''ಹೀಗೆ ಚೀಟಿ ಕೊಟ್ಟುಬಿಟ್ಟರೆ ಬಹಳ ಮುಜುಗರ ಉಂಟಾಗುತ್ತದೆ ನೋಡಿ. ಬೆಳಿಗ್ಗೆ ನಿಮಗೆ ಚೀಟಿ ಕೊಡಲಿಲ್ಲ, ಈಗ ನನಗೆ ಕೊಟ್ಟುಬಿಟ್ಟರು. ಸಭೆಯನ್ನು ತಡವಾಗಿ ಶುರುಮಾಡಿರೆಂದು ನಾವು ಹೇಳಿದ್ದೆವೆ ?'' ಎಂದು. ಅದೇನು ಜೀವನ ವ್ಯಂಗ್ಯವೋ ಕಾಣೆ, ಆದರೆ ನಾನೆಂದೆ : ''ಇದೇನು ಮಹಾ ಬಿಡಿ, ಇನ್ನೂ ಎಂತೆಂಥವೋ ಚೀಟಿಗಳನ್ನು ಪಡೆಯಬೇಕಾಗುತ್ತದೆ'' ಎಂದು. ಎಂದಿನಂತೆ ಕಿ. ರಂ. ಮುಸಿನಕ್ಕರು. ಈಗ ಚೀಟಿ ಪಡೆದು ಹೊರಟುಹೋಗಿದ್ದಾರೆ.

ಅವರನ್ನು ಕುರಿತ ಒಂದು ಲೇಖನವನ್ನು ನಾನು ೨೨-೨-೨೦೦೮ರಂದು ಬರೆದಿದ್ದೆ. ಅದು ಎಲ್ಲಿ ಪ್ರಕಟವಾಗಬೇಕೆಂಬ ಉದ್ದೇಶವಿದ್ದಿತೋ ಅಲ್ಲಿ ಈವರೆಗೆ ಪ್ರಕಟವಾಗಿಲ್ಲ. ಅದನ್ನು ಈಗ ಪ್ರಕಟಿಸಲು ವ್ಯಸನ ಎನಿಸುತ್ತದೆಯಾದರೂ ಬಹು ಕಾಲದ ಗೆಳೆಯ ಕಿ. ರಂ. ಅವರ ನೆನಪಿಗೆಂದು ಇದನ್ನು 'ಹೊಸತು' ಓದುಗರೊಡನೆ ಹಂಚಿಕೊಳ್ಳುತ್ತಿದ್ದೇನೆ. ನಮ್ಮ ಕಿ. ರಂ. 'ಹೊಸತು'ಗಾಗಿ ಏನನ್ನೂ ಬರೆಯಲಿಲ್ಲ, ಆದರೆ ಪ್ರತಿ ತಿಂಗಳೂ ತಪ್ಪದೆ ಅದನ್ನು ಓದಿ ವಿಮರ್ಶೆ ಹೇಳುತ್ತಿದ್ದರು. ಸಂಪಾದಕೀಯಗಳ ಬಗ್ಗೆ ಅವರ ಅನೇಕ ಅನಿಸಿಕೆಗಳು ಮತ್ತು ಸಲಹೆಗಳು ಸದಾ ಉಪಯುಕ್ತವಾಗಿ ಇರುತ್ತಿದ್ದವು. ಬೇರೆ ಲೇಖನಗಳ ಬಗೆಗೂ ಪ್ರತಿಕ್ರಿಯೆ ತಿಳಿಸುತ್ತಿದ್ದರು. 'ಹೊಸತು' ಕಿ. ರಂ. ಅವರ ನಿಧನಕ್ಕೆ ದುಃಖಿಸುತ್ತಾ ಅವರನ್ನು ಪ್ರೀತಿಯಿಂದ ನೆನೆಸಿಕೊಳ್ಳುತ್ತದೆ.

ಜಿ. ರಾಮಕೃಷ್ಣ

# ಕಿ.ರಂ. ಆದ ಕೆ.ಆರ್.ಎನ್.



ಎಪ್ಪತ್ತರ ದಶಕದ ಆದಿಭಾಗದಲ್ಲಿ ಕಾಲೇಜಿನಲ್ಲಿ ಒಂದು ಘಟನೆ ಜರುಗಿತು. ಅದು ನನಗೆ ಅವಿಸ್ಮರಣೀಯ. ರಾಷ್ಟ್ರೀಯ ಸ್ವಯಂಸೇವಕ ಸಂಘವು ''ಅಂಜುವೆದೆ ನಮ್ಮದಲ್ಲ'' ಎಂಬ ಹೆಸರಿನ ಕಿರುಹೊತ್ತಿಗೆಯನ್ನು ಪ್ರಕಟಿಸಿತ್ತು. ಅದರ ಪ್ರತಿಗಳನ್ನು ತಂದು ಕಾಲೇಜಿನಲ್ಲಿ ವಿತರಣೆ ಮಾಡಲಾಗುತ್ತಿತ್ತು. ನಾನು ಮತ್ತು ಕಿ.ರಂ. ಕಾಲೇಜಿನ ಆವರಣದಲ್ಲಿ ನಿಂತಿದ್ದಾಗ ಒಂದು ಗುಂಪು ಬಂದು ಅದನ್ನು ಕೊಳ್ಳುವಂತೆ ವಿನಂತಿಸಿಕೊಂಡಿತು. ನಾವಿಬ್ಬರೂ ನಿರಾಕರಿಸಿದೆವು. ಸ್ವಲ್ಪ ವಾಗ್ವಾದದ ನಂತರ ಅದರ ಒಂದು ಪ್ರತಿಯನ್ನು ಬಲವಂತವಾಗಿ ಕಿ.ರಂ. ಅವರ ಕೈಲಿ ಇರಿಸಿದರು. ಅವರು ಅದನ್ನು ಒಂದು ಉಂಡೆ ಮಾಡಿ ನೆಲದ ಮೇಲೆ ಬಿಸಾಡಿದರು.

ಬಹುಶಃ 'ರಮ್' (ಧಾತುವಾಗಿ ಒಂದರ್ಥ, ನಾಮಪದವಾಗಿ ಇನ್ನೊಂದರ್ಥ) ಎನ್ನುವುದನ್ನು ಹೆಸರಿನಿಂದ ಬೇರ್ಪಡಿಸಿದರೆ ಅವರ ರಮ್ಯ ಮತ್ತು ರಮ್ ಗುಣ ಎಲ್ಲಿ ಕಳೆದುಹೋಗುತ್ತದೆಂಬ ಶಂಕೆಯಿಂದಲೋ ಏನೋ ನಮಗೆಲ್ಲಾ ಕೆ.ಆರ್.ಎನ್. ಎಂದು ಹೆಚ್ಚು ಪರಿಚಿತರಾಗಿದ್ದ ಕಿ. ರಂ. ನಾಗರಾಜ ನಮ್ಮ ಕಾಲೇಜನ್ನು ಬಿಟ್ಟು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ತೆರಳಿದ ತರುವಾಯದಲ್ಲಿ ಕಿ.ರಂ. ಆಗಿಬಿಟ್ಟರು. ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿದ್ದಾಗಲೇ ಅವರಿಗೆ ಈ ನಾಮಧೇಯ ದೊರೆತಿತ್ತೆಂದು ಅವರ ವಿದ್ಯಾರ್ಥಿಗಳು ಕೆಲವರು ಹೇಳುತ್ತಾರೆ. ಅವರನ್ನು ಹಾಗೆ ಸಂಬೋಧಿಸಿದ್ದು ನನಗಂತೂ ತಿಳಿಯದು. ೧೯೭೦ರ ದಶಕದ ಆರಂಭದಲ್ಲಿ ಐದಾರು ವರ್ಷ ನಾನು ಮತ್ತು ಕಿ.ರಂ. ನಮ್ಮ ಕಾಲೇಜಿನಲ್ಲಿ ಬಹಳ ಹೆಚ್ಚಿನ ವೇಳೆ ಜೊತೆಯಲ್ಲಿ ಕಳೆದಿದ್ದೇವೆ. ಅವರಿಗೆ ಅದೆಷ್ಟು ಜ್ಞಾಪಕವಿದೆಯೋ ತಿಳಿಯದು, ಆದರೆ ಅದು ನನ್ನ ಸ್ಮೃತಿಪಟಲದಿಂದ ಅಳಿಸಿ ಹೋಗುವುದಿಲ್ಲ. ಅವರ ಅನೇಕ ವಿದ್ಯಾರ್ಥಿಗಳು ಬಹಳ ಗೌರವದಿಂದ ಕಿ.ರಂ. ಅವರ ಬಗ್ಗೆ ಮೆಚ್ಚಿಗೆಯ ಮಾತುಗಳನ್ನಾಡುತ್ತಾರೆ. ಅದನ್ನು ಕೇಳಿದಾಗೆಲ್ಲಾ ನನಗೆ ಒಂದು ಬಗೆಯ ಹೆಮ್ಮೆ, ನಾನು ಈ ವ್ಯಕ್ತಿಯೊಡನೆ ನಿಕಟ ಸಂಪರ್ಕ ಹೊಂದಿದ್ದೆನಲ್ಲಾ, ಎಂದು. ಈಗ ಸಂಪರ್ಕ ಕಡಿಮೆ, ಆದರೆ ಅದರಿಂದ ನಿಕಟತ್ವಕ್ಕೇನೂ ಧಕ್ಕೆ ಬಂದಿಲ್ಲವೆಂದು ಬಗೆಯುತ್ತೇನೆ. ನಮ್ಮಿಬ್ಬರ ಬಾಂಧವ್ಯದಲ್ಲಿ ಔಪಚಾರಿಕತೆ ಅಸಹಜವಾದ್ದರಿಂದ ಅವರನ್ನು ಕುರಿತು ನಾಲ್ಕು ಮಾತು ಬರೆಯುವಾಗ ಶಿಸ್ತಿನಿಂದ ಒಂದು ಸ್ವೀಕಾರಾರ್ಹ ಲೇಖನವನ್ನು ಬರೆಯಬೇಕೆನಿಸುವುದಿಲ್ಲ. ಸಾಹಚರ್ಯದ ಸಂದರ್ಭಗಳಲ್ಲಿನ ಕೆಲವು ನೆನಪುಗಳನ್ನು ಮೆಲುಕುಹಾಕುವುದಷ್ಟೇ ನನ್ನ ಉದ್ದೇಶ. ಅದರಲ್ಲೂ ಒಂದು ಅಚ್ಚುಕಟ್ಟಾದ ಬಂಧವಿರಬೇಕೆಂಬ ನಿಯಮವೇನಾದರೂ ಇದ್ದರೆ ಅದನ್ನು ಪಕ್ಕಕ್ಕೆ ಸರಿಸುವ ಸ್ವಾತಂತ್ರ್ಯ ವಹಿಸುತ್ತೇನೆ.

ನಾನೆಷ್ಟೋ ಬಾರಿ ಅಂದುಕೊಂಡಿದ್ದೇನೆ ಮತ್ತು ಅವರಿಗೂ ಹೇಳಿದ್ದೇನೆ : ಅವರು ಹೊಂದಿರುವ ಇಂಗ್ಲಿಷ್ ಸಾಹಿತ್ಯದ ಜ್ಞಾನದ ಅರ್ಧದಷ್ಟಾದರೂ ನನಗೆ ಕನ್ನಡ ಸಾಹಿತ್ಯದಲ್ಲಿ ಪ್ರವೇಶ ಇದ್ದಿದ್ದರೆ ದೊಡ್ಡ ವಿದ್ವಾಂಸನಾಗಿ ಕಾಣಲು ಸಾಧ್ಯವಾಗುತ್ತಿತ್ತು, ಎಂದು. ನಾನು ಈಗಿನ ಮಾತು ಹೇಳುತ್ತಿಲ್ಲ; ನಾವು ಜೊತೆಯಲ್ಲಿದ್ದಾಗಿನ ೧೯೭೦ರ ಸಂದರ್ಭದ ವಿದ್ಯಮಾನವನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದೇನೆ. ಈಗಿನ ಅನುಪಾತವು ನನ್ನನ್ನು ಇನ್ನೂ ಕೆಳಕ್ಕೆ ತಳ್ಳಿದೆಯೆಂದು ವ್ಯಥಿಸಬೇಕು, ಅಷ್ಟೆ. ಹಾಗೆ ಬೆಳೆದಿದ್ದಾರೆ ಕಿ.ರಂ. ಎಂದರೆ ಅವರ ಬಗ್ಗೆ ಅಭಿಮಾನಕ್ಕೆ ಎಣೆಯಿಲ್ಲ. ಅವರ ವಿದ್ವತ್ತಿನ ಬಗ್ಗೆ ನಾನು ಬರೆಯಲು ಸಮರ್ಥನಲ್ಲ, ಅದು ಅಗತ್ಯವೂ ಅಲ್ಲ. ನನ್ನಲ್ಲಿ ಸಂಕೋಚ ಮತ್ತು ಸಂತೋಷ, ಎರಡನ್ನೂ ತುಂಬುವವರು ಕಿ.ರಂ. ವಯಸ್ಸಿನಲ್ಲಿ ನನಗಿಂತ ಕಿರಿಯರಾದ ಇವರು ವಿದ್ವತ್ತಿನಲ್ಲಿ ಹೆಮ್ಮರವಾಗಿ ಬೆಳೆದಿದ್ದಾರೆಂಬುದು ಸಂತೋಷಕ್ಕೆ ಕಾರಣ. ನನ್ನಂಥವರು ಕೇವಲ ಬಿಳಿಲುಗಳಾಗಿಯೇ ಉಳಿದದ್ದಕ್ಕೆ ಸಂಕೋಚ, ಅಷ್ಟೆ. ಅವರ ಆಳವಾದ ಪಾಂಡಿತ್ಯದ ಬಗ್ಗೆ ನನಗಿಂತಲೂ ಹೆಚ್ಚು ತಿಳಿದಿರುವವರು ನೂರಾರು ಮಂದಿ ಇದ್ದಾರೆ. ನನಗೆ ಗೊತ್ತಿರುವ ಕಿ.ರಂ. ಬಹುಮಟ್ಟಿಗೆ ಅವರ ಉಪನ್ಯಾಸಗಳಿಂದಷ್ಟೇ ಗೊತ್ತು. ಆದರೆ ಮೂವತ್ತೈದು-ನಲವತ್ತು ವರ್ಷಗಳ ಹಿಂದಿನ ಕಿ.ರಂ. ಅವರನ್ನು ಹತ್ತಿರದಿಂದ ನೋಡಿ, ಜೊತೆಯಲ್ಲಿ ಚೇಷ್ಟೆ-ಲೇವಡಿ-ಸಂವಾದ ನಡೆಸಿ, ಸ್ವಲ್ಪಮಟ್ಟಿಗೆ ಬಲ್ಲೆ. ಈಗಲಾದರೋ ಸಿಕ್ಕಿದಾಗಲೆಲ್ಲಾ 'ಹೊಸತು' ಪತ್ರಿಕೆಗೆ ಲೇಖನ ಕೇಳುತ್ತೇನೆ ಎಂದು ಅವರಿಗೆ ಬೇಸರವಿರಬಹುದು. ಆದರೆ ಅವರ ದಾಖಲೆಯನ್ನು ಮುರಿಯದೆ ಕಾಪಾಡಿಕೊಂಡಿದ್ದಾರೆ, ಈವರೆಗೆ ಒಮ್ಮೆಯೂ ಲೇಖನವನ್ನು ಕೊಡದೆ! ಅದರಿಂದ ನನಗೆ ಅಚ್ಚರಿಯೂ ಇಲ್ಲ, ಅಸಮಾಧಾನವೂ ಇಲ್ಲ. ಪ್ರತಿ ತಿಂಗಳೂ ಅದರ ಮುಂದಿನ ತಿಂಗಳಲ್ಲಿ ಇವರು ದಾಖಲೆ ಮುರಿಯುತ್ತಾರೆಂಬ ಭರವಸೆಯಲ್ಲೇ ದಿನಗಳು ಸಾಗುತ್ತಿವೆ. ಮೂರು-ನಾಲ್ಕು ವರ್ಷಗಳ ಹಿಂದೆ ''ಕವಿರಾಜಮಾರ್ಗ''ದ ಬಗ್ಗೆ ಒಂದು ಲೇಖನಕ್ಕಾಗಿ ವಿನಂತಿಸಿ ಕೊಳ್ಳಲು ದೂರವಾಣಿಯಲ್ಲಿ ಕಿ.ರಂ. ಅವರನ್ನು ಸಂಪರ್ಕಿಸಿದೆ. ಅವರು ಹೇಳಿದರು : ''ಗುರುಗಳೇ, ನಿಮಗೆ ಲೇಖನ ಕೊಡಬೇಕಾದರೆ ನನ್ನ ಬೇರೆಲ್ಲ



ಕೆಲಸಗಳನ್ನು ಬಿಟ್ಟು ಕೂರಬೇಕಾಗುತ್ತದೆ. ಹಾಗೆ ಮಾಡೆನ್ನುತ್ತೀರೇನು ?'' ಯಾವ ಹೊತ್ತಿನಲ್ಲಿ ಇವರಿಗೆ ದೂರವಾಣಿ ಮುಖೇನ ತಾಕೀತು ಮಾಡಬಾರದೆಂಬುದು ಆಗ ಚೆನ್ನಾಗಿ ಮನದಟ್ಟಾಯಿತು. ತಮಾಷೆಗಷ್ಟೇ ಇದನ್ನು ಉಲ್ಲೇಖಿಸುತ್ತಿದ್ದೇನೆ. ಅದು ಈಚಿನ ಸಮಾಚಾರ. ಹಿಂದೆ, ಅಂದರೆ ಎಪ್ಪತ್ತರ ದಶಕದಲ್ಲಿ, ನಾವು ಮಾತನಾಡಿಕೊಳ್ಳುತ್ತಿದ್ದ ಎಷ್ಟೋ ಸಂಗತಿಗಳನ್ನು ಬರೆಯಲಾಗುವುದಿಲ್ಲ. ಏಕೆಂದರೆ, ಅವೆಲ್ಲಾ ಅಷ್ಟು ''ಮಡಿ'' ವಿಷಯಗಳು !

ಈ ಕಿ.ರಂ. ಆಗ್ಗ ಆಗಲೆ ಮಾರ್ಟಿನ್ ಎಸ್ಲಿನ್, ಕೆನೆತ್ ಟೈನನ್, ಕ್ಲಿಯಾಂತ್ ಬ್ರೂಕ್ಸ್, ಸಿ.ಎಂ. ಬೌರ ಮುಂತಾದವರ ಕೃತಿಗಳಿಂದ ವಿಮರ್ಶಾತ್ಮಕ ಮಾತುಗಳನ್ನು ಉದ್ಧರಿಸಿ ವ್ಯಾಖ್ಯಾನ ನೀಡುತ್ತಿದ್ದರು. ಅದನ್ನೆಲ್ಲಾ ಕೇಳಿ ನನ್ನಂಥವರು ತಮ್ಮ ಕುಬ್ಜತೆಯ ಅರಿವನ್ನು ಪಡೆದು ದಂಗುಬಡಿಸಿಕೊಂಡವರಂತೆ ಕಣ್ಣು-ಬಾಯಿ ಬಿಡುತ್ತಿದ್ದೆವೆಂದು ತೋರುತ್ತದೆ. ಅವರ ಕೆಲವು ವ್ಯಾಖ್ಯಾನಗಳನ್ನು ಸ್ವತಃ ನನ್ನ ಅಧ್ಯಯನದ ಫಲವೋ ಎಂಬಂತೆ ತರಗತಿಗಳಲ್ಲಿ ಪ್ರತಿಪಾದಿಸಿದ್ದರೆ ಆಶ್ಚರ್ಯವೇನೂ ಇಲ್ಲ. ವಿದ್ಯಾರ್ಥಿಗಳಿಗೆ ಇಂತಹ ಮರ್ಮಗಳೆಲ್ಲಾ ತಿಳಿಯುವ ಸಂಭವ ಇರುತ್ತಿರಲಿಲ್ಲವಷ್ಟೆ!

ಅದೇ ಕಿ.ರಂ. ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಕಾಣಿಸಿಕೊಂಡರು. ಅವರ ಮಗಳು ಚಿನ್ನದ ಪದಕ ಪಡೆಯುವುದನ್ನು ನೋಡಲೆಂದು ಬಂದಿದ್ದರು ಅವರು; ಮೈತ್ರಿಯು ಚಿನ್ನದ ಪದಕ ಪಡೆಯುವುದನ್ನು ನೋಡಲು ನಾನು ಹೋಗಿದ್ದೆ. ಇಲ್ಲದಿದ್ದರೆ ನಾವಿಬ್ಬರೂ ಅಂತಹ ಸಂಭ್ರಮದ ಕಾರ್ಯಕ್ರಮಗಳಲ್ಲಿ ಭೇಟಿಯಾಗುವುದು ಅಚಿಂತ್ಯ. ಏಕೆಂದರೆ, ಇಬ್ಬರೂ ಅವಕ್ಕೆ ಗೈರುಹಾಜರಾಗುವುದೇ ಹೆಚ್ಚು. ಒಂದು ಅತ್ಯಾಧುನಿಕ ಕ್ಯಾಮೆರಾ ತಂದಿದ್ದರು ಕಿ.ರಂ.; ಬಹಳ ಸಂಕೀರ್ಣವಾದ್ದು. ತಂತ್ರಜ್ಞಾನದ ಮೇರುಫಲವೇ ಇರಬೇಕು. ಅಂಥದನ್ನು ನಾನು ನೋಡಿರಲಿಲ್ಲ ಮತ್ತು ಕಿ.ರಂ.ಗೆ ಅದರಿಂದ ಛಾಯಾಗ್ರಹಣ ಸಾಧ್ಯವಾಗಲಿಲ್ಲ. ಇದರಲ್ಲಾದರೂ ಇವರ ಪ್ರಾವೀಣ್ಯ ಸೀಮಿತಗೊಂಡಿತಲ್ಲಾ ಎನಿಸಿತು. ಹಾಗೇ ಪಕ್ಕಪಕ್ಕದಲ್ಲಿ ಕೂತಿದ್ದಾಗ ಹಲವು ಹಿಂದಿನ ಘಟನೆಗಳು ಜ್ಞಾಪಕಕ್ಕೆ ಬಂದುವು : ಶ್ರೀಮತಿ ವಿಜಯಲಕ್ಷ್ಮಿಯವರೊಡನೆ ಇವರ ಮದುವೆ, ಆ ಸಂದರ್ಭದಲ್ಲಿ ಇವರು ಔತಣಕೂಟ ಏರ್ಪಡಿಸಿದ್ದು, ಅದೂ ಅನೌಪಚಾರಿಕವಾದ ಆತ್ಮೀಯ ಸನ್ನಿವೇಶದಲ್ಲಿ ನಡೆದದ್ದು, ಅದಕ್ಕೆ ಈಗಿನ ವೀರಭದ್ರ ಚನ್ನಮಲ್ಲಸ್ವಾಮಿಗಳ ಮಠ ಮತ್ತು ಕಚೇರಿ ಇರುವ ಸ್ಥಳ ಆಯ್ಕೆ ಮಾಡಿಕೊಂಡಿದ್ದುದು, ಸಮಾರಂಭದಲ್ಲಿ ಕಿ.ರಂ. ಮನೆಯವರು ಹೆಚ್ಚಾಗಿ ಇರಲಿಲ್ಲವೆಂಬುದು ಗೌಣವಾದ್ದು, ವಿಜಯಲಕ್ಷ್ಮಿಯವರು ಬಿ.ಎನ್.ಎಂ. ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದಾಗ ಶ್ರೀ. ಟಿ. ವೆಂಕಟೇಶಮೂರ್ತಿ ಮತ್ತು ಇತರ ಅಧ್ಯಾಪಕರ ಜೊತೆ ಹೋರಾಟಕ್ಕೆ ಇಳಿದಿದ್ದದ್ದು, ಆಡಳಿತ ಮಂಡಲಿ ಇವರಿಗೆಲ್ಲಾ ಕಿರುಕುಳ ನೀಡುತ್ತಿದ್ದದ್ದು, ಆ ಸಂದರ್ಭದಲ್ಲಿ ಹಲವು ಬಾರಿ ವಿಜಯಲಕ್ಷ್ಮಿಯವರ ಜೊತೆ ಕಿ.ರಂ. ಅವರ ಭೇಟಿಯೂ ಆಗುತ್ತಿದ್ದದ್ದು, ಕಟ್ಟುನಿಟ್ಟಾಗಿ ಹೋರಾಟ ಮುಂದುವರಿಸಬೇಕೆಂದು ಕಿ.ರಂ. ಆಗ್ರಹಿಸುತ್ತಿದ್ದದ್ದು ಇತ್ಯಾದಿ. ಇವರ ಸೋದರ ಶ್ರೀಕಂಠ ನಮ್ಮ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿ. ಸ್ವಾತಂತ್ರ್ಯೋತ್ಸವದ ದಿನ. ಬೆಳಿಗ್ಗೆ ಕಾಲೇಜಿನಿಂದ ವಿದ್ಯಾರ್ಥಿ-ಅಧ್ಯಾಪಕರ ಮೆರವಣಿಗೆ. ಶ್ರೀಕಂಠ ಏಕೆ ನಾಪತ್ತೆಯಾಗಿದ್ದನೆಂದು ತರಗತಿಯವರೆಲ್ಲಾ ಮಾತನಾಡಿಕೊಳ್ಳುತ್ತಿದ್ದರು. ಅಂದು ಆತ ಆತ್ಮಹತ್ಯೆ ಮಾಡಿಕೊಂಡಿದ್ದ. ಸಂಜೆ ವಿಲ್ಸನ್ ಗಾರ್ಡನ್ ಚಿತಾಗಾರಕ್ಕೆ ಹೋಗಿದ್ದೆವು. ನಾನು ಮತ್ತು ಕಿ.ರಂ. ಒಂದು ಕಡೆ ನಿಂತಿದ್ದೆವು. ಹಿರಿಯರೊಬ್ಬರು ದುಃಖತಪ್ತರಾಗಿ ಒಳಗೆ ಬಂದು ನಮ್ಮತ್ತ ಕಣ್ಣುಹಾಯಿಸಿದರು. ರೋಷದಿಂದ ಏನೇನೋ ಹೇಳಿದರು. ಕಡೆಗೆ ಕಿ.ರಂ. ಅವರನ್ನು ನೋಡುತ್ತಾ ''ಅವನು ಸಾಯುವ ಬದಲು ನೀನು ಸತ್ತಿದ್ದರೆ ಚೆನ್ನಾಗಿರುತ್ತಿತ್ತು'' ಎಂದು ಹೇಳಿ ಮುಂದೆ ಹೋದರು. ಇದನ್ನೆಲ್ಲಾ ಈಗ ಕಿ.ರಂ.ಗೆ ನೆನಪಿಸಲು ಮುಜುಗರವೆನಿಸುತ್ತದೆ. ಆದರೆ ಕಿ.ರಂ. ಅವರ ಕೌಟುಂಬಿಕ ಕತೆಯ ಹಿನ್ನೆಲೆಯಲ್ಲಿ ಅವರು ಸದಾ

ಉಳಿಸಿಕೊಂಡಿರುವ ಅಧ್ಯಯನಶೀಲತೆ, ಏಕಾಗ್ರತೆ, ನಿರ್ವಿಕಲ್ಪ ಮನಸ್ಸು, ಜೀವನ ಶ್ರದ್ಧೆ ಇವೆಲ್ಲಾ ಸಾಧ್ಯವಾಗಲು ಹೇಗೆ ಶ್ರಮಿಸಿರಬೇಕೆಂಬುದರ ಕಲ್ಪನೆ ಇದರಿಂದ ಬರುತ್ತದೆ. ಅದನ್ನು ನಾವೆಂದೂ ಚರ್ಚಿಸಿಲ್ಲ, ಆದರೆ ಕಿ.ರಂ. ಅವರ ದಾರ್ಢ್ಯ ಅಸಾಧಾರಣ ವಾದುದೆಂದು ತಿಳಿದಿದ್ದೇನೆ.

ಅವರು ಕೆಲಕಾಲ ಹಾಸನದಲ್ಲಿ ವ್ಯಾಸಂಗ ಮಾಡಿದ್ದರೆಂದು ಅವರ ಮಾತುಗಳಿಂದ ಕೇಳಿ ಬಲ್ಲವನಾಗಿದ್ದೇನೆ. ವಿದ್ಯಾರ್ಥಿಯಾಗಿದ್ದಾಗ ಅವರಿಗೆ ಕುಣಿಗಲ್‌ನ ಶ್ರೀ. ಕೃಷ್ಣಸ್ವಾಮಿಯವರ ಪರಿಚಯವಾಗಿದ್ದಿತು. ಅವರು ಹಿರಿಯರು, ಸಣ್ಣ ಉದ್ದಿಮೆದಾರರು, ಪ್ರಗತಿಪರ ಚಿಂತಕರು, ಹೋರಾಟಗಾರರು. ನನಗೆ ಅವರ ಪರಿಚಯವಾದ್ದು ಕಿ.ರಂ. ಅವರ ಮುಖಾಂತರ. ಅನೇಕ ವರ್ಷಗಳ ಕಾಲ ನಾನು ಅವರೊಟ್ಟಿಗೆ ಕೆಲಸ ಮಾಡಿದ್ದೇನೆ. ಯಾವಾಗಲೂ ಕಿ.ರಂ. ಬಗ್ಗೆ ಅವರಿಂದ ಅಭಿಮಾನದ ಮಾತುಗಳನ್ನು ಕೇಳುತ್ತಿದ್ದೆ. ನನಗೆ ಪುಟ್ಟಾಶ್ರೀ ಎಂದು ಪ್ರಸಿದ್ಧರಾದ ಶ್ರೀ ಯು. ಎಸ್. ಶ್ರೀನಿವಾಸನ್ ಅವರ ಪರಿಚಯವಾದ್ದು ಕಿ.ರಂ. ಮೂಲಕವೇ. ಅದೂ ಸೆಂಟ್ರಲ್ ಕಾಲೇಜಿನ ಬಳಿ, ವಿದ್ಯಾರ್ಥಿಗಳದ್ದು ಯಾವುದೋ ಮುಷ್ಕರ ಜರುಗುತ್ತಿದ್ದಾಗ ನಾವಿಬ್ಬರೂ ಅಲ್ಲಿಗೆ ಹೋಗಿದ್ದಾಗ. ಹೀಗೆ ಹೋಗುವುದು ಆಗ ನಮ್ಮ ರೂಢಿಯಾಗಿತ್ತು. ಮುಷ್ಕರವೆಂದರೆ ಅದೇನೂ ಸಂಘಟಿತ ಚಳುವಳಿಯ ಸ್ವರೂಪದ್ದಾಗಿ ಇರುತ್ತಿರಲಿಲ್ಲ. ಒಂದಷ್ಟು ಮಂದಿ ಗುಂಪಾಗಿ ಬಂದು ಘೋಷಣೆ ಕೂಗಿದರೆ ಕಾಲೇಜಿಗೆ ರಜೆ. ವಿದ್ಯಾರ್ಥಿಗಳೆಲ್ಲಾ ಮನೆಗೆ ಹೋಗುತ್ತಿದ್ದರು. ನಾವಿಬ್ಬರೂ ಈ ''ಮುಷ್ಕರ'' ನಡೆಸುತ್ತಿದ್ದ ನಾಯಕರ ಗುಂಪಿನ ಹಿಂದೆ ಕೃಷ್ಣರಾವ್ ಪಾರ್ಕಿಗೋ ಸೆಂಟ್ರಲ್ ಕಾಲೇಜಿಗೋ ಹೋಗಿ ಕೆಲವು ಘಂಟೆಗಳನ್ನು ಕಳೆಯುತ್ತಿದ್ದೆವು. ಎಕ್ಸ್‌ಪೋ ಚಳುವಳಿ ಆ ಪೈಕಿ ಒಂದು ಉಗ್ರವಾದ ''ಮುಷ್ಕರ''. ಮುಷ್ಕರ ಮತ್ತು ಮುಷ್ಕರದ ನಾಯಕರ ಬಗ್ಗೆ ನಮಗೇನೂ ಭ್ರಾಂತಿ ಇರಲಿಲ್ಲ, ಆದರೆ ಏನೋ ಅದ್ಭುತವಾದ್ದು ನಡೆಯುತ್ತದೆಯೆಂಬ ಕುತೂಹಲ. ಅಂದಿನ ''ವಿದ್ಯಾರ್ಥಿ ನಾಯಕರು'' ನಂತರ ರಾಜಕೀಯ ಪುಢಾರಿಗಳಾದರು, ಒಂದಿಬ್ಬರು ಮಂತ್ರಿಗಳೂ ಆದರು, ಮತ್ತು ಎಲ್ಲರೂ ಚೆನ್ನಾಗಿ ಮೇಯುತ್ತಿದ್ದರೆಂದು ಕೇಳಿಬರುತ್ತಿತ್ತು. ಒಬ್ಬ ಮಂತ್ರಿ ಇನ್ನೊಬ್ಬ ಮಂತ್ರಿಗೆ ''ಪಾಠ ಕಲಿಸಲು'' ಹೀಗೆ ವಿದ್ಯಾರ್ಥಿಗಳಲ್ಲದ ''ವಿದ್ಯಾರ್ಥಿ ನಾಯಕ''ರನ್ನು ಬಳಸಿಕೊಳ್ಳುವುದು ಅಪರೂಪವಾಗಿರಲಿಲ್ಲ. ಈಗ ಇಂತಹ ''ನಾಯಕ''ರಿಗೆ ಅವಕಾಶ ಕಡಿಮೆ; ಏಕೆಂದರೆ ಮಾಫಿಯಾ ಗುಂಪುಗಳು ಆ ಕೆಲಸಕ್ಕೆ ತುದಿಗಾಲಲ್ಲಿ ನಿಂತಿರುತ್ತವೆ ಮತ್ತು ತಮಗೇ ಆ ಕೆಲಸ ಮತ್ತು ಅದಕ್ಕೆ ತಗಲುವ ''ಕೂಲಿ'' ಕೊಡದಿದ್ದರೆ ಇವರ ಮೇಲೆಯೇ ತಿರುಗಿಬೀಳುತ್ತವೆ. ದೇಶದಲ್ಲಿ ''ಅಭಿವೃದ್ಧಿ''ಯ ಸೂಚ್ಯಂಕಗಳಲ್ಲಿ ಇದೂ ಒಂದು ಸೇರ್ಪಡೆಯಾಗಬೇಕು. ಇಷ್ಟೆಲ್ಲಾ ಇದ್ದರೂ ಚಳುವಳಿಗಳಲ್ಲಿ ನಮ್ಮ ನಂಬಿಕೆ ಕುಗ್ಗಿಹೋಗಿಲ್ಲ. ಅನಾರೋಗ್ಯಕರವಾದ ಚಳುವಳಿಗಳು ಹೆಚ್ಚಿವೆಯೆಂಬ ಕಾರಣಕ್ಕೆ ಚಳುವಳಿಗಳನ್ನೆಲ್ಲಾ ದೂಷಿಸಿ ರದ್ದುಮಾಡುವುದು ಇನ್ನೊಂದು ಬಗೆಯ ಅನಾರೋಗ್ಯಕ್ಕೆ ಕಾರಣವಾಗುತ್ತದೆ.

ಕಿ.ರಂ. ಮತ್ತು ನಾನು ಎಪ್ಪತ್ತರ ದಶಕದಲ್ಲಿ ಕಾಲೇಜು ಅಧ್ಯಾಪಕರ ಸಂಘದ ಚಟುವಟಿಕೆಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದು ಅದೂ ಒಂದು ಪ್ರಜಾಪ್ರಭುತ್ವವಾದಿ ನೆಲೆಯಲ್ಲಿನ ಚಳುವಳಿಯೆಂಬ ಕಾರಣಕ್ಕಾಗಿ. ಕಿ.ರಂ. ನಮ್ಮ ಕಾಲೇಜಿಗೆ ಬರುವ ವೇಳೆಗಾಗಲೆ ನಾನು ಶ್ರೀ. ಅನಂತ ಶಾಸ್ತ್ರಿಯವರ ಜೊತೆ ಬೆಂಗಳೂರು ವಿಶ್ವವಿದ್ಯಾನಿಲಯದ ಕಾಲೇಜು ಅಧ್ಯಾಪಕರ ಸಂಘದ ಒಂದು ಸಭೆಯಲ್ಲಿ ಭಾಗವಹಿಸಿ ಅಧ್ಯಾಪಕರಿಂದ ಗುರುತಿಸಲ್ಪಟ್ಟಿದ್ದೆ. ಅದೇ ನನ್ನ ಮೊದಲ ಸಭೆ. ಈಗಿನ ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯದ ಕ್ಯಾಂಟೀನಿನಲ್ಲಿ ಸಭೆ ಸೇರಿತ್ತು. ಡಾ|| ವಿ. ಕೆ. ಗೋಕಾಕ್ ಅವರು ಅಧ್ಯಾಪಕ-ವಿದ್ಯಾರ್ಥಿ ಸಮಿತಿ ರಚಿಸುವುದಾಗಿ ಹೇಳಿದ್ದರಂತೆ. ಅದರ ಸ್ವರೂಪ ಏನಿರಬೇಕು ಮತ್ತು ಅಧ್ಯಾಪಕರ ಆರು ಪ್ರತಿನಿಧಿಗಳು ಯಾರಾಗಬೇಕು ಎಂಬುದನ್ನು ಸಭೆಯ ಕಾರ್ಯಸೂಚಿಯನ್ನಾಗಿ ಇರಿಸಿಕೊಳ್ಳಲಾಗಿತ್ತು. ಮೂರು-ನಾಲ್ಕು ಗಂಟೆಯ ಕಾಲದ ದೀರ್ಘ ಚರ್ಚೆಯಲ್ಲಿ ಮೂರನೆಯ ಒಂದು ಭಾಗದಷ್ಟು ನಾನೇ ಮಾತನಾಡಿ ಬಿಟ್ಟಿದ್ದೆನೆಂದು ತೋರುತ್ತದೆ. ನಾನು ಪ್ರತಿನಿಧಿಯಾಗಿ ಚುನಾಯಿತನಾದೆ. ಆದರೆ ಗೋಕಾಕರ ''ಸಮಿತಿ'' ಅಸ್ತಿತ್ವಕ್ಕೇ ಬರಲಿಲ್ಲ. ಅದರ ನಂತರದ ಸರ್ವ ಸದಸ್ಯರ ಸಭೆಯ ವೇಳೆಗೆ ಕಿ.ರಂ. ಬಂದಿದ್ದರು. ಅದೇ ಕಾಲೇಜಿನಲ್ಲಿ ಸಂಜೆಯ ಸಭೆ. ಸಾಮಾನ್ಯವಾಗಿ ಒಂದು ಗಂಟೆಯೊಳಗಾಗಿ ಮುಗಿಯುವುದು ವಾಡಿಕೆಯಲ್ಲಿತ್ತಂತೆ. ಆದರೆ ನಾನು, ಕಿ.ರಂ. ಮತ್ತು ಪ್ರಸನ್ನಕುಮಾರ್ (ಈಗವರು ಲಂಡನ್ ನಿವಾಸಿ) ಹೆಜ್ಜೆಹೆಜ್ಜೆಗೂ ತಕರಾರು ಎತ್ತುತ್ತಾ ಸಭೆಯನ್ನು ಎರಡು ಗಂಟೆಯವರೆಗೆ ನಡೆಯುವಂತೆ ಮಾಡಿದೆವು. ಕೆಲವು ಅಧ್ಯಾಪಕರಿಗೆ ಸಿಟ್ಟು, ''ಆ ಮೂಲೆಯಲ್ಲಿರುವ ಮೂವರು ಸಭೆಗೆ ಅಡಚಣೆಯೊಡ್ಡಲು ಬಂದಿದ್ದಾರೆ'' ಎಂದು ಕೆಲವರ ಆಪಾದನೆ; ಆ ಮಾತನ್ನು ಮೊದಲು ಹಿಂದಕ್ಕೆ ಪಡೆಯಬೇಕೆಂದು ನಮ್ಮ ಆಗ್ರಹ. ಒಟ್ಟಿನಲ್ಲಿ ನಾವಿಬ್ಬರೂ ಕಾಲೇಜಿನಲ್ಲಿ ಹಾಗೂ ಅಧ್ಯಾಪಕ ಸಂಘದಲ್ಲಿ ''ಗುರುತಿಸಲ್ಪಟ್ಟ ವ್ಯಕ್ತಿ''ಗಳಾಗಿ ಹೊಗಳಿಕೆ ಮತ್ತು ತೆಗಳಿಕೆಗಳನ್ನು ಪಡೆಯುವುದು ಒಂದು ಪದ್ಧತಿಯಾಯಿತು.

ಭುವನೇಶ್ವರದಲ್ಲಿ ಅಖಿಲ ಭಾರತ ವಿಶ್ವವಿದ್ಯಾನಿಲಯ ಮತ್ತು ಕಾಲೇಜು ಅಧ್ಯಾಪಕ ಸಂಘಗಳ ಒಕ್ಕೂಟದ ದ್ವೈವಾರ್ಷಿಕ ಸಮ್ಮೇಳನವಿತ್ತು. ಯಾವ ವರ್ಷವೆಂದು ಸರಿಯಾಗಿ ನೆನಪಿಲ್ಲ. ಕರ್ನಾಟಕದ ಅಧ್ಯಾಪಕರು ಭಾಗವಹಿಸಿದ್ದ ಮೊದಲ ಸಮ್ಮೇಳನ ಅದು. ಕೆ. ದ್ವಾರಕಾನಾಥ್ ಮತ್ತು ಟಿ. ಶಿವಣ್ಣ ಕಲ್ಕತ್ತೆಗೆ ಬರದೆ ಬಸ್ಸುಗಳಲ್ಲಿ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು. ನಾನು, ಕಿ.ರಂ., ಜಿ. ಎಸ್. ಆರ್. ಕೃಷ್ಣನ್, ಟಿ. ಜಿ. ರಾಘವ, ಬಿ. ಕೆ. ಹನುಮಂತಯ್ಯ ಮೊದಲಾದವರೆಲ್ಲಾ ಸಮ್ಮೇಳನದ ನಂತರ ಪುರಿಗೆ ಹೋಗಿ, ಅಲ್ಲಿಂದ ಕಲ್ಕತ್ತೆಗೆ ಹೋಗಿ, ಶ್ರೀ. ರಾಘವ ಅವರ ಕೃಪೆಯಿಂದ ಒಂದು ಮನೆಯಲ್ಲಿ ಬೀಡುಬಿಟ್ಟೆವು. ಆ ಸಂದರ್ಭದಲ್ಲಿ ಕಿ.ರಂ. ಅವರಿಗೆ ಹಿರಿಯ ವಿದ್ವಾಂಸ ದೇವಿಪ್ರಸಾದ ಚಟ್ಟೋಪಾಧ್ಯಾಯರ ಪರಿಚಯ ಮಾಡಿಸಿದ್ದೆ. ಅದರ ನಂತರ ಅವರಿಬ್ಬರೂ ಅನೇಕ ಬಾರಿ ಭೇಟಿಯಾಗಿ ತತ್ತ್ವಶಾಸ್ತ್ರ ಮುಂತಾದ ವಿಷಯಗಳನ್ನು ಗಂಭೀರವಾಗಿ ಚರ್ಚಿಸಿದ್ದಾರೆ. ನಮ್ಮ ದಂಡು ಶಾಂತಿನಿಕೇತನಕ್ಕೂ ಹೋಗಿತ್ತು. ಎಲ್ಲರಿಗೂ ರವೀಂದ್ರನಾಥರ ಕಾವ್ಯದ ಬಗ್ಗೆ ಕಿ.ರಂ. ಅವರಿಂದ 'ರನಿಂಗ್ ಕಾಮೆಂಟರಿ' ಇತ್ತು. ಅವರು ರೇಗುತ್ತಾರೇನೋ ನೋಡೋಣವೆಂದು ನಾನು ''ಏನು, ... ಈ ಕುರಿತು ನಿಮ್ಮ ಗಡ್ಡಯ್ಯ ಏನನ್ನುತ್ತಾರೆ ?'' ಎಂದು ಆಗಾಗ ಮಧ್ಯೆ ಪ್ರಶ್ನೆ ಹಾಕುತ್ತಿದ್ದೆ. ನಂತರದ ಕಾಲದಲ್ಲಿ ಬೇಂದ್ರೆ – ಅಡಿಗರ ಬಗ್ಗೆ ಹೀಗೆ ಕುಚೇಷ್ಟೆ ಮಾಡಿದರೆ ಕಿ.ರಂ. ಬೇಗನೆ ರೊಚ್ಚಿಗೇಳುತ್ತಿದ್ದರೆಂದು ಕೇಳಿದ್ದೇನೆ. ಆದರೆ ಶಾಂತಿನಿಕೇತನದಲ್ಲಿ ಅಂತಹ ಯಾವ ಸೂಚನೆಯನ್ನೂ ಅವರು ನೀಡಿರಲಿಲ್ಲ. ನಾವೆಲ್ಲಾ ಶ್ರೀನಿಕೇತನಕ್ಕೆ ಹೋದಾಗ ಅದು ಬಂದಾಗಿತ್ತು . ''ಕುಲಸಚಿವರ ನಿಧನದಿಂದಾಗಿ'' ಎಂಬುದನ್ನು ಫಲಕದಲ್ಲಿ ಬರೆದು ತೂಗುಹಾಕಿದ್ದರು. ನಮಗೆ ನಿರಾಸೆಯಾಯಿತು. ಅಷ್ಟು ದೂರ ನಡೆದೇ ಹೋಗಿದ್ದೆವು ಮತ್ತು ನಡೆದೇ ಹಿಂದಿರುಗಬೇಕಾಗಿತ್ತು. ''ನಿಮ್ಮ ಕುಲಸಚಿವರು ಸಾಯುತ್ತಲೇ ಇರಲಿ'' ಎಂದು ಒಂದು ಪತ್ರವನ್ನು ಬರೆದು, ಕಚೇರಿಯ ಟಪಾಲು ಪೆಟ್ಟಿಗೆಯಲ್ಲಿ ಅದನ್ನು ತುರುಕಿ ಹಿಂದಿರುಗಿದೆವು. ಬೆಂಗಳೂರಿಗೆ ಹಿಂದಿರುಗಲು ನಮಗೆ ರೈಲಿನಲ್ಲಿ ಮುಂಗಡ ಟಿಕೇಟು ದೊರೆತಿರಲಿಲ್ಲ. ಪಡೆಯಲು ಹೋದರೆ ನೂಕುನುಗ್ಗಲು. ಸುಮಾರು ಒಂದು ವಾರ ಕಲ್ಕತ್ತೆಯಲ್ಲೆಲ್ಲಾ ಸುತ್ತಾಡಿ ಸಾಕಾಗಿತ್ತು. ಆಗ್ಗೆ ''ಜನತಾ ಎಕ್ಸ್‌ಪ್ರೆಸ್'' ಎಂಬ ಹೆಸರಿನ ರೈಲೊಂದಿತ್ತು. ಕೇವಲ ಮೂರನೆಯ ದರ್ಜೆಯ ಗಾಡಿಗಳು, ಮದ್ರಾಸ್ ತಲುಪಲು ಎರಡು ದಿನ ತೆಗೆದುಕೊಳ್ಳುತ್ತಿತ್ತು. ಅದರಲ್ಲಿ ನಮ್ಮ ಪ್ರಯಾಣ. ಉದ್ದಕ್ಕೂ ಬಿಸಿಲಿನ ಝಳ. ಜನತಾ ರೈಲನ್ನು ನಾವು ಹವಾನಿಯಂತ್ರಿತ ರೈಲನ್ನಾಗಿ ಪರಿವರ್ತಿಸುವ ಸುಲಭ ತಂತ್ರ ಕಂಡುಕೊಂಡು ಕಾರ್ಯಮಗ್ನರಾದೆವು. ನಾಲ್ಕೈದು ಹೊದಿಕೆಗಳನ್ನು ನೆನೆಸಿ ಕಿಟಕಿಗಳಿಗೆ ಪರದೆ ಕಟ್ಟುವುದು ಆ ತಂತ್ರ. ಪ್ರತಿಯೊಂದು ನಿಲ್ದಾಣದಲ್ಲೂ ಅವನ್ನು ನೀರಿನಲ್ಲಿ ತೋಯಿಸಿ ತರುವ ಕೆಲಸವನ್ನು ಮಾಡುವುದೇ ಒಂದು ಸಂಭ್ರಮ. ಹೀಗೆಲ್ಲಾ ಮಾಡಿದ್ದೇವೆ ಎಂಬ ಸಂಶಯ ಈಗ !

ಇದೇ ಸುಮಾರಿನಲ್ಲಿ ನಾವು ಬೆಂಗಳೂರಿನಲ್ಲಿ ಒಂದು ಅಧ್ಯಯನ ಮಂಡಲಿ ರಚಿಸಿಕೊಂಡಿದ್ದೆವು. ''ಸೆಂಟರ್ ಫಾರ್ ದಿ ಸ್ಟಡಿ ಆಫ್ ಡಯಲೆಕ್ಟಿಕಲ್ ಮೆಟೀರಿಯಲಿಸಂ'' ಎಂಬ ತೂಕದ ಹೆಸರು ಅದಕ್ಕೆ. ಅದರ ಆಶ್ರಯದಲ್ಲಿ ಒಮ್ಮೆ ಪ್ರೊಫೆಸರ್ ಹಿರೇನ್ ಮುಖರ್ಜಿಯವರ ಉಪನ್ಯಾಸ ಏರ್ಪಡಿಸಿದ್ದೆವು. ''ಇಷ್ಟು ತೂಕದ ಹೆಸರಿನ ಮಂಡಲಿಯ ಆಶ್ರಯದಲ್ಲಿ ಮಾತನಾಡಲು ನನಗೆ ಸಾಮರ್ಥ್ಯವಿಲ್ಲ''ವೆಂದು ಹೇಳುತ್ತಾ ಅವರು ಉಪನ್ಯಾಸವನ್ನು ಆರಂಭಿಸಿದ್ದರು. ಅಂತಹ ಮಂಡಲಿಯ ಅಧ್ಯಯನ ಗೋಷ್ಠಿಗಳು ತಿಂಗಳಿಗೆ ಎರಡಿರುತ್ತಿದ್ದುವು. ಇಂದಿನ ನಮ್ಮ ಸ್ನೇಹಿತರಲ್ಲಿ ಹತ್ತಾರು ಮಂದಿ ಆ ಮಂಡಲಿಯಲ್ಲಿ ಇರುತ್ತಿದ್ದರು, ಉಪನ್ಯಾಸಗಳನ್ನು ನೀಡುತ್ತಿದ್ದರು ಮತ್ತು ಬಿರುಸಿನ ಚರ್ಚೆ ನಡೆಸಿಕೊಡುತ್ತಿದ್ದರು. ಸ್ವತಃ ಕಿ.ರಂ. ಅವರು ಪಂಪನನ್ನು ಕುರಿತು ಎರಡು ಉಪನ್ಯಾಸ ನೀಡಿದ್ದರು. ಜೊತೆಗೆ ಡಿ. ಆರ್. ನಾಗರಾಜ ಅವರನ್ನು ಕರೆತಂದು ಅವರಿಂದಲೂ ಉಪನ್ಯಾಸವನ್ನು ಆಗುಮಾಡಿ ಕೊಟ್ಟಿದ್ದರು. ನಮ್ಮ ಅಂದಿನ ಸದಸ್ಯರು ಕೆಲವರು ಇಂದಿಗೂ ಕಿ.ರಂ. ಅವರ ಉಪನ್ಯಾಸಗಳನ್ನು ನೆನೆಸಿಕೊಳ್ಳುತ್ತಿರುತ್ತಾರೆ.

ಎಪ್ಪತ್ತರ ದಶಕದ ಆದಿಭಾಗದಲ್ಲಿ ಕಾಲೇಜಿನಲ್ಲಿ ಒಂದು ಘಟನೆ ಜರುಗಿತು. ಅದು ನನಗೆ ಅವಿಸ್ಮರಣೀಯ. ಹಿರಿಯರಾದ ಎಸ್. ಆರ್. ಭಟ್, ಎಂ. ಎಸ್. ಎಸ್. ಶಾಸ್ತ್ರಿ ಅವರನ್ನು ಒಳಗೊಂಡಂತೆ ಕಿ.ರಂ., ಡಿ. ನರಸಿಂಹ ರೆಡ್ಡಿ, ವೈ. ಎನ್. ರಮೇಶ್

ಮುಂತಾದವರ ಸಮ್ಮುಖದಲ್ಲಿ ನಾನು ಬರೆದಿದ್ದ "ಗೋಳ್ವಾಲ್ಕರ್ ಸಂಸ್ಕೃತಿಯ ವೈಚಿತ್ರ್ಯ" ಎಂಬ ಕಿರುಹೊತ್ತಿಗೆಯ ಪಠಣ ಮತ್ತು ಚರ್ಚೆ. ಅದು ನಂತರ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಪ್ರಕಟವಾಯಿತು. ಮಾನ್ಯ ಕ. ವೆಂ. ರಾಜಗೋಪಾಲ ಅವರು ಒಂದು ಅಧ್ಯಯನ ಮಂಡಲಿ ಸಭೆಯಲ್ಲಿ ಅದನ್ನು ಬಿಡುಗಡೆ ಮಾಡಿದ್ದರು. ಇದಾದ ಒಂದೆರಡು ತಿಂಗಳಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘವು "ಅಂಜುವೆದೆ ನಮ್ಮದಲ್ಲ" ಎಂಬ ಹೆಸರಿನ ಕಿರುಹೊತ್ತಿಗೆಯನ್ನು ಪ್ರಕಟಿಸಿತ್ತು. ಅದರ ಪ್ರತಿಗಳನ್ನು ತಂದು ಕಾಲೇಜಿನಲ್ಲಿ ವಿತರಣೆ ಮಾಡಲಾಗುತ್ತಿತ್ತು. ನಾನು ಮತ್ತು ಕಿ.ರಂ. ಕಾಲೇಜಿನ ಆವರಣದಲ್ಲಿ ನಿಂತಿದ್ದಾಗ ಒಂದು ಗುಂಪು ಬಂದು ಅದನ್ನು ಕೊಳ್ಳುವಂತೆ ವಿನಂತಿಸಿಕೊಂಡಿತು. ನಾವಿಬ್ಬರೂ ನಿರಾಕರಿಸಿದೆವು. ಸ್ವಲ್ಪ ವಾಗ್ವಾದದ ನಂತರ ಅದರ ಒಂದು ಪ್ರತಿಯನ್ನು ಬಲವಂತವಾಗಿ ಕಿ.ರಂ. ಅವರ ಕೈಲಿ ಇರಿಸಿದರು. "ಇದನ್ನು ಪುಕ್ಕಟೆಯಾಗಿ ತೆಗೆದುಕೊಳ್ಳಿ" ಎಂದು ಅವರು ಹೇಳಿದರು. ಅಡಿಗರ ವಾಕ್ಯವನ್ನು ಹೀಗೆ ಬಳಸಲಾಗಿದ್ದುದನ್ನು ಕಂಡು ಕಿ.ರಂ. ಕ್ರುದ್ಧರಾಗಿದ್ದಿರಬೇಕು; ಜೊತೆಗೆ ಬಲವಂತ ಬೇರೆ. ಅದನ್ನು ಒಂದು ಉಂಡೆ ಮಾಡಿ ನೆಲದ ಮೇಲೆ ಬಿಸಾಡಿದರು. ಎರಡೂ ಕಡೆ ಕೋಪ ಮತ್ತು ಅಸಮಾಧಾನ ಪ್ರಕಟವಾಯಿತು. ಯಾವ ಹಿಂಸೆಗೂ ಇಳಿಯದೆ ಗುಂಪು ಹೊರಟುಹೋಯಿತು. ಇಂದಿನ ದಶಕದಲ್ಲಿ ಇದೇನಾದರೂ ಘಟಿಸಿದರೆ ತಸ್ಲಿಮಾಗೆ ಜಡ್ಡು ಮತಾಂಧರು ಮಾಡಿದ್ದನ್ನು ಕಿ.ರಂ.ಗೆ ಇಲ್ಲಿಯ ಜಡ್ಡು ಮತಾಂಧರು ಮಾಡುತ್ತಾರೆ ಎಂಬುದರಲ್ಲಿ ಸಂಶಯ ವೇನಾದರೂ ಉಂಟೆ? ಅಂದರೆ, ಕಿ.ರಂ. ಸಾತ್ವಿಕರಾಗಿ ಬಿಟ್ಟಿರುವುದರಿಂದ ಈಗ ಅವರಿಗೆ ಗಟ್ಟಿ ಅಭಿಪ್ರಾಯಗಳಿಲ್ಲ ವೆಂದಲ್ಲ; ಮೊದಲಿಗಿಂತಲೂ ವ್ಯಗ್ರವಾಗಿ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವುದರಲ್ಲಿ ಅವರು ಗಟ್ಟಿಗರು.

ಈ ಮನೋಭಾವದ ಕಿ.ರಂ.ಗೆ ಮುಂದೆ ಮಾನ್ಯ ಅಡಿಗರು ಭಾರತೀಯ ಜನಸಂಘದ ಅಭ್ಯರ್ಥಿಯಾಗಿ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಯಾದಾಗ ಏನನಿಸಿರ ಬಹುದು? ನನಗೆ ಈಗಲೂ ಅದು ನಿಗೂಢವೆ! ಆ ಬಗ್ಗೆ ಅವರನ್ನೆಂದೂ ನಾನು ಪ್ರಶ್ನಿಸಿರಲಿಲ್ಲ. ಅಡಿಗರಿಗೆ ಅವರು ಬಹಳ ಹತ್ತಿರದವರು, ಪ್ರಿಯರು. ಚುನಾವಣೆ ಸಂದರ್ಭ ದಲ್ಲಿ ನಾವು ಕೆಲವರು ಒಂದು ಕರಪತ್ರ ಹೊರಡಿಸಿದ್ದೆವು: "ಕಾವ್ಯವನ್ನು ಸ್ವೀಕರಿಸಿ, ಕವಿಯನ್ನು ನಿರಾಕರಿಸಿ" ಎಂಬ ಶೀರ್ಷಿಕೆಯದು. ಅದನ್ನು ಬರೆದಿದ್ದವರು ಸಿ. ವಿ. ಜಯತೀರ್ಥ. ಇದೆಲ್ಲಾ ಕಿ.ರಂ.ಗೆ ತಿಳಿದಿತ್ತು. ಆದರೆ ಅದರಿಂದ ಅವರು ವಿಚಲಿತರಾಗಲಿಲ್ಲ, ನನ್ನ ಮೇಲೆ ಮುನಿಸಿಕೊಳ್ಳಲಿಲ್ಲ. ಅದಾದ ಎರಡು-ಮೂರು ವರ್ಷಗಳ ನಂತರ ಸಿಮ್ಲಾಗೆ ಹೋಗಿದ್ದೆ, ಅಡಿಗರ ನಿವಾಸಕ್ಕೆ ತೆರಳಿ ಅವರನ್ನು ಸಂಧಿಸಿದೆ, ಅವರು ಮಾಡಿಕೊಟ್ಟ ಸ್ಟ್ರಾಂಗ್ ಕಾಫಿ ಕುಡಿದೆ, ಎರಡು ಗಂಟೆಗಳ ಕಾಲ ಅವರೊಂದಿಗಿದ್ದೆ. ನಮ್ಮ ಕರಪತ್ರದ ಬಗ್ಗೆ ಪ್ರಸ್ತಾಪ ಮಾಡಿದರು. ಆದರೆ ಯಾವ ಕೋಪವನ್ನೂ ತೋರಲಿಲ್ಲ. ಬಹುಶಃ ಇದೇ ಧೋರಣೆ ಕಿ.ರಂ. ಅವರಲ್ಲಿ ಪ್ರಬಲವಾಗಿ ಬೇರೂರಿದೆ. ಇತರರ ಧೋರಣೆಗಳನ್ನು ಮತ್ತು ಚಟುವಟಿಕೆಗಳನ್ನು ಅವರಂತೆ ಸಂಯಮದಿಂದ ಸಹಿಸಿಕೊಳ್ಳುವವರಿದ್ದರೆ ಪ್ರಜಾಪ್ರಭುತ್ವ ವಾದಿ ಪ್ರಕ್ರಿಯೆಯು ಗಟ್ಟಿಗೊಳ್ಳಲು ಸಾಧ್ಯ.




೧೯೭೦ರಲ್ಲಿ ಲೆನಿನ್ ಜನ್ಮಶತಮಾನೋತ್ಸವದ ಆಚರಣೆ ಎಲ್ಲೆಲ್ಲೂ ನಡೆಯಿತು. ಬೆಂಗಳೂರಿನ ಪುರಭವನದಲ್ಲಿ ಭಾರತ-ಸೋವಿಯೆತ್ ಸಾಂಸ್ಕೃತಿಕ ಸಂಘವು ಅದನ್ನೇರ್ಪಡಿಸಿತ್ತು. ಆಗ್ಗೆ ನಾನು ಆ ಸಂಘದ ಬೆಂಗಳೂರು ಶಾಖೆಯ ಅಧ್ಯಕ್ಷ. ಸಭೆಯಲ್ಲಿ ಎಂ.ಎಸ್. ಕೃಷ್ಣನ್, ಸಿ. ಬಿ. ಮೋಟಯ್ಯ ಮುಂತಾದ ಗಣ್ಯರು ಉಪನ್ಯಾಸ ನೀಡಿದರು. ನನ್ನ ಭಾಷಣವನ್ನು ಕಿ.ರಂ. ಅವರೊಡನೆ ಮಾತನಾಡಿ ಸಿದ್ಧಮಾಡಿಕೊಂಡಿದ್ದೆ. ವರ್ಗ ಸಂಘರ್ಷದ ಪ್ರಸ್ತಾಪ ಮಾಡುವಾಗ ಬೇಂದ್ರೆಯವರ "ಇದಕ್ಕೆ ಎಂಬರು ಹುಂಬರು ಯುದ್ಧ" ಮುಂತಾದ ಸಾಲುಗಳನ್ನು ಉದ್ಧರಿಸಬಹುದೆಂದು ಕಿ.ರಂ. ನನಗೆ ತರಬೇತಿ ನೀಡಿದ್ದರು. ನನ್ನ ಸ್ವಂತದ ಕಾಣ್ಕೆಯೆಂಬಂತೆ ಅದನ್ನೆಲ್ಲಾ ಉದ್ಧರಿಸಿ ಭಾಷಣ ಮಾಡಿದೆ. ನಮ್ಮ ಕಾಲೇಜಿನ ಒಬ್ಬ ಅಧ್ಯಾಪಕರು ಆರೆಸ್ಸೆಸ್ ಸಂಪ್ರದಾಯದವರಿದ್ದರು. (ಎಷ್ಟೋ ಮಂದಿ ಇದ್ದರು, ಆದರೆ ಇವರು ಪ್ರಮುಖರು). ಅವರಿಗೆ ಹೇಗೋ ನನ್ನ ಭಾಷಣದ ವರದಿ ಮುಟ್ಟಿತ್ತು. ನನಗೆ ಅದನ್ನು ಕಿ.ರಂ. ಹೇಳಿಕೊಟ್ಟಿರಬೇಕೆಂದು ಅವರಿಗೆ ಖಾತ್ರಿಯಾಗಿತ್ತು. "ಏನ್ರೀ, ನಿಮ್ಮ ಸ್ನೇಹಿತನ ಕೈಲಿ ಬೇಂದ್ರೆ ಕೋಟ್ ಮಾಡಿಸ್ತೀರಾ" ಎಂದು ಅವರನ್ನು ತರಾಟೆಗೆ ತೆಗೆದುಕೊಂಡಿದ್ದರು. ಅದಕ್ಕೆಲ್ಲಾ 'ಕೇರ್' ಮಾಡುತ್ತಾರೆಯೇ ಕಿ.ರಂ.? "ಬೇಕಾದ್ದು ಮಾಡ್ಕೋವಿ ಹೋಗ್ರೀ" ಎಂದು ಬಿಟ್ಟರು. ಮುಂದೆ ಅದನ್ನು ಮಾಡಬೇಕಾಗಿಯೂ ಬಂತು.

ನಮ್ಮ ಕಾಲೇಜಿನ ಅಧ್ಯಾಪಕರ ಸಭೆಗಳಲ್ಲಿ ಆಗ್ಗೆ ಒಂದು ರೀತಿಯ ಅಂತರ್ಯುದ್ಧದ ವಾತಾವರಣವೇರ್ಪಟ್ಟಿತ್ತು. ವಿಶ್ವವಿದ್ಯಾನಿಲಯವು ಆನರ್ಸ್ ಕೋರ್ಸನ್ನು ರದ್ದು ಮಾಡಿದಾಗ ನಮ್ಮಲ್ಲಿದ್ದ ಇಂಗ್ಲಿಷ್, ಕನ್ನಡ, ಭೌತಶಾಸ್ತ್ರ ಮುಂತಾದ ವಿಭಾಗಗಳ ತರಗತಿಗಳು ಮುಚ್ಚಿಹೋದವು. ಆನರ್ಸ್ ಇಲ್ಲವಾದ್ದರಿಂದ ಆ ಜಾಗದಲ್ಲಿ ಐಚ್ಛಿಕ ಇಂಗ್ಲಿಷ್ ಮತ್ತು ಕನ್ನಡ ಇರುವಂತೆ ಬಿ.ಎ. ತರಗತಿಗಳನ್ನು ಆರಂಭಿಸ ಬೇಕೆಂಬ ಪ್ರಸ್ತಾಪ ಇಡಲಾಗಿತ್ತು. ಇದಕ್ಕೆ ಡಾ|| ಎಚ್. ಎನ್. ಅವರ ಸಮ್ಮತಿ ಇತ್ತು, ಆದರೆ ಬಿ. ಎ. ಬಂದರೆ ಕಾಲೇಜು ಕಲುಷಿತವಾಗುತ್ತದೆಂದು ವಾದಿಸುವವರು ಅನೇಕರಿದ್ದರು. ಅಂತಹ ಸನ್ನಿವೇಶದಲ್ಲಿ ಬೇರೆ ಕೆಲವು ಅಧ್ಯಾಪಕರಂತೆ ನಾನು ಮತ್ತು ಕಿ.ರಂ. ಸಹ ಬಿರುಸಿನ ಚರ್ಚೆಗಳಲ್ಲಿ ಪಾಲ್ಗೊಂಡಿದ್ದೆವು. ದನಿಯೆತ್ತರಿಸಿ ಮಾತನಾಡುವುದು, ಬಾಯಿ ಮಾಡುವುದು, ಕೆಲವರ ಬಾಯಿ ಮುಚ್ಚಿಸುವುದು, ಕಡೆಗೆ ಮತ ಚಲಾಯಿಸಿ ತೀರ್ಮಾನ ಮಾಡೋಣವೆಂದು ಪಟ್ಟುಹಿಡಿಯುವುದು, ಎಲ್ಲಾ ಮಾಡಿ ಸಾಕಷ್ಟು ಮಜಾ ತೆಗೆದುಕೊಂಡೆವೆಂದು ಹೇಳಬಹುದು. ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಅಧಿಕಾರ ವಹಿಸಿಕೊಂಡಿದ್ದ ಎಚ್.ಎನ್. ಸಹಜವಾಗಿಯೇ ಈ ಸಭೆಗಳಲ್ಲಿ ಇರಲಾಗುತ್ತಿರಲಿಲ್ಲ. ಸಭೆಯ ವರದಿ ಮುಟ್ಟಿದಾಗ ಅವರು ಹಿಗ್ಗಿ ಅವರ ಭಾವನೆಗಳನ್ನು ಪ್ರಕಟಿಸುತ್ತಿದ್ದುದೂ ಉಂಟು.

ಕಿ.ರಂ. ಬಗ್ಗೆ ಬರೆಯಹೊರಟು ನನ್ನ ಬಗೆಗೇ ಬರೆದುಕೊಂಡುಬಿಟ್ಟೆನೋ ಎನಿಸುತ್ತಿದೆ. ಅವರು ಆಗ್ಗೆ ರಂಗರಾವ್ ರಸ್ತೆಯ ಒಂದು ಮನೆಯಲ್ಲಿ ಕೊಠಡಿ ಯೊಂದನ್ನು ಬಾಡಿಗೆಗೆ ಹಿಡಿದಿದ್ದರು. ಕಾಲೇಜು ಬಿಟ್ಟು ಅವರು ವಿಶ್ವವಿದ್ಯಾನಿಲಯಕ್ಕೆ ತೆರಳಿದಾಗ ಆ ಕೊಠಡಿಯನ್ನು ನಾನು ಪಡೆದುಕೊಂಡೆ, ಶ್ರೀ. ಎಂ. ಸಿ. ಕೃಷ್ಣ ಅವರ ಮಧ್ಯಸ್ಥಿಕೆಯಿಂದ. ಕೊಠಡಿಯಲ್ಲಿ ಅವರ ಅಸ್ತಿತ್ವವು ಬಹಳ ಸ್ವಾರಸ್ಯಕರವಾಗಿತ್ತು. ಹಾಸಿಗೆಯ ಮೇಲೆ ಪುಸ್ತಕಗಳೋ ಅಥವಾ ಪುಸ್ತಕಗಳ ಮೇಲೆ ಹಾಸಿಗೆಯೋ ಎಂಬುದು ತಿಳಿಯುತ್ತಿರಲಿಲ್ಲ. ಯಾವುದೇ ನಿರ್ದಿಷ್ಟ ಪುಸ್ತಕವನ್ನು ಹೆಕ್ಕಿ ತೆಗೆಯಬೇಕಾದರೆ ಒಂದು ಚಿಕ್ಕ ಪ್ರಮಾಣದ ಉತ್ಖನನವೇ ನಡೆಯಬೇಕಾಗಿತ್ತು. ಅವರಲ್ಲಿ ಈ ಭೌತಿಕ ಶಿಸ್ತು ಈಗ ಸ್ವಲ್ಪ ಸುಧಾರಿಸಿದೆ. ಮಡದಿ-ಮಕ್ಕಳ ಪ್ರಭಾವವಿರಬೇಕು. ಆದರೆ ಅವರ ಬೌದ್ಧಿಕ ಶಿಸ್ತು ಅಂದೂ ಪ್ರಖರವಾಗಿತ್ತು, ಇಂದೂ ಪ್ರಖರವಾಗಿಯೇ ಇದೆ. ಎಷ್ಟು ಮಂದಿ ಪ್ರಾಧ್ಯಾಪಕರು ಕಿ.ರಂ. ಅವರಷ್ಟು ಆಳವಾಗಿ, ವ್ಯಾಪಕವಾಗಿ ಅಧ್ಯಯನ ಮಾಡಿರುತ್ತಾರೆಂಬ ಪ್ರಶ್ನೆ ಬೇಡ. ಆದರೆ ಈ ಮನುಷ್ಯ ಅದೆಷ್ಟು ಓದಿಕೊಳ್ಳುತ್ತಾರೆ, ಅದಕ್ಕೆಲ್ಲಾ ಸಮಯ ಎಲ್ಲಿಂದ ತರುತ್ತಾರೆ, ಅದಕ್ಕೆ ಬೇಕಾದ ಏಕಾಗ್ರತೆ ಹೇಗೆ ರೂಢಿಸಿಕೊಂಡಿದ್ದಾರೆ, ಎಂದೆಲ್ಲಾ ಯೋಚಿಸಿದಾಗ ನಮ್ಮ ಅಪ್ರಾಪ್ತ ಪಾಂಡಿತ್ಯದ ಬಗ್ಗೆ ಸಂಕೋಚ ಉಂಟಾಗುತ್ತದೆ, ಅವರ ಬಗ್ಗೆ ಅಭಿಮಾನ - ಹೆಮ್ಮೆ ಉಕ್ಕುತ್ತದೆ. ಇಂಥವರ ಅಧ್ಯಯನಶೀಲತೆ ಮತ್ತು ಹರಿತವಾದ ವಿದ್ವತ್ತು ಕಂಡಾಗ 'ನಾವೂ ಹಾಗಿರಬಾರದಿತ್ತೆ' ಎಂಬ ಉದ್ಗಾರ ಅನಿವಾರ್ಯ.

ಕಿ.ರಂ. ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾಗ ಎರಡು-ಮೂರು ಬಾರಿ ಕಾಲೇಜು ಅಧ್ಯಾಪಕರ 'ರಿಫ್ರೆಶರ್ ಕೋರ್ಸ್'ಗಳಲ್ಲಿ ಮಾತನಾಡಲು ನನಗೆ ಅವಕಾಶ ಕಲ್ಪಿಸಿಕೊಟ್ಟಿದ್ದರು. ಎಲ್ಲೆಲ್ಲೋ, ಏನೇನೋ ಮಾತನಾಡುವ ಮೊಂಡುಧೈರ್ಯವಿರುವ ನನಗೆ ಕಿ.ರಂ. ಇರುವಾಗ ಮಾತನಾಡಲು ಒಂದು ರೀತಿಯ ಅವ್ಯಕ್ತ ಭಯವಿರುತ್ತದೆ. ಹಾಗೆಂದು ಅವರಿಗೆ ಹೇಳಿದಾಗೆಲ್ಲಾ ಅವರ ಪ್ರತಿಕ್ರಿಯೆ ಒಂದೇ: "ನಿನಗೆಂತಹ ಭಯ? ಬಂದು ಮಾತನಾಡು" ಎಂದು. ಅವರ ಸ್ನೇಹ-ಸಜ್ಜನಿಕೆ ಸ್ವಾಗತಾರ್ಹ. ಆದರೆ ಅವರ ಪಾಂಡಿತ್ಯದೆದುರು ವಿನಯದಿಂದಲೇ ಒಂದು ರೀತಿಯ ಭೀತಿಯನ್ನು ಅನುಭವಿಸುತ್ತೇನೆ ಮತ್ತು ಅವರ ಪ್ರೀತಿಯಿಂದಾಗಿ ನಾನು ಆಗಾಗ ಎಡವಿದರೂ ಪರವಾಗಿಲ್ಲವೆಂಬ ಧೈರ್ಯವನ್ನು ತುಂಬಿಕೊಳ್ಳುತ್ತೇನೆ.

ದಿನಾಂಕ : ೨೨-೨-೨೦೦೮ ಜಿ. ರಾಮಕೃಷ್ಣ



# ವೈಚಾರಿಕ ಓರಣ ಒಳ್ಳೆಯ ಬರಹಕ್ಕೆ ಹೂರಣ

ಬದುಕು ಮತ್ತು ಬರಹ ಹತ್ತಿರವಾದವುಗಳು. ಇವೆರಡನ್ನೂ ಬೇರೆಬೇರೆಯಾಗಿ ನೋಡಲಿಕ್ಕಾಗದು. ಅರೆರೆ! ''ಮಾಮರವೆಲ್ಲೋ ಕೋಗಿಲೆ ಎಲ್ಲೋ, ಏನೀ ಸ್ನೇಹ ಸಂಬಂಧ...'' ಎಂಬ ಹಾಡು ನಿಮ್ಮ ಮನದ ಅಂತರಾಳದಲ್ಲಿ ಗುನುಗುತ್ತಿದ್ದರೆ, ನೀವು ಸಂಗೀತ ಪ್ರೇಮಿಗಳೇ ಇರಬೇಕು. ಏಕೆಂದರೆ, ಎಲ್ಲಿಯ ಬದುಕು! ಎಲ್ಲಿಯ ಬರಹ!! ಎಲ್ಲಿಯದೋ ಈ ಅನುಬಂಧ!!!... ಎಂದೆಲ್ಲ ವಿಚಾರ ಮಾಡುತ್ತಿದ್ದೀರಾ ? ಇಲ್ಲಿ ಕೇಳಿ, ಬದುಕು ಬರಹಗಳಲ್ಲಿ ಅನುಬಂಧಗಳುಂಟು, ಅನೇಕ ಅನುರೂಪಗಳುಂಟು, ಆದರೆ, ವ್ಯತ್ಯಾಸಗಳು ಮಾತ್ರ ವಿರಳ. ಬದುಕು ಉದಯಿಸುತ್ತದೆ. ಜೀವಿಸುತ್ತದೆ, ವಿಜೃಂಭಿಸುತ್ತದೆ, ಕ್ಷೀಣಿಸುತ್ತದೆ, ಕಡೆಗೆ ಮುಗಿಯುತ್ತದೆ. ಹಾಗೆಯೇ, ಬರಹವೂ ಕೂಡ, ಅಲ್ಲವೇ ? ಆದರೆ ಕೆಲವರ ಬದುಕು ನಿರರ್ಥಕ, ಮತ್ತೆ ಕೆಲವರದು ಸಾರ್ಥಕ. ಇನ್ನು, ಕೆಲವರದು ಅಜರಾಮರ!! ಉತ್ತಮ ಲೇಖಕರು ಸಾರ್ಥಕ ಬರಹವನ್ನು ಬರೆಯಲು ಬಯಸಬೇಕು. ಬರೆದ ಬರಹಗಳನ್ನು ಹೆಚ್ಚು ಓದುಗರಿಗೆ ತಲುಪಬೇಕು, ಹೇಗೆ ಒಂದು ಹಾಡನ್ನು ಹಾಡುವವರು ಬರೀ ಹಾಡಿದರೆ ಸಾಲದು, ಹಾಡುವವರು ಹಾಡುವಾಗ, ಮತ್ತು ಕೇಳುವವರು ಆಲಿಸುವಾಗ, ಅದನ್ನು ಅನುಭವಿಸಬೇಕು. ಹಾಗೆಯೇ, ಬರಹವು ಓದುಗರು ಮೆಚ್ಚಿ ಅನುಭವಿಸುವಂತಿರಬೇಕು. ಅವರ ಹೊಗಳಿಕೆಗೆ ಪಾತ್ರವಾಗಬೇಕು, ಎಲ್ಲಕ್ಕಿಂತ ಮಿಗಿಲಾಗಿ ಲೇಖಕನಿಗೇ ತೃಪ್ತಿಕೊಡುವಂತಿರಬೇಕು, ಬರಹ ಅಜರಾಮರವಾಗಿ ಉಳಿಯಬೇಕು.

ಶಾಶ್ವತವಾಗಿ ಉಳಿಯುವಂಥ ಬರಹವನ್ನು ಬರೆಯುವದು ಸಾಧ್ಯವೇ ? ಸಾಧ್ಯವಿದೆ. ರಾಷ್ಟ್ರಕವಿಗಳಾದ ಕುವೆಂಪು, ಜಿಎಸ್‌ಎಸ್ ಅವರು ಬರೆದದ್ದೆಲ್ಲ ಅಜರಾಮರ. ಕನ್ನಡದ ಆಸ್ತಿ ಮಾಸ್ತಿಯವರು ಸಣ್ಣ ಕತೆಗಳ ಬ್ರಹ್ಮರಾಗಿ ಕನ್ನಡಿಗರ ಹೃದಯದಲ್ಲಿ ಈಗಲೂ ರಾರಾಜಿಸುತ್ತಿದ್ದಾರೆ. ಬೇಂದ್ರೆಯವರ ಶಬ್ದಗಳೊಂದಿಗಿನ ಡೊಂಬರಾಟವನ್ನು ಸಾಹಿತ್ಯಾಸಕ್ತರು ಮರೆಯಲು ಸಾಧ್ಯವೇ ಇಲ್ಲ. ಕಾರಂತರನ್ನು ನಡೆದಾಡುವ ಸಾಹಿತ್ಯಕೋಶವೆಂದೇ ಹೇಳುತ್ತಾರೆ. ಅವರು ಮುಟ್ಟದ ಸಾಹಿತ್ಯ ಕ್ಷೇತ್ರಗಳೇ ಇಲ್ಲ. ಕುವೆಂಪು ಅವರ ರಾಮಾಯಣ ದರ್ಶನಂ, ಮಾಸ್ತಿಯವರ ಚಿಕವೀರರಾಜೇಂದ್ರ, ಬೇಂದ್ರೆಯವರ ನಾಕುತಂತಿ, ಶಿವರಾಮ ಕಾರಂತರ ಮೂಕಜ್ಜಿಯ ಕನಸುಗಳು ಮತ್ತು ಗೋಕಾಕರ ಭಾರತಸಿಂಧು ರಶ್ಮಿ ಅಜರಾಮರ ಬರಹಗಳೇ. ಪಂಪನ ರಗಳೆ, ವಾಲ್ಮೀಕಿ ರಾಮಾಯಣ, ರವೀಂದ್ರನಾಥ ಟಾಗೋರ್ ಅವರ ಗೀತಾಂಜಲಿ, ಸರ್ವಜ್ಞ ಬರೆದ ತ್ರಿಪದಿಗಳು, ನಿಜಗುಣರ ಕೈವಲ್ಯ ಪದ್ಧತಿ ಇವೆಲ್ಲ ಶಾಶ್ವತ ಬರಹಗಳು. ಬಸವಣ್ಣನವರು, ಶರೀಫರು, ವಿವೇಕಾನಂದರು ಮುಂತಾದ ಪ್ರಸಿದ್ಧ ದಾರ್ಶನಿಕರು ಹೇಳಿದ್ದು ಅಜರಾಮರವಾಗಿ ಉಳಿದಿದೆ ಎಂದಾದರೆ, ಸಾರ್ಥಕ ಹಾಗೂ ಅಜರಾಮರವಾಗಿ ಉಳಿಯಬಲ್ಲ ಬರಹವನ್ನು ಸೃಷ್ಟಿಸಬಹುದಾಗಿದೆ ಎಂದಂತಾಯಿತು, ಅಲ್ಲವೆ ?

ಸಾರ್ಥಕ ಬರಹ ಬರೆಯಲು ಬಯಸುವ ಲೇಖಕರು ಮೊದಲು ಉತ್ತಮ ಓದುಗರಾಗಬೇಕು. ಉತ್ತಮ ಲೇಖಕರ ಬರಹಗಳನ್ನು ಓದಬೇಕು. ಹೇಗೆ ಓದಬೇಕು ಎನ್ನುವುದರ ಬಗೆಗೆ, ತಮ್ಮ ಆತ್ಮಚರಿತ್ರೆಯಲ್ಲಿ ಒಂದು ಕಡೆ ಮಹಾತ್ಮಾ ಗಾಂಧೀಜಿಯವರು ಹೀಗೆ ಬರೆಯುತ್ತಾರೆ: ''ನಾನು ವಿದ್ಯಾರ್ಥಿಯಾಗಿದ್ದಾಗ ಪಠ್ಯಪುಸ್ತಕಗಳಿಂದಾಚೆ ಓದಲಿಲ್ಲ, ಸಾರ್ವಜನಿಕ ಜೀವನದಲ್ಲಿ ನನ್ನನ್ನು ತೊಡಗಿಸಿಕೊಂಡಮೇಲೆ ಪುಸ್ತಕ ಓದಲು ಸಮಯವೇ ಸಿಗಲಿಲ್ಲ. ಅದರಿಂದ ನನ್ನ ಪುಸ್ತಕ ಜ್ಞಾನ ಕಡಿಮೆಯಾಯಿತು. ಆದರೆ, ಇದರಿಂದ ನನಗೇನೂ ನಷ್ಟವಾಗಲಿಲ್ಲ. ಯಾಕೆಂದರೆ, ನಾನು ಓದಿದ ಕೆಲವೇ ಪುಸ್ತಕಗಳನ್ನು ಚೆನ್ನಾಗಿ ಮನನವಾಗುವಂತೆ ಓದಲು ಸಮಯ ದೊರೆಯಿತು. ಪ್ರತಿಯೊಂದು ಪುಟ ಓದುವಾಗ ಲೇಖಕನೊಂದಿಗೆ ಮಾತನಾಡುತ್ತ, ಪುಟದಲ್ಲಿದ್ದ ಮಾಹಿತಿಯನ್ನು ವಿಶ್ಲೇಷಿಸಿ, ವಿಮರ್ಶಿಸಿ ನನಗೆ ಬೇಕಾದುದನ್ನು ಬೇರ್ಪಡಿಸಿ, ಅದನ್ನಷ್ಟೇ ನನ್ನದಾಗಿ ಉಳಿಸಿಕೊಂಡು, ಜೊಳ್ಳನ್ನೆಲ್ಲ ಬಿಟ್ಟುಬಿಡುತ್ತಿದ್ದೆ.'' ಹೀಗೆ ಗಾಂಧೀಜಿಯವರು ಪ್ರತಿ ಪುಟಗಳನ್ನು ಬರೀ ಓದುತ್ತಿರಲಿಲ್ಲ, ಬದಲಾಗಿ, ಅಧ್ಯಯನ ಮಾಡುತ್ತಿದ್ದರು. ಅವರು ಓದುತ್ತಿದ್ದಾಗ ಲೇಖಕರ ಮನಸ್ಸಿನೊಂದಿಗೆ ಮಾತನಾಡುತ್ತಿದ್ದರು ಎಂಬುದನ್ನು ನಾವು ಗಮನಿಸುವದು ಸೂಕ್ತ.

ಹಾಗಾದರೆ, ಉತ್ತಮ ಲೇಖಕರಾಗಬಯಸುವವರು ಎಷ್ಟು ಓದಬೇಕು ? ಓದಿ ಓದಿ ತಮ್ಮ ಅಂತರಂಗದಲ್ಲಿ ಅಡಗಿದ ಲೇಖಕ ಎಚ್ಚೆತ್ತು ಬರೆಯಲು ಪ್ರೇರೇಪಿಸುವ ತನಕ ಓದು ಸಾಗಬೇಕು. ವಾಜ್ಮಿಗಳ ಮಾತುಗಳನ್ನು ಆಲಿಸಬೇಕು. ಪರಿಸರದ ಸುತ್ತಲಿನ ಎಲ್ಲ ಮೂಲಗಳನ್ನು ಬಳಸಿ, ತಮ್ಮ ಶಬ್ದಭಂಡಾರವನ್ನು ಶ್ರೀಮಂತಗೊಳಿಸಿಕೊಳ್ಳಬೇಕು. ಬರೆಯಲು ಆಯ್ದ ವಿಷಯವನ್ನು ಚೆನ್ನಾಗಿ ಅಭ್ಯಸಿಸಬೇಕು. ಆ ವಿಷಯದ ಎಲ್ಲ ಆಯಾಮಗಳನ್ನು ಜಾಲಾಡಿ ಮಾಹಿತಿ ಸಂಗ್ರಹಿಸಬೇಕು. ಈ ಮಾಹಿತಿ ಸಂಗ್ರಹಣೆ ಬಹಿರಂಗದಲ್ಲಿ ನಡೆಯುವ ಪ್ರಕ್ರಿಯೆ. ಸಂಗ್ರಹಿಸಿದ ಮಾಹಿತಿಯಲ್ಲಿ ಕೆಲವು ಪೊಳ್ಳಿರಬಹುದು, ಕೆಲವು ಗಟ್ಟಿಕಾಳಾಗಿರಬಹುದು. ವಿಷಯಕ್ಕೆ

ಪ್ರೊ॥ ಆರ್. ಪಿ. ಪುನಗಿನ



ಸಂಬಂಧಪಟ್ಟ ಎಲ್ಲವನ್ನೂ ಸಂಗ್ರಹಿಸಿಡುವದು ಸೂಕ್ತ. ಇಷ್ಟೆಲ್ಲ ಆದಮೇಲೆ ಲೇಖಕನ ಮನಸ್ಸು ತನ್ನ ಕಾರ್ಯ ಪ್ರಾರಂಭಿಸಬೇಕಾಗುತ್ತದೆ. ಏಕೆಂದರೆ, ಲೇಖನ ಬರೆಯುವಾಗ ಮತ್ತು ಲೇಖನ ಓದುವಾಗ ಎರಡು ಮನಸ್ಸುಗಳೂ ಪರಸ್ಪರ ಮಾತನಾಡುತ್ತಿರುತ್ತವೆ.

ಒಂದು ಸಂವಹನ ಕ್ರಿಯೆ ನಡೆಯುವಾಗ ಎರಡು ಮನಸ್ಸುಗಳು ಮಾತನಾಡುತ್ತವೆ, ನಿಜ. ಆದರೆ, ಅದಕ್ಕೆ ಇಬ್ಬರು ವ್ಯಕ್ತಿಗಳು ಬೇಕಾಗಿಲ್ಲ, ಒಬ್ಬರೇ ಸಾಕು. ದಿನದ ಇಪ್ಪತ್ನಾಲ್ಕೂ ಘಂಟೆ ಮತ್ತು ವರ್ಷದಲ್ಲಿ ಮೂರುನೂರ ಅರವತ್ತೈದೂ ದಿನ ನಮಗರಿವಿಲ್ಲದಂತೆ ನಮ್ಮ ಅಂತರ್ ಜಾಗೃತ ಮನಸ್ಸಿನೊಂದಿಗೆ ಮಾತನಾಡುತ್ತಿರುತ್ತೇವೆ ಎನ್ನುವದನ್ನು ಕೆಲವರು ಮಾತ್ರ ಗುರುತಿಸಿಕೊಂಡಿರುತ್ತಾರೆ. ನದಿಯು ಸಮುದ್ರ ಸೇರುವದನ್ನು ಎಲ್ಲರೂ ಗುರುತಿಸುತ್ತಾರೆ, ಆದರೆ, ಸಮುದ್ರವು ನದಿಗೆ ಕೂಡುವದನ್ನು ಕೆಲವರು ಮಾತ್ರ ಗುರುತಿಸಬಲ್ಲರು. ನಾವು ಬೇರೆಯವರ ಜೊತೆಗೆ ದಿನದ ಕೆಲ ಘಂಟೆಗಳವರೆಗೆ ಮಾತ್ರ ಮಾತನಾಡುವದಕ್ಕಿಂತ, ಪ್ರತಿಯೊಬ್ಬರೂ ನಿರಂತರವಾಗಿ ತಮ್ಮ ಅಂತರ್ ಮನಸ್ಸಿನೊಂದಿಗೆ ಮಾತನಾಡುವ ಪ್ರಕ್ರಿಯೆ ಎಷ್ಟು ಪ್ರಮುಖವಾದದ್ದು ನೋಡಿ. ಉತ್ತಮ ಲೇಖಕ, ಲೇಖನ ಬರೆಯಲು ಪ್ರಾರಂಭಿಸುವದಕ್ಕಿಂತ ಮೊದಲು, ತನ್ನ ಅಂತರಾಳದ ಮನಸ್ಸಿನೊಂದಿಗೆ ಸಂವಾದದಲ್ಲಿ ತೊಡಗಿ, ಸಂಗ್ರಹಿಸಿದ ಮಾಹಿತಿಯನ್ನು ಹೆಕ್ಕಿ, ಓರಣಗೊಳಿಸುವುದು ಅತೀ ಮುಖ್ಯ. ಅದನ್ನೇ ನಾನು ವೈಚಾರಿಕ ಓರಣ ಅಂದಿದ್ದು.

ಒಂದು ಬರಹದಲ್ಲಿ ಒಂದು ತಲೆಬರಹ, ಪೀಠಿಕೆ, ಆಯ್ದ ವಿಷಯದ ಬಗೆಗೆ ವಿಸ್ತೃತ ವಿವರಣೆ, ಉದಾಹರಣೆಗಳು, ಅಂಕಿ-ಅಂಶಗಳು, ಉಪಸಂಹಾರ ಹೀಗೆ ಕೆಲವು ಪರಿಚ್ಛೇದಗಳಿರುತ್ತವೆ. ಸಂಗ್ರಹಿಸಿದ ಮಾಹಿತಿಯನ್ನು ಮನದಲ್ಲಿರಿಸಿಕೊಂಡು, ಈ ಎಲ್ಲ ವಿಭಾಗಗಳನ್ನು ಯಾವ ರೀತಿಯಲ್ಲಿ ಪ್ರಸ್ತುತಪಡಿಸಬೇಕೆಂದು ಮನದಲ್ಲಿಯೇ ಒಂದು ನೀಲನಕ್ಷೆ ತಯಾರಿಸಿಕೊಳ್ಳಬೇಕು. ವೈಚಾರಿಕ ಓರಣವಿಲ್ಲದೇ ಉತ್ತಮ ಲೇಖನ ಬರೆಯುವದು, ಕತ್ತಲ ರಾತ್ರಿಯಲ್ಲಿ, ಗೊತ್ತಿಲ್ಲದ ಅಭಯಾರಣ್ಯದಲ್ಲಿ ದಾರಿ ತಿಳಿಯದೇ ಪರದಾಡುವದಕ್ಕಿಂತ ಕಠಿಣವಾದದ್ದು. ಅದಕ್ಕೆಂತಲೇ ಬರಹ ಪ್ರಾರಂಭಿಸುವ ಮೊದಲು, ಒಳ ಮನಸ್ಸಿನಲ್ಲಿ ಬರಹಕ್ಕೊಂದು ಚೌಕಟ್ಟನ್ನು ತಯಾರಿಸಿಕೊಳ್ಳಬೇಕು. ಓದುಗರ ಮನದಲ್ಲಿ ಉದ್ಭವಿಸಬಹುದಾದ ಎಲ್ಲ ಪ್ರಶ್ನೆಗಳಿಗೆ, ಲೇಖಕ ಯೋಚಿಸಿ, ಉತ್ತರ ಬರೆದು ಇಡುವದು ಸೂಕ್ತ. ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಮನದಲ್ಲಿ ಬರುವ ಎಲ್ಲ ವಿಚಾರಗಳನ್ನು ಕ್ರಮವಾಗಿ ಹೊಂದಿಸಿ ಟಿಪ್ಪಣಿ ಮಾಡಿಡಬೇಕು.

ಆಯ್ದ ವಿಷಯಕ್ಕೆ ಸೂಕ್ತ ತಲೆಬರಹ, ಒಂದು ಉತ್ತಮ ಶಬ್ದಪುಂಜ, ಒಂದು ಒಳ್ಳೆಯ ನಾಣ್ಣುಡಿ, ಒಂದು ನುಡಿಗಟ್ಟು, ಓದುಗರಿಗೆ ಮಿಂಚು ಹೊಡೆಸಬಹುದಾದ ಹರಿತವಾದ ವಾಕ್ಯ, ಯಾವ ಸಮಯದಲ್ಲಿ ಮನದಲ್ಲಿ ಹೊಳೆಯುವದೆಂದು ಹೇಳಲಿಕ್ಕಾಗದು. ಅದು ಪ್ರೇಯಸಿಗೆ ಬರೆಯುವ ಕವನದ ಒಂದು ಸುಂದರ ಸಾಲಾಗಿರಬಹುದು, ಪತ್ತೆದಾರಿ ಲೇಖನಕ್ಕಾಗಿ ಒಂದು ಅಪರೂಪದ ಕಾದಾಟದ ದೃಶ್ಯವಾಗಿರಬಹುದು, ರಂಗುರಂಗಿನ ನೈಸರ್ಗಿಕ ದೃಶ್ಯದ ವರ್ಣನೆ ಇರಬಹುದು, ಡೈನಾಮೈಟ್ ಪಂಚ್ ಇರಬಹುದು. ಹಾಸ್ಯಚಟಾಕಿಯ ತುಣುಕಿರಬಹುದು. ಹೊಳೆದದ್ದನ್ನು ಆಗಿಂದಾಗ ಬರೆದಿಡುವ ಹವ್ಯಾಸ ಒಳ್ಳೆಯದು. ಬರೆಯಲು ಬೇಕಾದ ಕಾಗದ ಅಥವಾ ನೋಟ್‌ಬುಕ್, ಪೆನ್ನು, ಯಾವಾಗಲೂ ಕೈಗೆಟಕುವಂತಿರಬೇಕು. ಉತ್ತಮ ಲೇಖಕನ ತಲೆದಿಂಬಿನಡಿಗೆ, ಅಂಗಿಯ ಜೇಬಿನಲ್ಲಿ, ಸ್ನಾನದ ಕೋಣೆಯಲ್ಲಿ, ಕನಿಷ್ಠ ಒಂದು ಚಿಕ್ಕ ಕಾಗದದ ಕಟ್ಟು, ಮತ್ತು ಪೆನ್ನು ಇರಲೇಬೇಕು. ಕೆಲವೊಂದು ಸಲ ನಮಗೆ ಸುಖನಿದ್ರೆ ಆವರಿಸುತ್ತಿದ್ದಾಗಲೇ ಅದೆಷ್ಟೋ ಅಚ್ಚುಕಟ್ಟಾದ ವಿಚಾರಗಳು ನಿಚ್ಚಳವಾಗಿ ಹೊಳೆಯುತ್ತವೆ. ಆಗ ಹೊಳೆದದ್ದನ್ನು ಮುಂಜಾನೆ ಎದ್ದ ಮೇಲೆ ಬರೆದರಾಯಿತು ಎಂದು ಅಲ್ಲಿಗೇ ಬಿಟ್ಟರೋ, ಮುಗಿಯಿತು, ಅದು ಮಳೆಯ ನೀರನ್ನು ಹೊಳೆಗೆ ಹರಿಬಿಟ್ಟು, ಸಮುದ್ರ ತಲುಪಲು ಬಿಟ್ಟಂತೆ. ಅದು ನಿಮಗೆ ಎಟುಕದಷ್ಟು ದೂರ ಹೋಗಿಬಿಡುವುದು. ಎಷ್ಟೇ ತಲೆ ಕೆರೆದುಕೊಂಡರೂ ಮತ್ತೆ ಹೊಳೆಯದಿರಬಹುದು. ಮನದಲ್ಲಿಯ ವಿಚಾರಗಳು ಮಳೆಯಲ್ಲಿ ಭೋರ್ಗರೆವ ಮಳೆಯ ಹನಿಗಳು, ಹರಿದು ಸಾಗರ ಸೇರುವವು. ಆದರೆ, ಹಿಡಿದಿಟ್ಟ ಜಿನುಗುವ ಹನಿಗಳು, ಕಲ್ಮಶರಹಿತ ಶುಭ್ರ ಮುತ್ತುಗಳು. ಅವನ್ನೆಲ್ಲ ಸಂಗ್ರಹಿಸಿಡುವದು ಒಳ್ಳೆಯ ಲೇಖಕರ ಲಕ್ಷಣ.

ಬದುಕಿನಲ್ಲಿ ಶಿಸ್ತನ್ನು ಅಳವಡಿಸಿಕೊಂಡವರು, ಮಾನವೀಯ ಮೌಲ್ಯಗಳನ್ನು ಮೈಗೂಡಿಸಿಕೊಂಡವರು, ಯಶಸ್ವೀ ಜೀವನ ನಡೆಸುವವರೆಲ್ಲರೂ ಉತ್ತಮ ಬರಹ ಬರೆಯಲು ಸಮರ್ಥರು ಎನ್ನುವದು ಸರಿ ಎನಿಸಲಾರದು. ಜೀವನದ ಶಿಸ್ತಿಗೆ ಬೇಕಾದ ವಸ್ತುಗಳನ್ನು ಪೇಟೆಯಲ್ಲಿ ಕೊಂಡು ತರಬಹುದು. ಆದರೆ ಬರಹಕ್ಕೆ ಬೇಕಾದ ಶಿಸ್ತನ್ನು ವೈಚಾರಿಕ ಓರಣದಿಂದ ಮಾತ್ರ ಸಂಪಾದಿಸಲು ಸಾಧ್ಯ. ವೈಚಾರಿಕ ಓರಣ ಎಂದರೇನು ? ಯಾವಾಗಲೂ ಒಳ್ಳೆಯದನ್ನು ಯೋಚಿಸುವದು, ಒಳ್ಳೆಯದನ್ನು ಮಾತನಾಡುವದು ಮತ್ತು ಮಾಡುವದು, ನಮ್ಮ ಒಳಮನಸ್ಸು ಧನಾತ್ಮಕವಾಗಿ ವಿಚಾರಿಸುವಂತೆ ಅದಕ್ಕೆ ತರಬೇತಿ ಕೊಡುವದು. ಇದು ಬದುಕಿಗಾಗಿ ಬೇಕಾದ ವೈಚಾರಿಕ ಓರಣ. ಬದುಕಿಗೆ ಬೇಕಾದ ವೈಚಾರಿಕ ಓರಣಕ್ಕಿಂತ ಬರಹಕ್ಕೆ ಬೇಕಾಗುವ ಅಂತರ್‌ಮನಸ್ಸಿನ ತಯಾರಿ ಭಿನ್ನವಾದದ್ದು ಮತ್ತು ವಿಶಿಷ್ಟವಾದದ್ದು. ಬದುಕಿನ ಓರಣಕ್ಕಾಗಿ ಸಂಗ್ರಹಿಸಿದ ಕೆಲ ವಸ್ತುಗಳನ್ನು ಬೇಡವೆನಿಸಿದಾಗ ಬಿಸಾಡಿಬಿಡಬಹುದು. ಆದರೆ, ಬರಹಕ್ಕೆ ಬೇಕಾದ ಯಾವುದೇ ಒಂದು ಚಿಕ್ಕ ವಿಚಾರವನ್ನು ಬಿಸಾಡುವಂತಿಲ್ಲ, ಆ ಕ್ಷಣದಲ್ಲಿ ಮನದಲ್ಲಿ ಉದಯಿಸಿದ ಒಂದು ಚಿಕ್ಕ ವಾಕ್ಯ, ಒಂದು ಸುಂದರ ದೃಶ್ಯಾವಳಿ, ಶಬ್ದಸಮೂಹ ಸದ್ಯದ ಬರಹಕ್ಕೆ ಬೇಕಾಗಿರಲಿಕ್ಕಿಲ್ಲ. ಅದು ಮತ್ತೊಂದು ಬರಹಕ್ಕೆ ಅತೀ ಸೂಕ್ತ ಆಹಾರವಾಗಬಹುದು. ಆದ್ದರಿಂದಲೇ, ಒಳ್ಳೆಯ ಲೇಖಕನಿಗೆ ಆಗಾಗ ಅಂತರ್‌ಮನಸ್ಸಿನಲ್ಲಿ ಉದಯಿಸಿದ ವಿಚಾರಗಳನ್ನು ಗಾಳಿಗೆ ಹಾರಿಬಿಡದೇ ಅವುಗಳನ್ನು ಹಿಡಿದಿಟ್ಟು ಬರೆದಿಡುವದು ಒಳ್ಳೆಯ ಹವ್ಯಾಸ.

ತಂಗಾಳಿಯಲ್ಲಿ ಹೊಯ್ದಾಡುವ ಕೈತೋಟದಲ್ಲಿಯ ಒಂದು ಸುಂದರ ಹೂವು, ಹೂವಿನಿಂದ ಹೂವಿಗೆ ಹಾರಾಡುವ ದುಂಬಿ, ಅತ್ತಿಂದಿತ್ತ ಮೇಲಿಂದ ಕೆಳಗೆ ಮತ್ತು ಕೆಳಗಿನಿಂದ ಮೇಲೆ ಸರಿದಾಡುವ ನೀರಿನಲ್ಲಿರುವ ಮೀನು, ಬಿರುಗಾಳಿಗೆ ಬೋರಲಾಗಿ ಬಿದ್ದ ಒಂದು ಗಿಡ, ಕಾದಾಡುವ ಕೋಳಿಗಳು, ದಾರಿ ದಾಟುವಾಗ ಹಾರಾಡುವ ಪಾತರಗಿತ್ತಿಯನ್ನು ಹಿಡಿಯಲು ಭಂಗನೆ ಹಾರುವ ಒಂದು ಬೆಕ್ಕು, ಕಾರು ಓಡಿಸುವಾಗ ಸರಿಯದೇ ಅಡ್ಡಗಟ್ಟಿ ನಿಲ್ಲುವ ಎಮ್ಮೆ, ನೀರಿಲ್ಲದೆ ಬರಡಾಗಿ ನಿಂತ ಬೆಳೆ, ಧೋ ಎಂದು ಸುರಿಯುವ ಸೋನೆಮಳೆ, ಇಂಥ ದೃಶ್ಯಗಳನ್ನು ಕವಿಗಳು ಮತ್ತು ಲೇಖಕರು ನಿರೀಕ್ಷಿಸುತ್ತಾರೆ, ಆದರೆ ಸಾಮಾನ್ಯರು

ನೋಡಿ ಮುಂದೆ ಸಾಗುತ್ತಾರೆ. ನಮ್ಮ ಸುತ್ತಲೂ ಜರುಗುವ ಇಂಥ ದೃಶ್ಯಗಳಿಗೆ ಮಿತಿ ಎಲ್ಲಿದೆ? ಪ್ರತಿಯೊಂದು ಸಂಗತಿಗಳು ಒಂದು ಬರಹಕ್ಕೆ, ಒಂದು ಕತೆಗೆ, ಒಂದು ಕಾದಂಬರಿಗೆ ಸ್ಫೂರ್ತಿಯ ಸೆಲೆಯಾಗಬಹುದು. ಅವು ಬರಹಕ್ಕೆ ಬೇಕಾಗುವಷ್ಟು ಆಹಾರ ಒದಗಿಸಬಲ್ಲವು. ಉತ್ತಮ ಲೇಖಕರಾಗಬಯಸುವವರು ಇಂಥ ಸಾಮಾನ್ಯ ದೃಶ್ಯಗಳನ್ನು ನಿರೀಕ್ಷಿಸಿ, ತಮ್ಮ ಅಂತರ್‌ಮನಸ್ಸಿನಲ್ಲಿ ಉದಯಿಸುವ ವಿಚಾರಗಳನ್ನು ಆಗಿಂದಾಗ ದಾಖಲಿಸಿ ಇಟ್ಟುಕೊಂಡು, ಬೇಕಾದಾಗ ಉಪಯೋಗಿಸಿಕೊಳ್ಳಬೇಕು. ಒಬ್ಬ ತಾಯಿ ಗರ್ಭ ನಿಂತ ಕ್ಷಣದಿಂದ ತನ್ನ ಅಂತರ್‌ಮನಸ್ಸಿನೊಂದಿಗೆ ಸಂವಾದ ಪ್ರಾರಂಭ ಮಾಡುತ್ತಾಳೆ. ತನ್ನ ಮಗು ಸುಂದರವಾಗಿರಬೇಕು, ಸದೃಢವಾಗಿರಬೇಕು, ಸದ್ಗುಣಿಯಾಗಿರಬೇಕು ಎಂದು, ಹರಿಕಥೆ ಕೇಳುವದರಲ್ಲಿಯೋ, ಒಳ್ಳೆಯ ಸಾಹಿತ್ಯ ಓದುವದರಲ್ಲಿಯೋ, ದೇವರ ಪ್ರಾರ್ಥನೆ ಮಾಡುವದರಲ್ಲಿಯೋ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾಳೆ. ತಾಯಿ ಒಂದು ಮಗುವಿಗೆ ಜನ್ಮ ಕೊಟ್ಟಾಗ ಮತ್ತು ಲೇಖಕ ಒಂದು ಒಳ್ಳೆಯ ಬರಹ ಬರೆದು ಮುಗಿಸಿದಾಗ ಆಗುವ ಸಂತೋಷಗಳೆರಡರಲ್ಲಿ ಹೆಚ್ಚು ವ್ಯತ್ಯಾಸವಿರುವದಿಲ್ಲ, ವ್ಯತ್ಯಾಸವಿರಬಾರದು.

ನಮ್ಮ ಮನಸ್ಸು ನಮ್ಮ ಬದುಕಿನ ಸಾರಥಿ, ವಿಚಾರಗಳ ಉಗಮಸ್ಥಾನ. ವೈಚಾರಿಕತೆ ಎರಡು ನೆಲೆಗಳಲ್ಲಿ ಅಸ್ತಿತ್ವ ಹೊಂದಿರುತ್ತದೆ. ಒಂದು ಬೌದ್ಧಿಕ, ಮತ್ತೊಂದು ಕ್ರಿಯಾತ್ಮಕ, ಒಂದು ಆಂತರಿಕ, ಮತ್ತೊಂದು ಬಹಿರಂಗವಾದದ್ದು. ಲೇಖಕನ ವೈಚಾರಿಕ ಓರಣ ಆತನ ಮನಸ್ಸಿನಲ್ಲಿ ನಡೆಯುವಂಥಾದ್ದು. ಆತನು ಮಾತನಾಡುವಾಗ, ಸಾಯಂಕಾಲದ ವಿಹಾರದಲ್ಲಿ, ಸ್ನಾನ ಮಾಡುವಾಗ, ಊಟ ಮಾಡುವಾಗ, ಬಸ್ಸಿನಲ್ಲೋ ಕಾರಿನಲ್ಲೋ ಪ್ರವಾಸ ಮಾಡುವಾಗ, ಅಷ್ಟೇ ಏಕೆ ಮಲಗಿದಾಗಲೂ ಆಂತರಿಕ ವೈಚಾರಿಕ ಓರಣ ಪ್ರಕ್ರಿಯೆ ಜಾಗೃತವಾಗಿರಬೇಕು. ಹೊಳೆದ ಉತ್ತಮ ವಿಚಾರವನ್ನು ಆಗಿಂದಾಗ ದಾಖಲಿಸಿಡುವ ಕ್ರಿಯೆ ನಿರಂತರವಾಗಿ ನಡೆಯುತ್ತಲೇ ಇರಬೇಕು. ಯಾಕೆಂದರೆ ವೈಚಾರಿಕ ಓರಣ ಅಗೋಚರವಾದದ್ದು. ಕವಿತೆ ಎಂಬುದು ಆತ್ಮದಿಂದ ಹೊರಹೊಮ್ಮಿದ ಕೌತುಕದ ಉಸಿರು, ಎಂದು ಕವಿಗಳು ಬಣ್ಣಿಸುತ್ತಾರೆ. ಕಾವ್ಯ ಕವಿಯ ಆತ್ಮದ ಪಿಸುಮಾತಿನಂತೆ. ಒಳ್ಳೆಯ ಬರಹ ಬರೆಯಬೇಕೆಂಬ ಕನಸು ಕಾಣಲು ಪ್ರಯತ್ನವಿಲ್ಲದ ನಿದ್ದೆ ಸಾಕಾದರೆ, ಅದನ್ನು



ಬರೆಯಲು ನಿದ್ದೆ ಇಲ್ಲದ ಪ್ರಯತ್ನಬೇಕು. ಬದುಕು ಬರಹಗಳೆರಡೂ ಹಾಸು-ಹೊಕ್ಕು ಮತ್ತು ಬಳ್ಳಿ-ಹೂವುಗಳಿದ್ದಂತೆ. ಬರಹದ ಬಳ್ಳಿಯಲ್ಲಿ ಒಂದು ಸೂಕ್ತ ಶಬ್ದದ ಮೆರುಗು, ಒಂದು ಸುಂದರ ಹೂವಿನ ಮೊಗ್ಗಾಗಿ ಮೊಳಕೆಯೊಡೆಯುವುದು ಯಾವಾಗ ಎಂಬುದನ್ನು ಯಾರು ಬಲ್ಲರು?

ಓದಿದ ಯಾವುದೇ ಪುಸ್ತಕವಿರಲಿ, ಲೇಖನವಿರಲಿ, ಕಥೆಯಿರಲಿ, ಪರಿಚ್ಛೇದವಿರಲಿ, ಸುದ್ದಿಯ ತುಣುಕಿರಲಿ ಅಥವಾ ದಿನಪತ್ರಿಕೆಯ ತಲೆಬರಹವಿರಲಿ, ಕವನವಿರಲಿ, ಅದರಲ್ಲಿ ಖಂಡಿತ ಬರೆದು ಸಂಗ್ರಹಿಸಿಡಬಲ್ಲ, ಕೆಲವಾದರೂ, ಸಂಗತಿಗಳಿರುತ್ತವೆ ಎಂಬುದನ್ನು ಲೇಖಕರಾಗಬಯಸುವವರು ಗುರುತಿಸುವದನ್ನು ಕಲಿತಿರಬೇಕು. ಒಬ್ಬ ಉತ್ತಮ ಲೇಖಕನ ಗಾದಿಯ ಕೆಳಗೆ ತುಂಡು ಬರಹದ ಹಾಳೆಗಳೇ ತುಂಬಿರುತ್ತವೆ. ಒಕ್ಕಲಿಗನು ಒಳ್ಳೆಯ ಬೀಜ ಸಿಕ್ಕಾಗ ಸಂಗ್ರಹಿಸಿಡುವನು. ಬಡಿಗನು ಒಂದು ಒಳ್ಳೆಯ ಅಪರೂಪದ ಜಾತಿಯ ಕಟ್ಟಿಗೆಯ ತುಂಡು ಕಂಡಾಗ ಅದನ್ನು ಬಾಚಿಕೊಂಡು ತನ್ನ ಬತ್ತಳಿಕೆಗೆ ಹಾಕಿಬಿಡುವನು. ಕಮ್ಮಾರ ಸಿಕ್ಕ ಲೋಹದ ತುಂಡನ್ನು ಎಸೆಯುವದಿಲ್ಲ. ಪಾಕಪ್ರವೀಣೆಯಾಗಬಯಸುವ ಗೃಹಿಣಿ, ಟಿವಿಯಲ್ಲಿ ಬರುವ ಸವಿರುಚಿ ಕಾರ್ಯಕ್ರಮವನ್ನು ನೋಡಿ ಈ ಕಿವಿಯಿಂದ ಕೇಳಿ, ಆ ಕಿವಿಯಿಂದ ಹೊರಹೋಗಲು ಬಿಡುವದಿಲ್ಲ, ಅದನ್ನು ಆಗಿಂದಾಗ ಟಿಪ್ಪಣಿ ಮಾಡಿಕೊಂಡು ಬರೆದಿಡುತ್ತಾಳೆ, ಬೇಕೆನಿಸಿದಾಗ ಹೊಸ ರುಚಿ ಮಾಡಿ ಮೆಚ್ಚುಗೆ ಗಳಿಸುತ್ತಾಳೆ. ಹಾಗೆಯೇ, ಬರಹ ಓದುಗರ ಮೆಚ್ಚುಗೆ ಗಳಿಸಬೇಕಾದರೆ, ವಿಚಾರಗಳು ಉದಯಿಸಿದಾಗ ಹಿಡಿದಿಟ್ಟುಕೊಳ್ಳುವದು ಒಳ್ಳೆಯ ಲೇಖಕರ ಲಕ್ಷಣ.

ನಾವು ಬರೆಯುವ ಬರಹ, ನಮ್ಮ ಮನಸ್ಸಿನಲ್ಲಿನ ಅನಿಸಿಕೆಗಳನ್ನು, ಭಾವನೆಗಳನ್ನು, ವಿಚಾರಗಳನ್ನು ಹಾಗೂ ವಿಷಯಗಳನ್ನು ಬೇರೆಯವರ ಮನಸ್ಸಿಗೆ ಕೊಂಡೊಯ್ಯುವ ಕ್ರಿಯೆ. ಆದ್ದರಿಂದ ನಮ್ಮ ಬರಹ ನಿಷ್ಪಕ್ಷವಾಗಿರಬೇಕು, ನಿಖರವಾಗಿರಬೇಕು, ಸಂದರ್ಭಕ್ಕನುಸಾರವಾಗಿ ವಿವರಣೆ ಇರಬೇಕು, ಅರ್ಥಪೂರ್ಣವಾಗಿರಬೇಕು. ಆದಿಯಿಂದ ಅಂತ್ಯದವರೆಗೆ ಏಕರೂಪತೆ, ಲಯ, ಮತ್ತು ಓಘ ಇರಬೇಕು. ನಾವು ಬೇರೆಯವರೊಂದಿಗೆ ಮುಖಾಮುಖಿ ಮಾತನಾಡುವಾಗ, ನಮ್ಮ, ಅವರ ವ್ಯಕ್ತಿತ್ವ, ಸಂಬಂಧ, ವಯಸ್ಸು, ಸಂದರ್ಭಕ್ಕನುಗುಣವಾಗಿ ನಮ್ಮ ಭಾವನೆಗಳನ್ನು, ಮಾತಿನ ಏರಿಳಿತಗಳಿಂದ ವ್ಯಕ್ತಪಡಿಸಲು ಅವಕಾಶಗಳಿರುತ್ತವೆ. ಆದರೆ, ಬರಹದ ಮೂಲಕ ನಮ್ಮ ಅನಿಸಿಕೆಗಳನ್ನು ಹಾಗೂ ವಿಚಾರಗಳನ್ನು ವ್ಯಕ್ತಪಡಿಸುವಾಗ, ಓದುಗರ ಪ್ರತಿಕ್ರಿಯೆಗಳು ನಮಗೆ ಮುಖತಃ ಕಾಣದಿದ್ದರೂ, ನಮ್ಮ ಬರಹವನ್ನು ಓದುಗರು ಓದುವಾಗ ಪರೋಕ್ಷವಾಗಿ ಅವರಿಗರಿವಿಲ್ಲದಂತೆ ವ್ಯಕ್ತವಾಗುವಷ್ಟು ನಮ್ಮ ಬರಹ ಶಕ್ತಿಯುತವಾಗಿರಬೇಕು.

ಹೂರಣವು ಹೋಳಿಗೆಯಲ್ಲಿ, ಕರಿಗಡಬಿನಲ್ಲಿ ಮತ್ತು ಕುಚಗಡಬಿನಲ್ಲಿ ಒಳಗಿರುವಂಥಾದ್ದು. ಹೊರಗೆ ಕಾಣುವದು ಕಣಕ ಮಾತ್ರ. ಹೋಳಿಗೆಯ ಮತ್ತು ಕಡಬಿನ ರುಚಿ ಅಡಗಿರುವದು ಅಂತರಂಗದಲ್ಲಿರುವ ಹೂರಣದಲ್ಲಿ. ಹೂರಣ ಹದವಾಗಿರಬೇಕು, ಶುಚಿರುಚಿಯಾಗಿರಬೇಕು ಮತ್ತು ಕಂಪು ಸೂಸುತ್ತಿರಬೇಕು. ಆತ್ಮವಿಶ್ವಾಸವೆಂಬ ಕಡಲೆಬೇಳೆಯನ್ನು, ಪ್ರಯತ್ನವೆಂಬ ನೀರಲ್ಲಿ ಹಾಕಿ, ಅದಕ್ಕೆ ತಕ್ಕಷ್ಟು ಸಿಹಿ ಬೆಲ್ಲ ಸೇರಿಸಿ, ಕತಕತನೆ ಹದವರಿತು



ಕುದಿಸಿ, ಏಲಕ್ಕಿ, ಲವಂಗದ ಮತ್ತು ಪ್ರೀತಿಯ ಕಂಪನ್ನು ಬೆರಸಿ, ವರಳಲ್ಲಿ ಉರುಳುಗುಂಡಿಯನ್ನುಪಯೋಗಿಸಿ ರುಬ್ಬಿದಾಗ, ಹದವಾದ ಹೂರಣ ತಯಾರಾಗುವದು. ಜೋಕೆ!! ಹೂರಣ ಹದವಾಗಿರದಿದ್ದರೆ, ಕಣಕದಲ್ಲಿ ತುಂಬಿ ಲಟ್ಟಣಿಗೆಯಿಂದ ಲಟ್ಟಿಸುವಾಗಲೇ, ಎಣ್ಣೆಯಲ್ಲಿ ಕರಿಗಡಬನ್ನು ಕರಿಯುವಾಗಲೇ, ಉಗಿಯಲ್ಲಿ ಕುಚಗಡಬನ್ನು ಬೇಯಿಸುವಾಗಲೇ ಹೂರಣ ಹೊರಬೀಳುವದು. ಅಂತರಂಗದ ವೈಚಾರಿಕತೆಯ ಓರಣವಿಲ್ಲದೇ ಅವಸರದಲ್ಲಿ ಬರೆದ ಬರಹ, ಲೇಖಕನ ಹೂರಣವನ್ನು ಹೊರಗೆಡುವುತ್ತದೆ. ಲೇಖನ ಬರೆಯುವಾಗ ಮನದಲ್ಲಿಯ ಶಬ್ದಗಳು ಹಾಳೆಯ ಮೇಲೆ ಬಂದೆರಗಲು ಪೈಪೋಟಿ ನಡೆಸುತ್ತವೆ. ಅವಸರ ಪಟ್ಟರೆ ಶಬ್ದಗಳು ಖಂಡಿತ ನಮ್ಮನ್ನು ಸೋಲಿಸುತ್ತವೆ. ಶಬ್ದವು ಬ್ರಹ್ಮನ ಬ್ರಹ್ಮ ಎಂದು ಹೇಳುವುದುಂಟು. ಸೃಷ್ಟಿಕರ್ತನಾದ ಬ್ರಹ್ಮನಿಗಿಂತ ಒಂದು ಶಬ್ದ ಹೆಚ್ಚು ಶಕ್ತಿಯನ್ನು ಹೊಂದಿರುತ್ತದೆ. ನಮ್ಮ ಮೇಲಿನ ಶಬ್ದಗಳ ಗೆಲುವು ಬರಹದ ಶಕ್ತಿಯನ್ನು ಕಡಿಮೆ ಮಾಡಲು ಸಾಧ್ಯ. ಉತ್ತಮ ಲೇಖಕರಿಗೆ ಅವಸರ ಸಲ್ಲದು. ಅವಸರದಲ್ಲಿ ಕೈಗೊಂಡ ತಪ್ಪು ನಿರ್ಣಯಗಳು ಬದುಕನ್ನು ನಿರರ್ಥಕಗೊಳಿಸಬಹುದು, ಅವಸರದಲ್ಲಿ ಬರೆದ ಬರಹ ನಿರರ್ಥಕ ಬರಹವಾಗಬಹುದು.

ಜೀವನದಲ್ಲಿ ಸುಖ ಅನುಭವಿಸಲು, ಯಶಸ್ಸಿನ ಉತ್ತುಂಗಕ್ಕೇರಲು ಮತ್ತು ಸಾರ್ಥಕ ಬರಹ ಬರೆಯಲು ಬಹಿರಂಗ ಜ್ಞಾನಾರ್ಜನೆಯ ಜೊತೆಗೆ ಅಂತರಂಗದ ವಿಚಾರಗಳ ಓರಣ ಬಹಳ ಅಗತ್ಯವಾದುದು. ನಮ್ಮ ಸುತ್ತಲೂ ಘಟಿಸುವ ಕ್ರಿಯೆಗಳನ್ನು ಮತ್ತು ಪ್ರಕ್ರಿಯೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ನಿಸರ್ಗವನ್ನು ನಿರೀಕ್ಷಿಸಬೇಕು ಮತ್ತು ಪ್ರೀತಿಸಬೇಕು. ಅಂತರಂಗದಲ್ಲಿ ಉದಯಿಸಿದ ವಿಚಾರಗಳನ್ನು ಆಗಿಂದಾಗ ಬರೆದಿಡಬೇಕು. ಒಟ್ಟಾರೆ, ಸಂಗ್ರಹಿಸಿದ ಮಾಹಿತಿಯನ್ನು ಉಪಯೋಗಿಸಿ, ಮನದಲ್ಲಿ ಇರುವ ವಿಚಾರಗಳನ್ನು ಓರಣಗೊಳಿಸಿ ಬರೆದ ಬರಹ ಸಾರ್ಥಕ ಬರಹವಾಗಬಹುದು. ಅದು ಅಜರಾಮರ ಬರಹವೂ ಯಾಕಾಗಬಾರದು?

**ಪ್ರೊ॥ ಆರ್. ಪಿ. ಪುನಗಿನ**
ಪ್ರಾಧ್ಯಾಪಕರು, ನಂ. ೯೮೩, 'ಸರಸ್ವತಿ', ಮಹಾವೀರನಗರ
ಬೆಳಗಾವಿ - ೫೯೦ ೦೧೬

ಒಂದಿಷ್ಟು ಅರ್ಥಶಾಸ್ತ್ರ:

# ಉಳಿತಾಯ. ಹೂಡಿಕೆ. ಉತ್ಪಾದನೆ. ಉದ್ಯೋಗಗಳ ಸಂಬಂಧ ಕಳಚಿಕೊಳ್ಳುತ್ತಿದೆ



ಈಗಾಗಲೆ ಕಳೆದ ನಾಲ್ಕು ಸಂಚಿಕೆಗಳಿಂದಲೂ 'ಒಂದಿಷ್ಟು ಅರ್ಥಶಾಸ್ತ್ರ' ಶೀರ್ಷಿಕೆಯಲ್ಲಿ ಈ ಶಾಸ್ತ್ರದ ಕೆಲವು ಪರಿಕಲ್ಪನೆಗಳನ್ನು ಕನ್ನಡದಲ್ಲಿ ಸಾಧ್ಯವಾದಷ್ಟೂ ತಿಳಿಯಾಗಿ ಹೇಳುವ ಪ್ರಯತ್ನ ಮಾಡಲಾಗಿದೆ. ಓದುಗರಿಗೆ ಮೆಚ್ಚುಗೆಯಾಯ್ತೆ, ಇದನ್ನು ಮುಂದುವರಿಸಬೇಕೆ ಎನ್ನುವ ಬಗ್ಗೆ ಒಂದಿಷ್ಟು ಪ್ರತಿಕ್ರಿಯೆ ಬಂದಿದ್ದರೆ ಚೆನ್ನಿತ್ತು. ಈ ಸಲದ ಲೇಖನ ಪ್ರಕಟಣೆಯಾದ ಮೇಲೆ, ಹಾಗೆ ಯಾವುದೇ ಪ್ರತಿಕ್ರಿಯೆ ಬರದಿದ್ದರೆ, ಈ ಲೇಖನ ಮಾಲೆಯನ್ನು ಮುಂದುವರಿಸುವ ಬಗ್ಗೆ ಲೇಖಕ ಚಿಂತಿಸಬೇಕಾಗುತ್ತದೆ. ಅನೇಕ ಪರಿಕಲ್ಪನೆಗಳನ್ನು ವಿವರಿಸುವಾಗ ಅವು ಪುನರಾವರ್ತಿಸಿದಂತೆ ಅನ್ನಿಸಬಹುದು. ಆದರೆ ಅವು ಬೇರೆಬೇರೆ ಸಂದರ್ಭ ಹಾಗೂ ಸಂಬಂಧಗಳಲ್ಲಿ ಹಾಗೆ ಪುನಃ ಕಾಣುವುದು ಅನಿವಾರ್ಯ. ಈ ಬಾರಿ ಉಳಿತಾಯ, ಹೂಡಿಕೆ, ಉದ್ದಿಮೆ ಮತ್ತು ಉದ್ಯೋಗ ಕುರಿತು ಒಂದಿಷ್ಟು ಚರ್ಚಿಸೋಣ.

ಲಾಭದ ಮೂಲಕ, ಉಳಿತಾಯ ಮೌಲ್ಯವನ್ನು ಉದ್ಯಮಪತಿ ಬಾಚಿಕೊಂಡು, ಅದು ಹೊಸ ಹೂಡಿಕೆ, ಉದ್ಯಮಗಳ ವಿಸ್ತರಣೆ, ಉದ್ಯೋಗ ನಿರ್ಮಾಣ ಮತ್ತು ಆರ್ಥಿಕ ವಿಕಾಸಕ್ಕೆ ಬಳಸಲಾಗುತ್ತೆ ಎಂಬುದನ್ನು ಗಮನಿಸಿದ್ದೇವೆ. ವಾಸ್ತವದಲ್ಲಿ ಇದಿಷ್ಟೆ ಸಾಲದು, ಉದ್ಯೋಗ-ಉದ್ಯಮಗಳು ವಿಕಾಸಕ್ಕೆ ಸಾಮಾಜಿಕವಾಗಿ ಪ್ರತಿಯೊಬ್ಬರೂ ಕೈಲಾದಷ್ಟು ಉಳಿತಾಯ ಮಾಡುವುದು ಅತ್ಯಗತ್ಯ. ವೈಯಕ್ತಿಕ ಜೀವನದಲ್ಲಿ ಉಳಿತಾಯವನ್ನು ಸಾಂಸಾರಿಕ ನೈತಿಕ ಕರ್ತವ್ಯವೆಂಬಂತೆ ಮಾಡಬೇಕೆಂದು ಚಿಕ್ಕಂದಿನಿಂದಲೇ ಶಿಕ್ಷಣದಲ್ಲಿ ಹೇಳಿಕೊಡುತ್ತೇವೆ. ತನ್ನ ವೈಯಕ್ತಿಕ ಬಜೆಟ್ಟಿನಲ್ಲೂ ಮುಂದೊಂದು ದಿನ ಒದಗಬಹುದಾದ ಕಷ್ಟಕಾಲಕ್ಕೆ, ತುರ್ತು ಅಗತ್ಯಕ್ಕೆ, ಮದುವೆಗೆ, ಓದಿಗೆ, ಬೆಲೆಬಾಳುವ ಸರಕು ಕೊಳ್ಳಲು, ಮನೆಕಟ್ಟಲು, ಕಾಯಿಲೆ ಬಿದ್ದರೆ ಆಸ್ಪತ್ರೆ ಚಿಕಿತ್ಸೆಗೆ – ಹೀಗೆ ಅನಿರೀಕ್ಷಿತವಾಗಿ ಬಂದೊದಗುವ ವೆಚ್ಚಗಳನ್ನು ಭರಿಸಲು ವ್ಯಕ್ತಿ ಯಾವಾಗಲೂ ಸಿದ್ಧನಾಗಿರಬೇಕು. ಅದನ್ನು ಹಿಂದಿನ ಕಾಲದಲ್ಲಿ ಮಾಡಿದಂತೆ ಗೋಲಕದಲ್ಲಿಟ್ಟರೆ ಪ್ರಯೋಜನವಿಲ್ಲ. ನೋಟಿನ ರೂಪದ ಹಣದ ಬೆಲೆಯಲ್ಲಿ ಏರುಪೇರು ಅನುಭವಿಸಿ ಹಾಳಾಗಬಹುದು. ಚಿನ್ನ ಮತ್ತು ಭೂಮಿಯ ಮೇಲೆ ಹೂಡಿ, ಬೇಕಾದಾಗ ಅದನ್ನು ಮಾರಿಕೊಳ್ಳಬಹುದು. ಆದರೆ ಅದು ಹೂಡಿಕೆಯ ಬಂಡವಾಳವಾಗಿ ಪರಿವರ್ತಿತವಾಗುವುದಿಲ್ಲ. ಭಾರತದಲ್ಲಿ ಚಿನ್ನ ಅನಾದಿಕಾಲದಿಂದ ವ್ಯರ್ಥವಾಗಿ ಹುತ್ತದೊಳಗಿನ ಗಂಟಿನಂತೆ ಸರ್ಪಗಾವಲಿನಲ್ಲಿ ಉಳಿತಾಯಗೊಳ್ಳುತ್ತ ಬಂದಿದೆ. ಈಗ ಬ್ಯಾಂಕಿನಲ್ಲಿ, ಅಂಚೆ ಕಛೇರಿಯ ಠೇವಣಿಯಲ್ಲಿ, ಯುಟಿಐ ಮುಂತಾದವುಗಳಲ್ಲಿ ಠೇವಣಿ ಇಡುವಂತಹ ಹಲವಾರು ಮಾರ್ಗಗಳಿವೆ. ಜೀವ ವಿಮೆಯೂ ಇಂಥದೇ ಸ್ವರೂಪದ್ದು. ಹೀಗೆ ನಿಕ್ಷೇಪ ಇಟ್ಟಾಗ, ಅವಕ್ಕೆ ಬಡ್ಡಿ ರೂಪದ ಏರಿದ ಬೆಲೆಯ ರೂಪದ ಬೆಳವಣಿಗೆಯಾಗಿ ಇಡುಗಂಟಾಗುತ್ತದೆ. ಉಳಿತಾಯ ಹೊಟ್ಟೆಬಟ್ಟೆ ಕಟ್ಟಿ, ಮುಂದಿನ ಅಗತ್ಯಕ್ಕೆ ಉಳಿಸುವುದು ಅನ್ನುವುದನ್ನು ಇಂದಿನ ಉಪಭೋಗವನ್ನು ಮುಂದೂಡುವುದು – ಪೋಸ್ಟ್‌ಪೋನಿಂಗ್ ಕರೆಂಟ್ ಕನ್ಸಮ್ಪ್‌ಷನ್ ಅಂತ ಹೇಳುವುದು. ಅದು ಒಂದು ತ್ಯಾಗ. ಅದಕ್ಕೆ ತಕ್ಕ ಬಡ್ಡಿ ಕೊಟ್ಟು ರಕ್ಷಿಸಬೇಕು. ಇಂಥ ಉಳಿತಾಯಗಳು ಹಾಳಾಗುವುದಿಲ್ಲವೆಂಬ ಭರವಸೆಯನ್ನು ಪ್ರಭುತ್ವ ಅಥವಾ ಸರ್ಕಾರ ಹಲವಾರು ರೀತಿಯಲ್ಲಿ ಆಶ್ವಾಸನೆ ನೀಡುತ್ತಿರಬೇಕು ಕಾಲಕಾಲಕ್ಕೆ. ಒಂದು ರಾಷ್ಟ್ರಾದಾಯದ ಶೇಕಡ ೨೦ಕ್ಕೂ ಮೀರಿ ಉಳಿತಾಯವಾದರೆ ಅದರ ಆರ್ಥಿಕತೆ ಉತ್ತಮವಾಗಿದೆ ಎಂದು ಹೇಳಬಹುದು. ಯೋಜನಾಬದ್ಧ ಆರ್ಥಿಕ ನೀತಿಯ ಕಾಲದಲ್ಲಿ – ಈಗ ಹೆಸರಿಗೆ ಯೋಜನೆಯಿದ್ದು – ಅದು ತಮ್ಮ ಅಸಲು ಸ್ವರೂಪ ಕಳೆದುಕೊಂಡಿದೆ. ಸರ್ಕಾರ ಸಕ್ರಿಯವಾಗಿ ಹಲವಾರು ಪ್ರಚಾರ, ಆಸೆ ಆಮಿಷ ಆಶ್ವಾಸನೆಗಳನ್ನು ನೀಡಿ, ಕೌಟುಂಬಿಕ ಮಟ್ಟದಲ್ಲಿ, ವೈಯಕ್ತಿಕ ಮಟ್ಟದಲ್ಲಿ ಉಳಿತಾಯವನ್ನು ಪ್ರೋತ್ಸಾಹಿಸುತ್ತಿತ್ತು. ಆದಾಯ ತೆರಿಗೆಯಲ್ಲಿ, ನೀಡುವ ವಿನಾಯ್ತಿಯೂ ಅಂಥ ಒಂದು ಪ್ರೋತ್ಸಾಹ. 'ಕೃಷ್ಣಾ ಜಲನಿಧಿ ಭಾಗ್ಯ' ಎಂಬ ಉಳಿತಾಯ ಯೋಜನೆ ೧೯೮೬-೯೬ರ ಅವಧಿಯಲ್ಲಿ ರೂ. ೫,೦೦೦ಕ್ಕೆ ೨೮,೦೦೦ರೂ.ಗಳನ್ನು ಕೊಟ್ಟಿದ್ದು ನೆನಪಿದೆಯೇ ? ಈಗ ಇಪ್ಪತ್ತು ವರ್ಷಕ್ಕೂ ಅಷ್ಟು ದೊರಕುವುದಿಲ್ಲ.

ಚಿನ್ನದ ರೂಪದ ಉಳಿತಾಯದ ಬಗ್ಗೆ ಒಂದು ಮಾತು. ಇದು ರಿಸರ್ವ್ ಬ್ಯಾಂಕಿಗೂ ಇನ್ನು ಆಪತ್ಕಾಲದ ಇಡುಗಂಟಾಗಿಯೇ ಉಳಿದಿದೆ. ಈಗ ಇದರ ವ್ಯಾಪಾರವೇ ಒಂದು ಸರಕಾಗಿ ವಿಪರೀತ ಹೆಚ್ಚಿದೆ. ಬ್ಯಾಂಕುಗಳೂ ಗುಣಮಟ್ಟದ ಆಶ್ವಾಸನೆ ನೀಡಿ ಚಿನ್ನವನ್ನು ಮಾರುತ್ತವೆ. ಪರದೇಶದಿಂದ ಬರುವ ವ್ಯಕ್ತಿಯೊಬ್ಬ ಸ್ವಂತಕ್ಕೆ ಎಂದು ಹೇಳಿ ಐದು ಕೆ.ಜಿ.ವರೆಗೂ ಪಾರದರ್ಶಕ ಚಿನ್ನವನ್ನು ದೇಶದೊಳಕ್ಕೆ ತರಬಹುದು. ಚಿನ್ನದ ಆಭರಣಗಳು ಮುಖ್ಯ ರಫ್ತು ಸರಕಾಗಿರುವುದೂ ಒಂದು ಬೆಳವಣಿಗೆ. ಕಾಳಸಂತೆಯ ಚಿನ್ನವನ್ನು ತಡೆಯಲು ಇದು ಒಂದು ಕ್ರಮ ಎಂದು ಹೇಳಲಾಗಿದೆ. ದೇಶದ ಹೊರಕ್ಕೆ ಸಾಗಿಸಿದ ಕಳ್ಳಹಣ ಹಿಂದಿರುಗಿ ಸಂಪನ್ನ ಹಣವಾಗಿಸಿಕೊಳ್ಳಲು ಅಂಥ ಹಣ ಉಳ್ಳವರಿಗೆ ಅನುಕೂಲವಾಗಿರುವಂತಿದೆ. ಮಾರುಕಟ್ಟೆಯ ಏರುಪೇರು ವಿಪರೀತ ಅನೂಹ್ಯವಾದಾಗ, ವಿಶ್ವಾಸಾರ್ಹ ಹೂಡಿಕೆ ಉಳಿತಾಯ ಅವಕಾಶಗಳನ್ನು ಸರ್ಕಾರ ಕಲ್ಪಿಸದೆ ಹೋದಾಗ, ಈ ರೀತಿ ಚಿನ್ನದ ಬೆಲೆ ಗಗನಕ್ಕೇರಿ, ಉಳಿತಾಯ ಅಲ್ಲಿಗೆ ಹರಿಯುವುದು ಒಂದು ಬೆಳವಣಿಗೆ. ಅನಿಶ್ಚಯ ಮಾರುಕಟ್ಟೆಗೆ ಜನ ಹೋಗಲು ಬಯಸದೆ, ಪಾರದರ್ಶಕ, ವಿಶ್ವಾಸಾರ್ಹ ಹೂಡಿಕೆಯ ಮಾರ್ಗ, ಉಳಿತಾಯ ಮಾರ್ಗ ಇಲ್ಲದಾಗ, ಸಾಮಾನ್ಯ ಜನರ ಉಳಿತಾಯ ಅನುತ್ಪಾದಕವೆನಿಸುವ ಚಿನ್ನ ರಿಯಲ್ ಎಸ್ಟೇಟ್ ಧಂಧೆಯ ಕಡೆ ನುಗ್ಗುತ್ತದೆ.

**ಕೆ. ಎಸ್. ಪಾರ್ಥಸಾರಥಿ**

ಆದರೆ ಆಗ ಸಾಲದ ಬಡ್ಡಿಯೂ ವಿಪರೀತವಿತ್ತು. ಹೂಡಿಕೆ ಕಷ್ಟವಾಗಿತ್ತು. ಇದು ಬೇರೆಯೇ ಚರ್ಚೆ. ಉಳಿತಾಯದ ಮಾರುಕಟ್ಟೆಯ ಮೌಲ್ಯ ರೂಪಾಯಿಯ ಅಪಮೌಲ್ಯವಾದಾಗ ಬೆಲೆ ಕಳೆದುಕೊಳ್ಳುತ್ತದೆ. ಕೊನೆಯ ಪಕ್ಷ ಹಾಗೆ ಹಣದುಬ್ಬರದಿಂದ ಆಗುವ ಅಪಮೌಲ್ಯದಿಂದಾಗುವ ನಷ್ಟದಷ್ಟಾದರೂ ಬಡ್ಡಿದರ ಇಲ್ಲದಿದ್ದರೆ ಉಳಿತಾಯ ಹಾಳಾಗುತ್ತದೆ. ಈಗಿರುವ ಪರಿಸ್ಥಿತಿ ಅಂಥದು. ಹಣದುಬ್ಬರ, ಬೆಲೆ ಏರಿಕೆ ವಾರ್ಷಿಕ ಶೇಕಡ ೫-೧೨ರಲ್ಲಿದ್ದು, ಬಡ್ಡಿಯ ದರ ಶೇಕಡ ೬-೭ರಷ್ಟೂ ಸಿಗದೆ, ನಮ್ಮ ಹಣ ಬೆಲೆ ಕಳೆದುಕೊಳ್ಳುತ್ತಿದೆ. ಆಗ ಉಳಿತಾಯ ಮಾಡುವ ಬದಲು ಬೆಲೆ ಬಾಳುವ ಸರಕನ್ನು ಕೊಂಡುಬಿಡಬಾರದೇ ಅಂದರೆ ಅವುಗಳನ್ನು ಹೀಗೇ ಎಂದು ಹೇಳುವ ಹಾಗಿಲ್ಲ. ಹತಾಶರಾಗಿ ಈಗಲೇ ಇಂದೇ ಉಪಭೋಗಮಾಡಿಬಿಡಬೇಕು ('ಕರೆಂಟ್ ಕನ್ಸಮ್‌ಷನ್') ಎಂದು ಎನಿಸುತ್ತಲ್ಲವೇ ? ಏಕೆ ಹೀಗೆ ? ಸರ್ಕಾರಕ್ಕೆ, ಉದ್ದಿಮೆಗೆ ಉಳಿತಾಯದ ಅಗತ್ಯವಿಲ್ಲವೆ ? ಅಷ್ಟೇಕೆ, ಉದ್ಯಮಪತಿಗಳು ಇಂದೇ ಉಪಭೋಗವನ್ನು ಸ್ವಾಗತಿಸಲು ಪ್ರಾರಂಭಿಸಿದ್ದಾರೆ. ಆಗ ಅವರ ಸರಕಿನ ಮಾರಾಟ ಹೆಚ್ಚಿ, ಹೆಚ್ಚು ಲಾಭ ದೊರಕುವುದು ಅವರಿಗೆ ಸಮಾಧಾನದ ಸಂಗತಿ. ನಮ್ಮ ಉಳಿತಾಯವನ್ನು ಕೊಂಡು, ಉದ್ದಿಮೆಯಲ್ಲಿ ಹೂಡಿ, ನಮಗೆ ಉತ್ತಮ ಬಡ್ಡಿ ಕೊಡುವಷ್ಟು ಸಂಪಾದಿಸಲು ಆಗುತ್ತಿಲ್ಲವೆ ? ವಾಸ್ತವದಲ್ಲಿ ಹಾಗೇನೂ ಕಾಣುತ್ತಿಲ್ಲ. ವಾರ್ಷಿಕ ೭-೯ರ ಬೆಳವಣಿಗೆಯ ದರದ ಈ ಆರ್ಥಿಕ ವ್ಯವಸ್ಥೆಯಲ್ಲಿ ಲಾಭಕ್ಕೇನೂ ಕೊರತೆಯಿಲ್ಲ. ಅವರಿಗೆ ನಮ್ಮ ಹಣ ಬೇಕು. ಆದರೆ ಅದು ಉಪಭೋಗದ ಮೂಲಕ ಬರಬೇಕು. ಆದರೆ ಕುಟುಂಬಗಳು ಫ್ಯೂಚರ್ ಕನ್ಸಮ್‌ಷನ್‌ಗಾಗಿ, ಭವಿಷ್ಯದ ಉಪಭೋಗದ ಅಗತ್ಯಗಳಿಗಾಗಿ ಸಂಗ್ರಹಿಸಿ, ಉಳಿತಾಯ ಮಾಡಿಕೊಳ್ಳುವ ಅನಿವಾರ್ಯತೆ ಇದ್ದು, ವಿಧಿಯಿಲ್ಲದೆ ತೀರ ಕಡಿಮೆ ಬಡ್ಡಿ ದರದ ಠೇವಣಿಗಳ ಮೊರೆಹೋಗಬೇಕಾಗುತ್ತದೆ. ಹಣದ ಮೌಲ್ಯದ ಅನಿಶ್ಚಿತತೆಯಿಂದಾಗಿ ಸರ್ಕಾರದ ಆಶ್ವಾಸನೆಯಿರುವ ಠೇವಣಿಗಳ ಕಡೆಗೇ ಹೆಚ್ಚು ವಾಲುತ್ತಾರೆ. ಸರ್ಕಾರವೇ ಹಲವಾರು ಲಾಭಕರ ಅಗತ್ಯಗಳಿಗಾಗಿ ಈ ಹಣವನ್ನು ಬಳಸಿಕೊಳ್ಳುತ್ತದೆ. ಈ ಉಳಿತಾಯವು ಸರ್ಕಾರದ ಅಗತ್ಯಕ್ಕಿಂತ ತೀರ ಕಡಿಮೆಯಾಗುತ್ತ, ಅದು ಮಾರುಕಟ್ಟೆಯಿಂದ ನೇರ ಸಾಲ ಪಡೆಯಲು ಮುಂದಾಗುತ್ತದೆ. ಸರ್ಕಾರದ ಸಾಲ ದೇಶದ ಒಟ್ಟು ಆದಾಯದ - (ಜಿಡಿಪಿಯ ಮೊತ್ತದ) ಶೇಕಡ ೭೦-೮೦ ಆಗಿಬಿಟ್ಟರೆ, ಅದು ಸರ್ಕಾರದ ಬೊಕ್ಕಸ ದಿವಾಳಿಯಾಗುತ್ತಿರುವುದನ್ನು ಸೂಚಿಸುತ್ತದೆ. ಆಗ ಸರ್ಕಾರ ಸಾಮಾಜಿಕ ಕ್ಷೇತ್ರದ ಅಗತ್ಯದ, ಹೊಣೆಗಾರಿಕೆಯ ವೆಚ್ಚಗಳನ್ನು ಕಡಿತ ಮಾಡಲು ಮುಂದಾಗುತ್ತದೆ. ಇವೆಲ್ಲದರಿಂದ ಆಗುವ ಪರಿಣಾಮ ಸಮಾಜದ ದುರ್ಬಲರ ಮೇಲೆಯೇ. ಹೀಗೆ ಮಾಡದೆ ಉಳ್ಳವರ ಮೇಲೆ ಹೆಚ್ಚು ತೆರಿಗೆ ವಿಧಿಸಿ, ಹಣ ಸಂಗ್ರಹಿಸಿ, ಸಾಮಾಜಿಕ ಹೊಣೆಗಾರಿಕೆಯನ್ನು ನಿಭಾಯಿಸಬಹುದು. ಆದರೆ ನಮಗೆ ಅಂಥ ಆದ್ಯತೆ ಅರಿತ, ಜವಾಬ್ದಾರಿಯುತ ಸರ್ಕಾರ ಬೇಕಲ್ಲ! ಈಗಂತೂ ಸರ್ಕಾರ ಪ್ರತಿ ವರ್ಷವೂ ಹಿಂದಿನ ವರ್ಷದ ಸಾಲ ತೀರಿಕೆಗೆ ಹೊಸ ಸಾಲ ತೆಗೆಯುವುದು ಪರಿಪಾಟಲಾಗಿಬಿಟ್ಟಿದೆ. ಸರ್ಕಾರ ದಿವಾಳಿಯಾಗೊಲ್ಲ, ಅದು ಸಾರ್ವಭೌಮ ಎಂಬ ಭಾವನೆ ಅನೇಕರಿಗಿದೆ. ಆದರೆ ಇಂದು ಜಗತ್ತಿನಾದ್ಯಂತ ಎಲ್ಲ ಸರ್ಕಾರಗಳೂ ಖರ್ಚುವೆಚ್ಚ ತೂಗಿಸಲಾಗದೆ ತತ್ತರಿಸುತ್ತಿವೆ. ಇಂಥ ಸರ್ಕಾರ ಉಳಿತಾಯ ಮಾಡುವವರಿಗೆ ನೀಡುತ್ತಿರುವ ಬಂಡವಾಳ ವ್ಯವಸ್ಥೆಯ ಹೊಸ ಆರ್ಥಿಕ ಉಪದೇಶ ಏನು ? ನಿಮ್ಮ ಹೆಚ್ಚುವರಿ ಹಣವನ್ನು ಷೇರುಪೇಟೆಗೆ ತನ್ನಿ, ಅಲ್ಲಿ ಪರಬಾರೆ ಮಾಡಿ, ಆದದ್ದನ್ನು ಅನುಭವಿಸಿ ಎನ್ನುತ್ತಿದೆ ಸರ್ಕಾರ. ಸರ್ಕಾರಿ ನೌಕರರ ಮೇಲೆ ಈ ನೀತಿಯನ್ನು ಬಲವಂತವಾಗಿ ಹೇರಿ ಪಿಂಚಣಿದಾರರಿಗೆ ಆತಂಕ ಉಂಟುಮಾಡಿದೆ. ಈಗ ನಮ್ಮ ದೇಶದಲ್ಲಿ ತೀರ ಕಡಿಮೆ ಜನ ಷೇರುಪೇಟೆಗೆ



ಹೋಗುತ್ತಾರಂತೆ. ಅಮೆರಿಕಾವನ್ನು ನೋಡಿ, ಅಲ್ಲಿ ಸರ್ಕಾರದ ಉಳಿತಾಯ ಯೋಜನೆಗಳೇ ಇಲ್ಲ, ಎಲ್ಲವೂ ಷೇರುಪೇಟೆಗೆ ಹೋಗುತ್ತದೆ ಅನ್ನುತ್ತಾರೆ. ಬಂಡವಾಳದ ನೀತಿಯ ದೃಷ್ಟಿಯಲ್ಲಿ ನಮ್ಮ ಬಹುತೇಕ ಕುಟುಂಬಗಳು ಬೌದ್ಧಿಕವಾಗಿ ಬಹಳ ಹಿಂದುಳಿದಿವೆ ಎಂದಂತಾಯ್ತು, ಅಮೆರಿಕಾದವರಿಗೆ ಹೋಲಿಸಿದರೆ! ಈ ದೇಶದ ಬಹುತೇಕ ಜನರು ಆರ್ಥಿಕವಾಗಿ ಹಿಂದುಳಿದವರು ಎನ್ನುವುದು ಕಟುಸತ್ಯ. ಹಾಗೂ ಅಮೆರಿಕಾದ ಸಾಮಾನ್ಯ ಜನರು ಅಸಹಾಯಕರಾಗಿ ಷೇರುಪೇಟೆಯಲ್ಲಿದ್ದಾರೆ, ಪ್ರಜ್ಞಾಪೂರ್ವಕ ತೀರ್ಮಾನದಿಂದಲ್ಲ ಎಂದು ತಿಳಿದರೆ ಸಾಕು. ಕ್ಲಾಸಿಕಲ್, ಅಂದರೆ ಸಾಂಪ್ರದಾಯಿಕ ಬಂಡವಾಳಶಾಹಿ ಅರ್ಥಶಾಸ್ತ್ರದ ಉಳಿತಾಯ ಮತ್ತು ಅದಕ್ಕೆ ಅಂಟಿಕೊಂಡ ಪರಿಕಲ್ಪನೆಗಳು ನವ ಬಂಡವಾಳಷಾಹಿ ವ್ಯವಸ್ಥೆಯಲ್ಲಿ ಸವಕಲಾಗಿವೆ. ಇದರಿಂದಾಗಿ ಜನಸಾಮಾನ್ಯರ ಮೇಲೆ ಆಗುವ ವೈಯಕ್ತಿಕ ಮಟ್ಟದ ನೋವು, ಹಿಂಸೆಗೆ ಈ ವ್ಯವಸ್ಥೆ ಸಂವೇದಿಸುವುದಿಲ್ಲ. ಅದು ಅದರ ಸ್ವಭಾವ.

ಉದ್ಯಮಗಳಿಗೆ ಸತತ ಬಂಡವಾಳದ ಅಗತ್ಯವಿದೆ. ಅದನ್ನು ಸಮಾಜದ ಉಳಿತಾಯ ಬಹುವಾಗಿ ಪೂರೈಸುತ್ತದೆ. ಬ್ಯಾಂಕುಗಳು ನೀಡುವ ಸಾಲಗಳೂ ಇದೇ ಮೂಲದವು. ಸಾಮಾನ್ಯ ಜನ ಇಂದು ಬ್ಯಾಂಕುಗಳಲ್ಲದೆ ಬೇರೆಡೆ ಠೇವಣಿ ಇಟ್ಟು ತಮ್ಮ ಹಣವನ್ನು ರಕ್ಷಿಸಲಾರರು. ಅಲ್ಲಿ ಅಪಾರವಾದ ಹಣ ಸಂಗ್ರಹವಾಗುತ್ತದೆ. ಬಂಡವಾಳ ವ್ಯವಸ್ಥೆಯ ಚಮತ್ಕಾರವೆಂದರೆ ನೂರಾರು ಠೇವಣಿ ಯೋಜನೆಗಳಿದ್ದರೆ ಅದರ ಹತ್ತಾರು ಪಟ್ಟು ಸಾಲದ ರೂಪದಲ್ಲಿ ಬಂಡವಾಳ ಸೃಷ್ಟಿಯಾಗುತ್ತದೆ. ಹೂಡಿಕೆಗೆ ಸಾಲ ನೀಡುವ ನೀತಿಯನ್ನು ಸರ್ಕಾರ ಅಪಾರವಾಗಿ ಸಡಿಲಗೊಳಿಸಿದೆ. ಹಾಗಾಗಿ ಉದ್ಯಮಪತಿ ಶೇಕಡ ೧೦ರಷ್ಟು ಸ್ವಂತ ಹಣವಿದ್ದರೂ ಸಾಕು. ಶೇಕಡ ೯೦ರಷ್ಟು ಸಾಲ ತೆಗೆಯಬಹುದು ಇಂದು. ಅಲ್ಲದೆ ಷೇರುಪೇಟೆಯಿಂದಲೂ ಯಾವುದೇ ನಿಯಮಗಳಿಗೆ ಒಳಪಡದೆ, ಊಹಾಪೋಹದ ಆಧಾರದ ಮೇಲೆ ಬಂಡವಾಳವನ್ನು ಸಂಗ್ರಹಿಸುವ ಪರಿಪಾಟಲು, ಸಾಧ್ಯತೆ ಉಂಟಾಗಿ, ಸಾಂಪ್ರದಾಯಿಕ ಆರ್ಥಿಕ ನಿಯಮಗಳನ್ನು ಕೈಬಿಟ್ಟಂತಾಗಿದೆ. ಬಡ್ಡಿಯ ದರ, ಉಳಿತಾಯಕ್ಕೆ ನೀಡುವ ಬಡ್ಡಿಯ ದರ, ಸಾಲಕ್ಕೆ ತಗಲುವ ಬಡ್ಡಿಯ ದರ, ಹಣದುಬ್ಬರದ ದರ ಇವುಗಳನ್ನು ಸಮನ್ವಯಿಸುವ ಆರ್ಥಿಕ ನೀತಿಗೆ ಇಂದು ಅವಕಾಶವಿಲ್ಲದ ಪರಿಸ್ಥಿತಿ ಉಂಟಾಗಿದೆ. ಇದು ಸರ್ಕಾರದ ಬಜೆಟ್ ನೀತಿಯ ಅಡಿಗಲ್ಲಾಗಿತ್ತು ಇತ್ತೀಚಿನವರೆಗೆ. ಸಂಪೂರ್ಣ ಖಾಸಗಿ ವ್ಯವಸ್ಥೆಯಾಗಿ, ತನಗೆ ಈ ಹೊರೆ ಇನ್ನಿಲ್ಲ ಎಂದಿದ್ದರು ಅಂದಿನ ವ್ಯವಸ್ಥೆಯ ಹಣಕಾಸು ಮಂತ್ರಿ ಚಿದಂಬರಂ, ಒಮ್ಮೆ! ನೆನಪಿಡಿ, ನಾವು ಚರ್ಚಿಸುತ್ತಿರುವ ಸಾಂಪ್ರದಾಯಿಕ ಬಂಡವಳಿಗ ಅರ್ಥವ್ಯವಸ್ಥೆಯ ಅಂತಸ್ಥ ನೀತಿಯ ಬಗ್ಗೆಯೇ ಸೋಷಲಿಸಂ ಅಲ್ಲ, ಬೂರ್ಷ್ವಾ ಪ್ರಜಾಪ್ರಭುತ್ವದ ಮಿತಿಯಲ್ಲಿಯೇ ಚರ್ಚಿಸುತ್ತಿರುವುದು. ಅಂದರೆ ಉಳಿತಾಯಕ್ಕೆ ಸಂಬಂಧಪಟ್ಟ ಸಾಂಪ್ರದಾಯಿಕ ಬಂಡವಳಿಗ ಅರ್ಥಶಾಸ್ತ್ರಕ್ಕೆ ಈಗ ಪಲ್ಲಟ ಉಂಟಾಗಿದೆ, ವ್ಯತ್ಯಯ ಉಂಟಾಗಿದೆ ಎನ್ನುವುದನ್ನು ಗಮನಿಸಬೇಕು. ಸರಕುಗಳ ಉತ್ಪಾದನೆ ಪ್ರಕ್ರಿಯೆಯೊಡನೆ ಸಂಬಂಧವನ್ನೇ ಕಡಿದುಕೊಂಡ, ಫಿನಾನ್ಷಿಯಲ್ ಮಾರುಕಟ್ಟೆ, ಹಣಕಾಸುಗಳ ಮಾರುಕಟ್ಟೆಯ ಅಧೀನಕ್ಕೆ ಪ್ರಜೆಯ ಸ್ವಂತ ಹಣಕಾಸು ವಹಿವಾಟನ್ನು ಬಿಟ್ಟುಕೊಟ್ಟು, ಉಳಿತಾಯವೆಂಬ ಕಲ್ಪನೆಯೇ ಅರ್ಥ ಕಳೆದುಕೊಂಡಿರುವ ಪರಿಸ್ಥಿತಿ ಉಂಟಾಗಿದೆ. ಹೀಗಾಗಿ ಉಳಿತಾಯ,



ಬಡ್ಡಿ ದರ, ಹೂಡಿಕೆ ಮತ್ತು ಉದ್ಯೋಗ ನಿರ್ಮಾಣದ ಪ್ರಮಾಣಗಳನ್ನು ಸಂಬಂಧಿಸಿದ ಸಾಂಪ್ರದಾಯಿಕ ಸಂಬಂಧಗಳ ಸಮೀಕರಣಕ್ಕೆ ಇಂದು ಏನು ಪ್ರಯೋಜನವಿದೆ, ಎನ್ನುವಂತಾಗಿದೆ. ನಿನ್ನ ಉಳಿತಾಯದ ಹಂಗಿಲ್ಲ ಎಂದು ಹೂಡಿಕೆದಾರ ಹೇಳುವಂತಾದರೆ ಆಗ ಪ್ರಜೆ ಹತಾಶನಾಗದೆ ಬೇರೇನು ಮಾಡಿಯಾನು ? ಪ್ರತಿಯೊಬ್ಬ ಪ್ರಜೆಯೂ ಹೂಡಿಕೆಯ ಪರಿಣತಿ ಪಡೆದು ವರ್ತಿಸಬೇಕಾದರೆ ಆಗ ಈ ಹಿಂದೆ ನಾವು ಚರ್ಚಿಸಿದ ಸಂಪ್ರದಾಯ ಅರ್ಥಶಾಸ್ತ್ರದ ಮೂಲ ಸಮೀಕರಣ ಉದ್ಯಮ = ಭೂಮಿ + ಬಂಡವಾಳ + ಪರಿಶ್ರಮ + ಸಂಘಟನಾ ಪರಿಣತಿ ಎನ್ನುವ ಸಂಬಂಧ ಮುರಿದುಬಿದ್ದಂತಾಯ್ತು. ಉತ್ಪಾದನಾ ಪ್ರಕ್ರಿಯೆಯಲ್ಲಿ ಶ್ರಮಿಕ, ಪ್ರಜೆ ನೇರ ಭಾಗವಹಿಸಲಾರದ ಅಶಕ್ತನಾಗುತ್ತಾನೆ. ಸರ್ಕಾರಕ್ಕೆ ಈ ಹಿಂದಿನ ಹೊಣೆಗಾರಿಕೆಗಳೆಲ್ಲಾ ಕಳಚಿಕೊಳ್ಳುತ್ತವೆ. ಕೇವಲ ಪೊಲೀಸ್, ಮಿಲಿಟರಿ, ಕಾನೂನು ವ್ಯವಸ್ಥೆಗಳ ಕರ್ತವ್ಯ ವಾಗಿಬಿಡುತ್ತದೆ. ಬಂಡವಾಳ ವ್ಯವಸ್ಥೆಯ ಉಚ್ಛ್ರಾಯ ಹಂತದಲ್ಲಿ ಉತ್ಪಾದನೆಯ ಪ್ರಪಂಚ ಅನಾಯಕವಾಗುತ್ತದೆ. ಲಂಗುಲಗಾಮಿಲ್ಲದಾಗುತ್ತದೆ. ಮಿಕ್ಕೆಲ್ಲ ಕ್ಷೇತ್ರವನ್ನು ಅದು ಬಾಧಿಸುತ್ತದೆ. ಎಲ್ಲರಿಗೂ ಅವರವರ ಮಟ್ಟದ ಭವಿಷ್ಯವನ್ನು ಕುರಿತ ಅನಿಶ್ಚಿತತೆ ಬಾಧಿಸುತ್ತದೆ. ರಾಜಿ ಬಡಿಯುತ್ತದೆ. ಪ್ರಭುತ್ವ ನಗಣ್ಯವಾಗುತ್ತದೆ. ಇನ್ನು ಪ್ರಜಾಪ್ರಭುತ್ವದ ಮಾತೇನು ?

ಕೇವಲ ಉಳಿತಾಯದ ಅಂಶವನ್ನು ಮುಂದಿಕ್ಕಿ ಮಾಡಿದ ಈ ಚರ್ಚೆಯನ್ನು, ಉದ್ಯೋಗ, ಬಡ್ಡಿ, ಹಣದುಬ್ಬರದ ದರ, ಬೆಳವಣಿಗೆಯ ದರ, ಹೀಗೆ ಎಲ್ಲಿಂದ ಬೇಕಾದರೂ ಪ್ರಾರಂಭಿಸಬಹುದು. ಬಂಡವಾಳ ವ್ಯವಸ್ಥೆ ಈ ಅನಾಯಕ ವಾಗಿ ಬದಲಾವಣೆಯಾಗುವುದನ್ನು, ಇಲ್ಲಿ ಪರಿಗಣಿಸು ವುದಿಲ್ಲ. ಅದರಿಂದಾಗುವ ಏಳುಬೀಳುಗಳು ಸಹಜ, ಬಹಳ ವೇಳೆ ಅಗತ್ಯವೂ ಕೂಡ. ಕೆಲವರಿಗೆ ತೊಂದರೆ ಯಾದರೂ ಅದು ಅನಿವಾರ್ಯ, ಹೂಡಿಕೆಯ ಮೂಲ ವಸ್ತುಗಳು, ಬಂಡವಾಳ .....ಯಾವಾಗಲೂ ಅಗತ್ಯವೂ ಕೂಡ, ಕಡಿಮೆ ಇದ್ದು, ಅವುಗಳನ್ನು ಯಾವ ಆದ್ಯತೆಯ ಮೇಲೆ ಯಾವ ಕ್ಷೇತ್ರಕ್ಕೆ ದೂಡಬೇಕು ಅಂತ ಮಾರುಕಟ್ಟೆಯ ಏರುಪೇರುಗಳು ನಿರ್ವಹಿಸುತ್ತವೆ, ಅದೇ ಸಮರ್ಥ ನಿರ್ವಹಣೆ ಅನ್ನುತ್ತದೆ. ಆದ್ದರಿಂದ ಇಂದು ೨೦,೦೦೦ಕ್ಕೆ ಏರಿದ ಷೇರುಪೇಟೆ ಸೂಚ್ಯಂಕ ನಾಳೆ ಬೆಳಗ್ಗೆ ೧೫,೦೦೦ಕ್ಕೆ ಇಳಿದರೆ ಅದೂ ಸಹಜವೇ! ಯಾರೋ ಬಹುಮಹಡಿಯಿಂದ ಬಿದ್ದು ಸತ್ತರೆ ಅಯ್ಯೋ ಪಾಪ ಎನ್ನಬಹುದು, ಅಷ್ಟೆ! ಈ ವಾರ ಆಹಾರಧಾನ್ಯ ಸಿಗಲಿಲ್ಲವೆ, ಸ್ವಲ್ಪ ಸಹಿಸಿಕೊಳ್ಳಿ, ಮುಂದಿನ ವಾರ ಸರಿಹೋಗಬಹುದು ಎನ್ನಬಹುದು !

ಯೋಜನಾಬದ್ಧ, ಅಂದರೆ ಕೇವಲ ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ಎಂದುಕೊಳ್ಳಬೇಡಿ, ಸಾಂಪ್ರದಾಯಿಕ ಬಂಡವಾಳ ವ್ಯವಸ್ಥೆಯ ಅರ್ಥಶಾಸ್ತ್ರದ ಚೌಕಟ್ಟಿನಲ್ಲೂ ಆ ವ್ಯವಸ್ಥೆಯ ಅತಿರೇಕಗಳನ್ನು ಅಂಕೆಸಂಕೆಯಲ್ಲಿ ಇಡುವ ಮಾರ್ಗವಾಗಿ ಒಂದಿಷ್ಟು ಯೋಜನಾಬದ್ಧ ಅರ್ಥ ನೀತಿಯು ಬೇಕೆಂದು ಸಿದ್ಧಾಂತವಾಗಿ ಬಹಳ ವರ್ಷಗಳೇ ಆದುವು. ಮಾರ್ಕ್ಸ್‌ವಾದದ ವಾಸ್ತವ ನೆಲೆಯ ಕಟುವಿಮರ್ಶೆಯಿಂದ ತಪ್ಪಿಸಿಕೊಳ್ಳಲು, ಪ್ರಜಾಪ್ರಭುತ್ವವಾದೀ ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರು ಈ ಮಾರ್ಗವನ್ನು ಸಮರ್ಥಿಸಿದ್ದಾರೆ. ಎಲ್ಲವೂ ಸಹಜವಾಗಿದ್ದರೆ ಆಗ ಉಳಿತಾಯ ಹೂಡಿಕೆ ಯಾಗಿ, ಉದ್ಯಮದ ವಿಸ್ತರಣೆಯಾಗಿ, ಉದ್ಯೋಗದ ವಿಸ್ತರಣೆಯಾಗಿ, ಸಮಾಜ ಕಲ್ಯಾಣವನ್ನು ಸಾಧಿಸುವ ಸಂಬಂಧವನ್ನು ಲೆಕ್ಕ ಹಾಕಬಲ್ಲ ಸಮೀಕರಣವಾಗಿಸ ಬಹುದು. ಆದರೆ ಹಿಂದಿನ ಚರ್ಚೆಗಳಲ್ಲಿ ಗಮನಿಸಿದಂತೆ ಯಾವುದೇ ಬಂಡವಾಳ ವ್ಯವಸ್ಥೆಯೂ ಪೈಪೋಟಿಯನ್ನು ಮೀರಿ, ಚಿಕ್ಕ ಮೀನನ್ನು ದೊಡ್ಡ ಮೀನು ನುಂಗುತ್ತಾ, ಏಕಸ್ವಾಮ್ಯಗಳು ಬೆಳೆದು, ಪ್ರಜಾಪ್ರಭುತ್ವ ವಿಫಲ ವಾಗುವುದು ಅದರ ಸಹಜ ಬೆಳವಣಿಗೆ ಹಾಗೂ ಹೆಚ್ಚು ಹೆಚ್ಚು ಲಾಭದ ಬೇಟೆಯಲ್ಲಿ ಈ ಏಕಸ್ವಾಮ್ಯ ಉತ್ಪಾದನೆಯನ್ನೇ ಕಡಿದು, ಬೆಲೆ ಏರಿಸಿಕೊಂಡು, ಲಾಭ ಗಿಟ್ಟಿಸಿಕೊಳ್ಳುತ್ತದೆ. ತತ್ಪರಿಣಾಮವಾದ ನಿರುದ್ಯೋಗ, ಕೊರತೆ ಅದನ್ನು ಬಾಧಿಸುವುದಿಲ್ಲ. ಹೀಗಾಗಿಯೂ ಉತ್ಪಾದನೆ, ಉದ್ಯೋಗ, ಉಳಿತಾಯಗಳ ಸಂಬಂಧ ಮುರಿದುಬೀಳುತ್ತದೆ. ಕುಟುಂಬ ಜೀವಿಗಳ ಸಾಮಾನ್ಯ



ತಿಳಿವಳಿಕೆ. ಸುಭದ್ರ ಜೀವನಕ್ಕೆ ರಕ್ಷಿತ ಉಳಿತಾಯ ಅಗತ್ಯ ಎಂಬುದು. ಬಂಡವಾಳ ವ್ಯವಸ್ಥೆಗೆ ಇದರ ಬಗ್ಗೆ ಕಾಳಜಿ ಇಲ್ಲ. ದೊಡ್ಡ ಮೀನು ಚಿಕ್ಕ ಮೀನುಗಳನ್ನು ನುಂಗುವ ಮರ್‌ಜರ್ ಅಂಡ್ ಅಕ್ವಿಸಿಷನ್, ನಮ್ಮ ದೇಶದ ಈ ವ್ಯವಸ್ಥೆಯಲ್ಲೂ ಕಳೆದ ಕೆಲವು ವರ್ಷಗಳ ಬೆಳವಣಿಗೆ ಆತಂಕಕಾರಿ ಮಟ್ಟಕ್ಕೆ ಹೋಗಿದೆ ಎಂಬುದು ನೆನಪಿದೆಯೆ ? ಕ್ಯಾಪ್ಟನ್ ಗೋಪಿನಾಥ್ ಅವರಿಗೆ ತನ್ನ ಕಂಪನಿಯನ್ನು ಎಷ್ಟೇ ಹಣಕ್ಕೂ ಬಿಟ್ಟುಕೊಡಲು ಇಷ್ಟವಿಲ್ಲ. ಆದರೆ ಮಲ್ಯ ಬಿಡಲಿಲ್ಲ. ತದನಂತರ ಆದದ್ದೇನು ? ದೊಡ್ಡ ವಿಮಾನ ಯಾನ ಕಂಪನಿಗಳು ಕಡಿಮೆ ಟಿಕೆಟ್ ದರದ ಕಂಪನಿಗಳು ಬದುಕಲಾರದಂತೆ ಮಾಡಿದವು. ಈ ಪ್ರವೃತ್ತಿಯನ್ನು ಒಂದಿಷ್ಟು ನಿಯಂತ್ರಿಸಲು ಈಗಷ್ಟೆ ಸರ್ಕಾರ ಒಂದು ಕರಡು ಶಾಸನ ತಯಾರಿಸಿದೆ. ಅಂದರೆ ಇದು ಸತ್ಯಂ ಪ್ರಕರಣವಾದ ಮೇಲೆ, ನಮ್ಮೀ ಇಂದಿನ ವ್ಯವಸ್ಥೆ ಬಂಡವಳಿಗ ವ್ಯವಸ್ಥೆಯ ಕಟುಬಿಕ್ಕಟ್ಟಿನ ಮಜಲನ್ನು ತಲಪುತ್ತಿರುವುದರ ಸೂಚನೆ. ಬಿಕ್ಕಟ್ಟು ತಪ್ಪಿಸಿಕೊಳ್ಳಲು ನಿರಂತರ ಬೆಳವಣಿಗೆಯ ದರ ಏರುತ್ತಲೇ ಇರಬೇಕು ಎನ್ನುವ ಅವಾಸ್ತವ ಬಯಕೆ ವ್ಯಕ್ತವಾಗುತ್ತಿದೆ. ನಿಂತಲ್ಲೇ ನಿಲ್ಲಲು ಇನ್ನೂ, ಇನ್ನೂ ವೇಗವಾಗಿ ಓಡುತ್ತಿರಬೇಕು ಎನ್ನುವ ವಿರೋಧಾಭಾಸ ಪರಿಸ್ಥಿತಿ. ಅರ್ಥಶಾಸ್ತ್ರ ಹೇಳುತ್ತೇನೆಂದು ಪ್ರಭುತ್ವ ಸಮಾಜ ಅಂತೆಲ್ಲಾ ಹೇಳಲಾರಂಭಿಸಿದಿರಿ, ಇದೇನು ಬ್ರೇನ್‌ವಾಷೇ ಅಂತ ಅನ್ನಿಸ್ದರೆ... ಆ ಕಾರಣಕ್ಕೇ ಆಧುನಿಕ ಅರ್ಥಶಾಸ್ತ್ರವನ್ನು ಪೊಲಿಟಿಕಲ್ ಇಕಾನಮಿ, ರಾಜಕೀಯ ಅರ್ಥಶಾಸ್ತ್ರ ಅನ್ನುವುದು ಅಂತ ಮತ್ತೊಮ್ಮೆ ನೆನಪಿಸುವ ಅಗತ್ಯವಿದೆ. ಸಮಾಜವನ್ನು ಬಿಟ್ಟು ಎಲ್ಲೋ ಆಕಾಶದಲ್ಲಿ ಅರ್ಥಶಾಸ್ತ್ರವೇ ಆಗಲಿ, ಯಾವ ಶಾಸ್ತ್ರವೇ ಆಗಲಿ ನಿಲ್ಲಲಾಗದು. ಸಮಾಜಶಾಸ್ತ್ರದ ಕ್ಷೇತ್ರ ಬಹಳ ವಿಶಾಲವಾದುದು. ಅದರಲ್ಲಿ ಅರ್ಥಶಾಸ್ತ್ರವೂ ಒಂದು. ಅದು ಹುಚ್ಚುಕುದುರೆಯಾದರೆ ಮಿಕ್ಕ ಶಾಸ್ತ್ರಗಳ ಪ್ರಕ್ರಿಯೆ ಅದಕ್ಕೆ ಕಡಿವಾಣ ಹಾಕಿ ನಿಯಂತ್ರಣಕ್ಕೆ ತಂದೇ ತರುತ್ತದೆ. ಆ ಶಾಸ್ತ್ರ ಬೇಕು, ಆದರೆ ಅಂಕೆಸಂಕೆಯಲ್ಲಿರಬೇಕು.

ಚಿನ್ನದ ರೂಪದ ಉಳಿತಾಯದ ಬಗ್ಗೆ ಒಂದು ಮಾತು. ಇದು ರಿಸರ್ವ್ ಬ್ಯಾಂಕಿಗೂ ಸಹ ಆಪತ್ಕಾಲದ ಇಡುಗಂಟಾಗಿಯೇ ಉಳಿದಿದೆ. ಈಗ ಇದರ ವ್ಯಾಪಾರವೇ ಒಂದು ಸರಕಾಗಿ ವಿಪರೀತ ಹೆಚ್ಚಿದೆ. ಬ್ಯಾಂಕುಗಳೂ ಗುಣಮಟ್ಟದ ಆಶ್ವಾಸನೆ ನೀಡಿ ಚಿನ್ನವನ್ನು ಮಾರುತ್ತವೆ. ಪರದೇಶದಿಂದ ಬರುವ ವ್ಯಕ್ತಿಯೊಬ್ಬ ಸ್ವಂತಕ್ಕೆ ಎಂದು ಹೇಳಿ ಐದು ಕೆ.ಜಿ.ವರೆಗೂ ಪಾರದರ್ಶಕ ಚಿನ್ನವನ್ನು ದೇಶದೊಳಕ್ಕೆ ತರಬಹುದು. ಚಿನ್ನದ ಆಭರಣಗಳು ಮುಖ್ಯ ರಫ್ತು ಸರಕಾಗಿರುವುದೂ ಒಂದು ಬೆಳವಣಿಗೆ. ಕಾಳಸಂತೆಯ ಚಿನ್ನವನ್ನು ತಡೆಯಲು ಇದು ಒಂದು ಕ್ರಮ ಎಂದು ಹೇಳಲಾಗಿದೆ. ದೇಶದ ಹೊರಕ್ಕೆ ಸಾಗಿಸಿದ ಕಳ್ಳ ಹಣ ಹಿಂದಿರುಗಿ ಸಂಪನ್ನ ಹಣವಾಗಿಸಿಕೊಳ್ಳಲು ಅಂಥ ಹಣ ಉಳ್ಳವರಿಗೆ ಅನುಕೂಲವಾಗಿರುವಂತಿದೆ. ಮಾರುಕಟ್ಟೆಯ ಏರುಪೇರು ವಿಪರೀತ ಅನೂಹ್ಯವಾದಾಗ, ವಿಶ್ವಾಸಾರ್ಹ ಹೂಡಿಕೆ ಉಳಿತಾಯ ಅವಕಾಶಗಳನ್ನು ಸರ್ಕಾರ ಕಲ್ಪಿಸದೆ ಹೋದಾಗ, ಈ ರೀತಿ ಚಿನ್ನದ ಬೆಲೆ ಗಗನಕ್ಕೇರಿ, ಉಳಿತಾಯ ಅಲ್ಲಿಗೆ ಹರಿಯುವುದು ಒಂದು ಬೆಳವಣಿಗೆ. ಅನಿಶ್ಚಯ ಮಾರುಕಟ್ಟೆಗೆ ಜನ ಹೋಗಲು ಬಯಸದೆ, ಪಾರದರ್ಶಕ, ವಿಶ್ವಾಸಾರ್ಹ ಹೂಡಿಕೆಯ ಮಾರ್ಗ, ಉಳಿತಾಯ ಮಾರ್ಗ ಇಲ್ಲದಾಗ, ಸಾಮಾನ್ಯಜನರ ಉಳಿತಾಯ ಅನುತ್ಪಾದಕವೆನಿಸುವ ಚಿನ್ನ ರಿಯಲ್ ಎಸ್ಟೇಟ್ ಧಂಧೆಯ ಕಡೆ ನುಗ್ಗುತ್ತದೆ. ಅಲ್ಲೂ ಆ ವ್ಯವಹಾರದ ಕಾಳ ಸಂತೆಕೋರರು ಈ ಉಳಿತಾಯವನ್ನು ಕಬಳಿಸಲು ಷಡ್ಯಂತ್ರ ರಚಿಸುತ್ತಲೇ ಇರುತ್ತಾರೆ. ವ್ಯಕ್ತಿಯನ್ನು ಬಲವಂತವಾಗಿ ಬೇರೆಲ್ಲ ಮಾರ್ಗಗಳನ್ನು ಮುಖ್ಯ ಷೇರುಪೇಟೆಗೆ ದಬ್ಬುವ ಪ್ರಯತ್ನ ವಿಫಲವಾಗಬಹುದು. ವ್ಯವಸ್ಥೆಯಲ್ಲಿ ಪ್ರಜೆಯು ನಂಬಿಕೆ ಕಳೆದುಕೊಳ್ಳುವುದು ವ್ಯವಸ್ಥೆಗೇ ಒಳ್ಳೆಯದಲ್ಲ. ಒಂದಿಷ್ಟು ಉಳಿಸಲಾರದ ಬಡವರೇ ಹೆಚ್ಚಿರುವ ಈ ನಾಡಿನಲ್ಲಿ, ಇರುವಷ್ಟು ಉಳಿತಾಯವನ್ನು ಸಂಗ್ರಹಿಸಿ ಅಭಿವೃದ್ಧಿಯತ್ತ ಹರಿಸಲು ಸರ್ಕಾರ ಮಾತ್ರ ಶಕ್ತ. ಆ ಕೆಲಸವನ್ನು ಅದು ಇಂದು ಕಡೆಗಾಣಿಸಿದೆ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ,
ಬೆಟ್ಟಹಲಸೂರು ಅಂಚೆ
ಬೆಂಗಳೂರು - ೫೬೨ ೧೫೭

# ಪಾರ್ಕಿನಲ್ಲೊಂದು ಸಂಧ್ಯಾರಾಗದ ಹಾಡು...

• ಬಿ. ಶ್ರೀನಿವಾಸ

ಅದೊಂದು ಇಳಿಸಂಜೆಯಾಗಿತ್ತು. ಆತ ತನ್ನ ಕೈಯಲ್ಲಿದ್ದ ವಾಕಿಂಗ್‌ಸ್ಟಿಕ್ಕೆಂಬ ಮಗನನ್ನೆ ಆಸರೆಯಾಗಿಟ್ಟು ಕುಳಿತಿದ್ದರೆ ಆಕೆ ಅಕ್ಷರಶಃ ಆತನ ಭುಜದ ಮೇಲೆ ತಲೆಯಿಟ್ಟು ಬಿಕ್ಕಳಿಸುತ್ತಿದ್ದಳು. ಆತ ಸೂರ್ಯ ಕೆಂಪಾಗಿ ಮುಳುಗಿಹೋಗುವುದನ್ನೇ ನೋಡುತ್ತಿದ್ದ. ಬದುಕು ಮುಳುಗುತ್ತಿರುವ ಹಡಗಿನಂತೆ ತೋರಿ ಇಬ್ಬರ ಕಂಗಳಲ್ಲೂ ನೀರಾಡಿತು. ಸೂರ್ಯನೆಂಬೋ ಕೆಂಪು ಚೆಂಡು ಇಬ್ಬರ ಕಂಗಳಲ್ಲಿ ಈಜಾಡುತ್ತಿದ್ದುದು ಆ ಮಸುಕು ಮಬ್ಬಿನಲ್ಲಿ ಓಡಾಡುತ್ತಿದ್ದ ಜನರಿಗೇನೂ ಕಾಣಿಸುವಂತಿರಲಿಲ್ಲ. ಒಂದು ವೇಳೆ ಕಾಣಿಸಿದ್ದರೂ ಜನರಿಗೆ ಪುರುಸೊತ್ತೆಲ್ಲಿದೆ ಹೇಳಿ...? ಅದೇ ಪಾರ್ಕಿನ ಮುಂದಿನ ಬೆಂಚಿನಲ್ಲಿ ಕುಳಿತು ಕಿಲಕಿಲನೆ ನಗುವ ಜೋಡಿ, ಅವಳೇನೋ ಹೇಳುತ್ತಿದ್ದಾಳೆ, ಅವನೋ ನಗುತ್ತಿದ್ದಾನೆ, ಮುಂದಿನ ಬೆಂಚಿನತ್ತ ಕಣ್ಣುಹೊರಳಿಸಿದರೆ ಸಾಕು ಹೊತ್ತಾಯಿತು, ಹೊರಡೋಣವೆಂದು ಹಾಕಿದ್ದ ದುಪ್ಪಟ್ಟಾವನ್ನು ಸರಿಪಡಿಸಿಕೊಳ್ಳುತ್ತ ಎದ್ದು ನಿಂತ ಆ ಹುಡುಗಿಯ ಮುಖದ ತುಂಬಾ ಹೊತ್ತಾಗಿಹೋಯಿತು – ಮನೆಗೆ ಬೇಗ ಹೋಗಬೇಕು ಎಂಬ ಆತಂಕವಿದೆ. ಇನ್ನೂ ಅತ್ತಿತ್ತ ಕಣ್ಣು ಹೊರಳಿಸಿದರಂತೂ ಯಾವುದೋ ಹೆಂಗಸು ತನ್ನ ಮಗನ ವಯಸ್ಸಿನ ಹುಡುಗನನ್ನು ಸನ್ನೆ ಮಾಡಿ ಕರೆಯುತ್ತಿದ್ದಾಳೆ. ಆ ಹುಡುಗನಿಗಾದರೋ ತನ್ನ ಅವ್ವ ನೆನಪಾಗಬಾರದೆ, ಛೆ, ಯಾಕಾದರೂ ಈ ಪಾರ್ಕಿಗೇ ಬರ್ತೀವೋ ಎಂದು ಮನದಲ್ಲಿಯೇ ಬಿಕ್ಕಳಿಸುತ್ತಾಳೆ. ಆತ ಮಾತ್ರ ಆಕೆಯ ಕಪೋಲದ ಮೇಲಿಳಿದ ಕಣ್ಣೀರನ್ನು ತನ್ನ ಚೌಕದಿಂದ ಒರೆಸುತ್ತಿದ್ದಾನೆ. ಹೀಗೆ ಅದೊಂದು ನಿತ್ಯದ ದಿನಚರಿಯೇ ಆಗಿಹೋಗಿಬಿಟ್ಟಿದೆ ಅವನಿಗೆ. ಆದರೆ ಪಾರ್ಕಿಗೆ ಬರಲಿಲ್ಲವೆಂದರೆ ಅದೇನೊ ಕಳೆದುಕೊಂಡಂತೆ ಭಾಸವಾಗುತ್ತದೆ.

''ಅರೆ! ಕತ್ತಲಾಗಿ ಹೋಯಿತು'' ಎಂದು ಎದ್ದು ನಿಂತ ದಂಪತಿಯೆದುರು ''ಸಾರ್, ಕಡಲೆ ಬೀಜ ತಗೊಳ್ಳಿ ಸಾರ್! ಅಜ್ಜಿ, ಟೈಂಪಾಸ್ ಕಡಲೆ'' ಎಂದು ಹಿಂದಿಂದೆಯೇ ಬರುವ ಹುಡುಗನನ್ನು ನೋಡುವಾಗ ಯಾಕೋ ಕರುಳು ಹಿಚುಕಿದಂತೆ ಆಗುತ್ತದೆ. ಆತ ಜೇಬಿಗೆ ಕೈ ಹಾಕಿ ಎರಡು ರೂಪಾಯಿ ನಾಣ್ಯ ಕೈಗೆ ಕೊಟ್ಟು, ಕಡಲೇ ಬೀಜ ಬ್ಯಾಡ ಬಿಡಪ್ಪ ಎಂದು ಮುಂದೆ ಸಾಗುತ್ತಾನೆ. ದಿನವೂ ಹೀಗೆ ಬರುವಾಗ ಇದೇ ಸಮಯಕ್ಕೆ ಸರಿಯಾಗಿ ಸ್ಟೇಷನ್ನಿನಲ್ಲಿ ಬೆಂಗಳೂರಿನಿಂದ ಹುಬ್ಬಳ್ಳಿಗೆ ಹೋಗುವ ರೈಲೊಂದು ಎರಡು ನಿಮಿಷಗಳ ಕಾಲ ನಿಲ್ಲುತ್ತದೆ. ರೈಲುಗಾಡಿ ನಿಂತ ಸದ್ದಿಗೆ ಹಾಗೇ ಕಿವಿಯಾನಿಸುತ್ತಾರೆ. ಆ ಎರಡು ನಿಮಿಷವೂ ಅವರು ಅಲ್ಲಿಯೇ ನಿಂತಿರುತ್ತಾರೆ. ಆ ರೈಲುಗಾಡಿಯು ಹೋದ ದಿಕ್ಕನ್ನೇ ನೋಡುತ್ತಲೇ ನಿಂತರೂ ಇಳಿದವರ್‍ಯಾರೂ ಇವರನ್ನೂ ಮಾತನಾಡಿಸದೇ ಮುಂದಡಿಯಿಡುವಾಗ ಯಾಕೋ ಕಾಲಿಡಲೂ ಜಾಗವಿಲ್ಲದ ಈ ಜಗತ್ತಿನಲ್ಲಿ ತಾವು ಮಾತ್ರ ಒಂಟಿಯಾದೆವೆ, ಎಂಬ ಅನಾಥ ಪ್ರಜ್ಞೆ ಕಾಡುತ್ತದೆ. ರೈಲುಗಾಡಿ ಹೋದ ಎಷ್ಟೋ ಹೊತ್ತಿನ ನಂತರ ಇವರ ಕಾಲುಗಳು ನಿರಾಸೆಯಿಂದ ಮನೆಯ ಕಡೆಗೆ ಹೆಜ್ಜೆ ಹಾಕುತ್ತವೆ. ಇವತ್ತಾದರೂ ಬಂದಾನೆಂಬ ಅವರ ಸಣ್ಣದೊಂದು ಆಶೆಯೂ ಆ ದಿನದ ರಾತ್ರಿ ಮಟ್ಟಿಗೆ ಕರಗಿ ಹೋಗುತ್ತದೆ. ಕತ್ತಲಿನ ಆ ಬಯಲಿನಲ್ಲಿ ಸುರಿವ ಕಣ್ಣೀರನ್ನೂ ಯಾರೂ ನೋಡುವುದಿಲ್ಲ. ನೋಡಿದರೂ ನೀವ್ಯಾಕೆ ಅಳ್ತಿದೀರಿ ಎಂದು ಕೇಳುವವರಾದರೂ ಯಾರಿದ್ದಾರೆ ಎಂಬ ನಿರ್ಭಾವುಕತೆ ಬೇರೆ. ಆಕೆಯ ಕೈಹಿಡಿದು ರೈಲ್ವೆ ಸ್ಟೇಷನ್ನಿನ ಪಕ್ಕದ ರಸ್ತೆಯ ಗುಂಡಿಯಂತಹ ಕಾಲುವೆಯನ್ನು ಆತನೇ ದಾಟಿಸಬೇಕು. ಹಾಗೆ ದಾಟಿಸುವಾಗ ಆಕೆಯ ಕೈಯನ್ನೂ ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ. ಅದೇ ಅನುಭವ. ಬೆಚ್ಚಗಿನ ಆಕೆಯ ಕೈ, ಮಧುರ ಮಾತು. ಅದೇ ೩೫ ವರ್ಷಗಳ ಹಿಂದಿನ ಆಕೆ ಇಂದೂ ಕೂಡ ಬದಲಾಗಿಲ್ಲದೇ ಹೋಗಿರುವುದು ಆತನಿಗೆ ಆಶ್ಚರ್ಯವನ್ನುಂಟುಮಾಡುತ್ತದೆ. ತಲೆಗೂದಲು ಬೆಳ್ಳಗಾಗಿದ್ದುಬಿಟ್ಟರೆ ಆಕೆ ಎಷ್ಟೊಂದು ಸುಂದರವಾಗಿದ್ದಾಳು ಎಂದು ಮನಸ್ಸಿನಲ್ಲೇ ಅಂದುಕೊಂಡ. ಹಸಿರು ಗದ್ದೆಯಲ್ಲಿ ಓಡಾಡುತ್ತಿದ್ದ ಆಕೆಯನ್ನು ಹಿಂಭಾಗದಿಂದಷ್ಟೆ ಆತ ಕಂಡಿದ್ದುಂಟು. ಹಿಂದೆ ಆಕೆಯ ನಿತಂಬಗಳಿಗೆ ಮೃದುವಾದ ಏಟು ನೀಡುತ್ತಾ ಖುಷಿಯಿಂದ ಕುಣಿಯುತ್ತಿದ್ದ ಆ ನೀಳ ಜಡೆಯನ್ನೊಮ್ಮೆ ಹಿಡಿಯ ಬೇಕು, ಹಿಡಿದು ಮಲ್ಲಿಗೆ ದಂಡೆ ಮುಡಿಸಲೇಬೇಕೆಂದುಕೊಂಡಿದ್ದ. ಎಲ್ಲವೂ ನಿನ್ನೆಯೋ ಮೊನ್ನೆಯೋ ನಡೆದಂತೆ ಭಾಸವಾಗುತ್ತಿತ್ತು. ಅರೆ ನೆನಪುಗಳೇ ಅದೆಷ್ಟು ಮಧುರ, ನೆನಪುಗಳೇ ತಾನೆ ತನ್ನನ್ನು ಉಸಿರಾಡಿಸುವಂತೆ ಮಾಡಿರುವುದು ಎಂದು ಆಕೆಗೆ ಹೇಳಬೇಕೆನಿಸುತ್ತಿತ್ತು. ಆದರೆ ಯಾಕೋ ಆಕೆಯಿನ್ನೂ ಕಪೋಲದಲ್ಲಿಟ್ಟು ಕಣ್ಣೀರು ಒರೆಸಿಕೊಂಡರೂ ಮತ್ತೆಮತ್ತೆ ಸಾಲುಸಾಲಾಗಿ ಇಳಿಯುತ್ತಿದ್ದವು. ಆಕೆಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ತಲೆಯನ್ನೂ ನೇವರಿಸುತ್ತಾ ತಟ್ಟಿ ಮಲಗಿಸ ಬೇಕೆಂದುಕೊಂಡ. ಅಷ್ಟೊತ್ತಿಗೆ ಮನೆ ಬಂದುಬಿಟ್ಟಿತ್ತು. ಒಳಗಿನ ಆ ಮನೆಯಲ್ಲಿ ಮಕ್ಕಳು ಓದಿಕೊಳ್ಳುತ್ತಿದ್ದರು. ಎದುರಿಗೆ ಅವರ ತಾಯಿ ಕುಳಿತಿದ್ದರು. ಮಕ್ಕಳು ಅಂಗಳದೆಡೆಗೆ ಮುಖ ಮಾಡಿ ಯಾವಾಗ ಆಟಕ್ಕೆ ಬಿಡುವಳೋ ಈ ಅಮ್ಮ ಎಂಬಂತೆ ಕದ್ದುಮುಚ್ಚಿ ಮಾಡಿ ಪಿಳಿಪಿಳಿ ಕಣ್ಣುಗಳನ್ನು ಬಿಡುತ್ತಾ ಒಮ್ಮೊಮ್ಮೆ ಜೋರಾಗಿ ಓದುತ್ತಿದ್ದರು. ಹೀಗೆಯೇ ಇದ್ದನಲ್ಲವೇ ನಮ್ಮ ಶಶಾಂಕ? ಅಲ್ಲಿಯೇ ಅಲ್ಲವೇ ಕುಳಿತು ಓದಿಸಿದ್ದು...? ಆಕೆಗೆ ಒಮ್ಮೆಲೇ ನಗು ಬಂತು. ಅಷ್ಟೇ ದೊಡ್ಡದಾದ ಮನೆ, ಅಜ್ಜ ಅಜ್ಜಿಯ ಜೊತೆ ಆಡಿ ನಲಿದ ಮನೆಯೀಗ ಇವರು ಅಜ್ಜ ಅಜ್ಜಿಯರಾಗುವ ಸಮಯದಲ್ಲಿ ಬೇರ್‍ಯಾರಿಗೋ ಪಾಲಾಗಿ ಹೋಗಿದೆ, ಪಾಪ, ಕೊಂಡ ಪುಣ್ಯಾತ್ಮನೇನೋ ಏನನ್ನೂ ಬಯಸದೆ ಇದ್ದುದರಲ್ಲಿಯೇ ಮುಂದಿನ ಕೋಣೆಯನ್ನು ಇದ್ದಷ್ಟು ದಿನ ಇರಿ ಎಂದು ಇವರಿಬ್ಬರಿಗೆ ಬಿಟ್ಟುಕೊಟ್ಟಿದ್ದನು.

* * *

''ಅಮ್ಮಾ ನಾನು ಫಸ್ಟ್ ರ್‍ಯಾಂಕ್'' ಎಂದು ಓಡಿ ಬಂದು ಮಗ ಅಮ್ಮನನ್ನು ಅಪ್ಪಿಕೊಂಡಾಗ ಅವನಿನ್ನೂ ಒಂದನೇ ಕ್ಲಾಸು. ಅಲ್ಲಿಂದ ಅವನೂ ಹಿಂತಿರುಗಿ ನೋಡಲೇ ಇಲ್ಲ. ''ಅಮ್ಮಾ ನಾನು ಇನ್ನೂ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅಮೆರಿಕಾಗೆ ಹೋಗಬೇಕು'' ಎಂಬ ಅವನ ಮಹದಾಸೆಗೆ ಆಕೆಯದ್ದೇ ಬಹುದೊಡ್ಡ ಸಪೋರ್ಟು. ಇದ್ದ ಕಂಪನಿಯ ಕೆಲಸದಿಂದ ಸ್ವಯಂ ನಿವೃತ್ತಿ ಪಡೆದು ಜಿಪಿಎಫ್, ಇನ್ಶೂರೆನ್ಸ್ ದುಡ್ಡು ಎಲ್ಲಾ ಸೇರಿಸಿ ಅವನನ್ನು ಅಮೆರಿಕಾಕ್ಕೆ ಕಳುಹಿಸಿದಾಗ ಸಾಕುಸಾಕಾಗಿ ಹೋಗಿತ್ತು. ಬಿ.ಇ. ಕಂಪ್ಯೂಟರ್ ಸೈನ್ಸ್ ಮುಗಿದಾದ ಮೇಲೆ ಇಲ್ಲಿಯೇ ಯಾವುದಾದರೊಂದು ಕಂಪನಿಗಳಲ್ಲಿ ಕೆಲಸಕ್ಕೆ ಸೇರಿಕೋ ಎಂದು ಹೇಳಿದರೂ ಕೇಳದೆಯೇ ಮಗ ಹೋಗಿದ್ದ. ಆದರೆ ಯಾರಿಗೆ ಗೊತ್ತಿತ್ತು, ಹೀಗೆ ಹೋದ ಮಗ ಒಂದು ಬಾರಿಯೂ ಫೋನು ಮಾಡದೆ ಹೀಗೆ ಸತಾಯಿಸುತ್ತಾನೆಂದು...! ಅಯ್ಯೋ ಪಾಪ, ಶಶಾಂಕ! ಎಂದು ನರಳಿದ್ದಷ್ಟೆ.



ನಾನಾದರೋ ಕಣ್ಣೀರು ಹಾಕಿ ಸಮಾಧಾನ ಪಡುತ್ತಿದ್ದೆ. ಇವರೋ ಪಾಪ, ಮನಸ್ಸಿನಲ್ಲಿಯೇ ದುಃಖ ಅನುಭವಿಸಿ ಅದೆಷ್ಟು ಸಂಕಟಪಟ್ಟರೋ ಆ ವೆಂಕಟರಮಣನಿಗೇ ಗೊತ್ತು. ಕೊನೆಗೂ ಅವರಿವರ ಕಾಲು ಹಿಡಿದು ಹೇಗೋ ಸಂಪರ್ಕಸಿದ್ದಾಯ್ತು. ಆಗ ಮಗ ಯಾರ್ದೋ ಜೊತೆಗೆ ಮದುವೆ ಯಾಗಿರುವುದಾಗಿಯೂ ಅಲ್ಲಿಯೇ ಕೆಲಸಕ್ಕೆ ಸೇರಿಕೊಂಡಿರುವುದಾಗಿಯೂ ತಿಳಿಸಿದಾಗ ಕುಸಿದು ಬೀಳುವುದೊಂದೇ ಬಾಕಿ ಇತ್ತು. ಅಲ್ಲ, ಮಗನನ್ನು ಬೆಳೆಸುವಾಗ ನಾವೆಲ್ಲಿ ಎಡವಿದೆವು, ಎಂದು ಇಬ್ಬರೂ ಕೇಳಿಕೊಂಡರೂ ಯಾವುದೊಂದು ಕುರುಹೂ ಕಾಣಲಿಲ್ಲ, ಸಾಕೆನಿಸುವಷ್ಟು ಪ್ರೀತಿ-ಅಭಿಮಾನಗಳಿಂದ ಬೆಳೆಸಿದ ಕುಡಿ ಅದು. ಹೀಗೆ ಇದ್ದಕ್ಕಿದ್ದಂತೆ ದೂರಸರಿದು ನಮ್ಮಗಳ ನೆನಪೂ ಕೂಡ ಬರಲಿಲ್ಲವೆಂದರೇನರ್ಥ ಎಂದು ನೊಂದುಕೊಂಡರು. ನಿದ್ರೆ ಇಲ್ಲದೆ ಎಷ್ಟೋ ದಿನಗಳನ್ನು ಕಳೆದರು. ಅಷ್ಟಕ್ಕೂ ಅವನು ''ನಾನೇನು ಚಿಕ್ಕ ಮಗುವಲ್ಲಮ್ಮ. ಯಾಕೆ ಸುಮ್ಮನೆ ಗಾಬರಿ ಆಗುತ್ತೀರಿ'' ಎಂದಿದ್ದ. ಇವನಿಗೇನು ಗೊತ್ತು ಕರುಳಿನ ನೋವು ?

ನಾನೆಷ್ಟೇ ನೊಂದರೂ ಸಮಾಧಾನಪಡಿಸಿದ್ದು ಇವರೇ. ತಾವೂ ಎಷ್ಟು ನೊಂದಿದ್ದರೋ !

* * *

ಇದ್ದಕ್ಕಿದ್ದಂತೆಯೇ ಅಮೆರಿಕಾದಿಂದ ಬಂದ ಮಗನನ್ನು ನೋಡಿ ಸಂಭ್ರಮಪಟ್ಟಿದ್ದೆವು. ಅದುವರೆಗೂ ಮೌನಕ್ಕೆ ಶರಣಾಗಿದ್ದ ಇವರನ್ನಂತೂ ನೋಡಬೇಕು. ಶೆಟ್ಟರ ಅಂಗಡಿಗೆ ಹೋಗಿ ರೇಶನ್ ತಂದು ಸಿಹಿತಿಂಡಿಯೆಂದು ಅದನ್ನು ಮಾಡು ಇದನ್ನು ಮಾಡು ಎಂದು ಹೇಳೋರು. ಅಷ್ಟು ಸಂತೋಷದಿಂದ ಇದ್ದದ್ದನ್ನು ನೋಡಿದ್ದೆ ಅವತ್ತು. ಊಟದ ನಂತರ ಅವನೇ ಸುದ್ದಿ ತೆಗೆದಿದ್ದ ''ನೀವಿಬ್ಬರೇ ಇದ್ದು ಯಾಕಿಲ್ಲಿ ಇಷ್ಟು ಕಷ್ಟಪಡುತ್ತೀರಿ ? ಅಮೆರಿಕಾಕ್ಕೆ ಬಂದುಬಿಡಿ ನನ್ನ ಜೊತೆ'', ಎಂದು ರಾಗ ಎಳೆದಿದ್ದ. ''ಅಲ್ಲದೇ ಅಲ್ಲಿ ದೊಡ್ಡ ಬಂಗಲೆ ಇದೆ, ಕಾರಿದೆ. ನಿನ್ನ ಸೊಸೆ ಮೊಮ್ಮಕ್ಕಳಿದ್ದಾರೆ'', ಎಂದಿದ್ದ. ಇಷ್ಟಗಲವಾಗಿತ್ತು ಇವಳ ಮುಖ. ''ಬೇಡಪ್ಪ... ನೀನೆ ಹೀಗೆ ಬಂದುಹೋಗುತ್ತಿದ್ದರೆ ನಮಗದಷ್ಟೆ ಸಾಕು'' ಎಂದಿದ್ದರು. ''ಮೊಮ್ಮಕ್ಕಳನ್ನು ಸೊಸೆಯನ್ನು ಕರೆದುಕೊಂಡು ಬಾ'' ಎಂದು ಇವರು ಹೇಳಿದಾಗ ನಾನೆ ಅಲ್ಲವೇ ಇವರನ್ನು ಒಪ್ಪಿಸಿದ್ದು. ''ಹಾಗಾದರೆ ಹುಟ್ಟಿ ಬೆಳೆದ ಈ ಮನೆ...'' ಎಂದಾಗ ಯಾರಿಗಾದರೂ ಮಾರಿದ ರಾಯಿತು ಎಂದಿದ್ದ ಮಗ. ಎಷ್ಟು ಸಲೀಸಾಗಿ ಹೇಳಿಬಿಟ್ಟನಲ್ಲವೆ ಎಂದು ಅನ್ನಿಸಿತ್ತಾದರೂ, ''ಕಂಪ್ಯೂಟರ್ ಟೆಕ್ನಾಲಜಿಯಲ್ಲಿ ಬೆಳೆದ ಮಗನಲ್ಲವೆ ಪಾಪ ! ಅವನಿಗಾದರೂ ನಾವು ಏನು ಮಾಡಿದ್ದೇವೆ ಹೇಳಿ'' ಎಂದು ತನ್ನನ್ನೇ ತಾನು ಸಮಾಧಾನಪಡಿಸಿಕೊಂಡಿದ್ದಳು. ಅಜ್ಜ ಮುತ್ತಜ್ಜರು ಬೆಳೆದ ಮನೆ. ತಾನು ಉಂಡು ಆಡಿ ಬೆಳೆದ ಮನೆ. ಅಷ್ಟಕ್ಕೇ ತನಗೂ ತನ್ನಾಕೆಗೂ ಎದುರು ಮಾತಾಡಿದ್ದ. ಇದೇ ಮನೆಯಲ್ಲಿ ಅಲ್ಲವೇ ಈ ಸಾಗವಾನಿ ಕಟ್ಟಿಗೆಯ ೧೬ ಕಂಬಗಳ ಈ ಮನೆ ಬರಿ ಮನೆಯಾಗಿಹೋಯಿತೇ ಎಂದುಕೊಂಡರೂ ತನ್ನವಳ ಮಾತು ಕೇಳಿ ೨೨ ಲಕ್ಷ ರೂಪಾಯಿಗಳಿಗೆ ಮಾರಿದ್ದ. ತೆಗೆದುಕೊಂಡವನು ತುಂಬಾ ಉದಾರಿಯಾಗಿದ್ದ. ''ಮನೆ ನಮಗೆ ಮಾರಿದರೇನಾಯ್ತು. ನಿಮ್ಮದೇ ಮನೆ ಎಂದುಕೊಂಡು ಆಗಾಗ ಬಂದು ಹೋಗುತ್ತಿರಿ'', ಎಂದು ಆಹ್ವಾನಿಸಿದ್ದ. ಮಾರಿ ಬಂದ ಹಣವನ್ನು ಬೇಕಾದರೆ ನೀವೆ ಇಟ್ಟುಕೊಳ್ಳಿ ಎಂದಿದ್ದ ಮಗ. ಹಾಗೇ ಮಾಡಿದ್ದರು ದಂಪತಿಗಳು.

ಮನೆ ಮಾರಿದ್ದೇ ತಡ ಇನ್ನು ತಡ ಮಾಡುವುದು ಬೇಡವೆಂದು ಮಗನೆ ಅಲ್ಲವೇ ಎಲ್ಲವನ್ನೂ ಓಡಾಡಿ ಮಾಡಿಸಿದ್ದು ! ಪಾಸ್‌ಪೋರ್ಟು ಅದು ಇದು ಅಂತೆಲ್ಲ ಎಷ್ಟೊಂದು ರಗಳೆ ಎಂದು ಈಕೆ ಅಂದಿದ್ದಕ್ಕೆ, ''ಒಂದು ದೇಶಬಿಟ್ಟು ಇನ್ನೊಂದು ದೇಶಕ್ಕೆ ಹೋಗೋದು ಅಂದ್ರೆ ಸುಮ್ಮನೇ ಅಂದುಕೊಂಡಿದ್ದಿಯಾ ? ನಮ್ಮೆಲ್ಲ ಬೇರುಗಳನ್ನು ಕಿತ್ತುಕೊಂಡು ಹೋಗೋದು ಅಷ್ಟು ಸುಲಭವೇ'', ಎಂದು ಹೇಳಿದ್ದ.

ವಿಮಾನ ಬರುವುದು ಇನ್ನೂ ಒಂದು ಗಂಟೆ ತಡ ಆಗುತ್ತಂತೆ. ''ಅಪ್ಪ ನೀವಿಟ್ಟುಕೊಂಡ ರೂಪಾಯಿ ಅಮೆರಿಕಾದಲ್ಲಿ ನಡೆಯುವುದಿಲ್ಲ, ಅದನ್ನು ಡಾಲರ್ ಮಾಡಬೇಕು. ನೀವಿಲ್ಲೆ ಕುಳಿತಿರಿ, ನಾನು ರೂಪಾಯಿಗಳನ್ನು ಡಾಲರುಗಳಿಗೆ ವಿನಿಮಯ ಮಾಡಿತರ್ತೀನಿ'' ಎಂದಾಗ ಸಹಜವಾಗಿಯೇ ಚೀಲವನ್ನು ಕೊಟ್ಟು, ''ಹುಷಾರು ಮಗ'' ಎಂದಷ್ಟೆ ಹೇಳಿದ್ದು ನೆನಪಿದೆ. ವಿಮಾನ ನಿಲ್ದಾಣದಲ್ಲಿ ಹೋಗಿಬರುವ ಜನರನ್ನು ನೋಡುತ್ತಾ ಇಳಿದ ಜನರ ಕಾಯುತ್ತಾ ನಿಂತ ಸಾಲುಗಳ ಕಂಗಳಲ್ಲಿ ಬೆಳಕು ಕಂಡು ಇವರಿಬ್ಬರಿಗೂ ವಿಚಿತ್ರವೆನಿಸುತ್ತಿತ್ತು. ಅದು ನಿಲ್ದಾಣವೇ ಎಂದುಕೊಂಡು ಯೋಚಿಸುತ್ತಿರುವಾಗಲೇ ಗೊತ್ತಾಗಿದ್ದು ತಮ್ಮ ಮಗ ಹೋಗಿ ಆಗಲೇ ನಾಲ್ಕು ಗಂಟೆಗೂ ಹೆಚ್ಚು ಸಮಯವಾಗಿದೆ ಎಂದು. ಇವನ್ಯಾಕೆ ಇನ್ನೂ ಬರಲಿಲ್ಲವೆಂದು ಯೋಚಿಸುತ್ತಿರುವಾಗಲೇ ಅಲ್ಲೊಬ್ಬನನ್ನು ಕೇಳಲಾಗಿ, ''ಅಯ್ಯೋ ಅಮೆರಿಕಾದ ಮಿನಿಯಾ ಪೊಲೀಸ್‌ಗೆ ಗಾಡಿ ಹೋಗಿ ಆಗಲೇ ಸುಮಾರು ನಾಲ್ಕು ತಾಸಿಗೂ ಹೆಚ್ಚಾಗಿದೆ. ಅದರೂ ನೀವೊಮ್ಮೆ ವಿಚಾರಿಸಿ ನೋಡಿ'' ಎಂದು ಹೇಳಿ ಹೋದ. ಕಂಗಾಲಾಗಿ ಕೌಂಟರಿನಲ್ಲಿ ವಿಚಾರಿಸಲು ಶಶಾಂಕ ಎಂಬ ಪ್ರಯಾಣಿಕರು ಮಿನಿಯಾಪೊಲೀಸ್‌ಗೆ ಪ್ರಯಾಣ ಬೆಳೆಸಿದ್ದಾಗಿ ತಿಳಿಸಿದಾಗ ಆದದ್ದೇನೆಂದು ಅರಿವಾಗಿತ್ತು. ಆತನ ಕಾಲುಗಳು ಇನ್ನು ಒಂದಡಿಯೂ ಮುಂದಿಡ ಲಾರೆವೆಂದು ಅಲ್ಲಿಯೇ ನಿಂತುಬಿಟ್ಟವು. ''ರ್‍ರೀ... ಏನಾಯ್ತು !'' ಎಂದಾಗಲೇ ಅವನಿಗೆ ಎಚ್ಚರವಾಗಿ ಹೇಗೆ ಹೇಳುವುದು, ಏನು ಹೇಳುವುದು ಎಂದು ಯೋಚಿಸುತ್ತಿರುವಾಗಲೇ ಆಕೆಗೆ ಪ್ರಜ್ಞೆ ತಪ್ಪಿತ್ತು. ಸುತ್ತಲೂ ಯಾರೋ ಬಿಸ್ಲೆರಿ ಬಾಟಲಿಯ ನೀರು ಚಿಮುಕಿಸುತ್ತಿದ್ದರು.

* * *

''ಛೇ, ನಾನೆಂಥ ಕೆಲಸ ಮಾಡಿಬಿಟ್ಟೆ. ನನ್ನೊಂದಿಗೆ ಇವರೂ ಕೂಡ ಬೀದಿಗೆ ಬೀಳ ಬೇಕಾಯಿತಲ್ಲ. ದುಡಿದ ಕಂಪನಿ ಈಗಾಗಲೇ ನೀವು ದುಡಿದದ್ದು ಸಾಕು. ನಿಮಗೆ ವಯಸ್ಸು ಆಯಿತೆಂದು ಮನೆಗೆ ಕಳಿಸಿದಾಗ ಕೊಟ್ಟ ಹಣವೂ ಮಗನ ಪಾಲಾಗಿಹೋಗಿದೆ, ಇದ್ದದ್ದೊಂದು ಮನೆಯೂ ಮಾರಾಟ ಆಗಿ ಅದರ ದುಡ್ಡು ಕೂಡ ಹೆತ್ತ ಮಗನೇ ಲಪಟಾಯಿಸಿದ್ದಾನೆ. ಅಯ್ಯೋ... ದೇವರೇ...'' ಎಂದು ಗೋಳಾಡಿದವಳನ್ನು ಸಂತೈಸುತ್ತಲೇ ಆತ ಸಂಕಟ ಪಡುತ್ತಿದ್ದ. ಆತ ಅಳುವುದು ಕಮ್ಮಿ ಎಂದು ಆಕೆಗೆ ಗೊತ್ತಿದೆ. ಆತ ಅತ್ತರೆ ಮಕ್ಕಳ ಹಾಗೇ ಆಕೆಯ ಮಡಿಲಲ್ಲಿ ತಲೆಯಿಟ್ಟು ಅಳುತ್ತಿದ್ದ. ಆ ದಿನ ಆತನ ತಾಯಿ ಅಂದರೆ, ತನ್ನ ಅತ್ತೆ ಸತ್ತ ದಿನ ಹಾಗೇ ಅತ್ತಿದ್ದನ್ನು ಬಿಟ್ಟರೆ ಮತ್ತೆ ಅತ್ತಿದ್ದು ಇವತ್ತೆ. ಇದ್ದಕ್ಕಿದ್ದಂತೆ ಗಾಢ ನಿದ್ರೆಯಲ್ಲಿದ್ದ ಆಕೆಯ ಮಡಿಲ ಮೇಲೆ ತಲೆಯಿಟ್ಟು ಅತ್ತಿದ್ದ. ಆಕೆನೆ ಆಗ ಸಂತೈಸಿದ್ದಳು. ಆತ ಆಕೆಯನ್ನು ಸಂತೈಸಿದ. ಆತ ಬೆಳಗಾಗುವುದನ್ನು ಕಾದು ಯಾವುದೋ ಅಕೌಂಟೆಂಟ್ ಕೆಲಸಕ್ಕೆ ತಿಂಗಳಿಗೆ ಸಂಬಳ ರೂ. ೧,೦೦೦ ಕೊಡುತ್ತಾರೆಂದು ಸೇರಿಕೊಂಡಿದ್ದ. ಮಾರಿದ ಮನೆಯ ಮುಂದೆ ಬಂದು ನಿಂತ ಈ ವಯಸ್ಸಾದ ದಂಪತಿಗಳ ಕರುಣಾಜನಕ ಕತೆಯನ್ನು ಕೇಳಿ ಮನೆ ತೆಗೆದುಕೊಂಡ ಮಾಲೀಕನೇ ಇರುವಷ್ಟು ದಿನ ಇರಲಿ ಎಂದು ಉಳಿದುಕೊಳ್ಳಲು ಮುಂದಿದ್ದ ಒಂದು ರೂಮನ್ನು ನೀಡಿದ್ದ. ಆಕೆ ತನ್ನ ಗಂಡನನ್ನು ಈಗ ಮಗನಂತೆ ನೋಡಿಕೊಳ್ಳು ತ್ತಿದ್ದಳು. ಸ್ವಲ್ಪ ನೋವಾದರೂ ಸಾಕು ಆಕೆಗೆ ಆತಂಕವಾಗುತ್ತಿತ್ತು. ಹಿಂದಿಗಿಂತಲೂ ಈಗ ಪ್ರೀತಿ ಜಾಸ್ತಿಯಾಗಿತ್ತು. ಅದೇನನ್ನೋ ನೆನಸಿಕೊಂಡು ತಕ್ಷಣವೇ ಆತನ ತೊಡೆಯ ಮೇಲೆ ತಲೆಯಿಟ್ಟು ಅತ್ತುಬಿಡುತ್ತಾಳೆ. ಹೀಗಾದಾಗಲೆಲ್ಲ ಆತ ತಲೆ ನೇವರಿಸಿ ಸಂತೈಸುತ್ತಾನೆ.

* * *

ಮುಂಜಾನೆ ಹೋದ ಆತ ಸಂಜೆ ಬರುವಾಗ ಮಲ್ಲಿಗೆಯ ಹೂವನ್ನು ತರುವುದು ಇನ್ನೂ ಮರೆತಿಲ್ಲ. ಹಾಗೇ ಘಮಘಮ ಮಲ್ಲಿಗೆಯನ್ನು ಕಟ್ಟಿದ ಪೇಪರಿನಲ್ಲಿ ಕುಟುಂಬ ದೌರ್ಜನ್ಯ ತಡೆ ಕಾಯ್ದೆ ಕುರಿತ ಲೇಖನವಿತ್ತು. ಆಕೆ ಆ ಪೇಪರಿನಲ್ಲಿರೋ ವಿಷಯವನ್ನು ಮತ್ತೆಮತ್ತೆ ಓದಿಕೊಂಡಳು. ತಮಗಾದ ಅನ್ಯಾಯದ ವಿರುದ್ಧ, ಅದೂ ಸ್ವಂತ ಮಗನ ವಿರುದ್ಧವೇ ನ್ಯಾಯಾಲಯದಲ್ಲಿ ದಾವೆ ಹೂಡಲು ನಿರ್ಧರಿಸಿದಾಗ, ''ಹೋಗ್ಲಿ ಬಿಡೆ. ಅವನೂ ನಮ್ಮ ಮಗ ಅಲ್ವೇನೇ'' ಎಂದಿದ್ದ. ಈತನ ಮಾತು ಕೇಳಿ ಆ ಪೇಪರಿನಲ್ಲಿದ್ದ ಘಮಘಮದ ಮಲ್ಲಿಗೆಯ ವಾಸನೆ ಸಹ ಆಕೆಯನ್ನು ತಡೆಯಲಿಲ್ಲ, ಆಕೆಗೆ ವಿಪರೀತ ಸಿಟ್ಟುಬಂದಿತ್ತು. ವಿಮಾನ ನಿಲ್ದಾಣ ದಲ್ಲಿ ಹೇಳದೇ ಕೇಳದೆ ಬೀದಿಯಲ್ಲಿ ನಿಲ್ಲಿಸಿ ಹೋದವನನ್ನು ಹೆತ್ತೆನೆಂಬ ಸಂಕಟ ಒಂದು ಕಡೆ, ತನ್ನ ಜೀವದ ಗೆಣೆಕಾರ ಈ ಇಳಿವಯಸ್ಸಿನಲ್ಲಿ ದುಡಿಯುವ ಕರ್ಮಕ್ಕಾಗಿ ಅವಳು ಹಪಹಪಿಸಿದಳು. ಆದರೂ ತನ್ನ ಕರುಳ ಕುಡಿಯನ್ನೆ ಎದುರಿಗೆ ನಿಲ್ಲಿಸಿ ಎದುರಿಸಬಲ್ಲೆನೆಂಬ ಆತ್ಮವಿಶ್ವಾಸ ಅವಳಲ್ಲಿತ್ತು. ವಕೀಲರ ಕಚೇರಿಗೂ ಕೋರ್ಟಿಗೂ ಸುಮಾರು ೬-೭ ಕಿ.ಮೀ. ಕಾಲ್ನಡಿಗೆಯಲ್ಲೇ ಓಡಾಡಿದಳು. ಅವಳ ಕಾಲ್ನಡಿಗೆಗೆ ಅದೆಂಥದ್ದೊ ಶಕ್ತಿ ಬಂದಂತೆನಿಸಿತು.

ಕೋರ್ಟಿಗೆ ಪ್ರತಿದಿನವೂ ಅಲೆದದ್ದಾಯಿತು.

ಅಂತಹ ಒಂದು ದಿನ ಬಂದೇ ಬಂತು. ನ್ಯಾಯಾಲಯದ ಕರೆಗೆ ಬದ್ಧನಾಗಿ ದೂರದ ದೇಶದಿಂದ ಮಗ ಬಂದಿದ್ದ. ಅಪ್ಪ ಅಮ್ಮನ ಕಾಲಿಗೆ ಬಿದ್ದು ಬೇಡಿಕೊಂಡ.

ಆಕೆ ಮಾತ್ರ ಅವನ ಕಡೆಗೆ ತಿರುಗಿಯೂ ನೋಡಲಿಲ್ಲ.

''ಅಮ್ಮ, ನಾನು ನಿನ್ನ ಮಗನಲ್ಲವೆ ? ಕ್ಷಮಿಸು'' ಎಂದು ಆತ ಕೇಳುತ್ತಲೇ ಇದ್ದ. ಆಕೆ ಅತ್ತ ನೋಡದೆ ಬಿರಬಿರನೆ ನಡೆದುಬಿಟ್ಟಳು.

* * *

ಈಗಲೂ ಅವರು ಪಾರ್ಕಿನಿಂದ ಬರುವಾಗ ರೈಲು ನಿಂತ ಸದ್ದು ಕೇಳುತ್ತೆ. ಇಳಿಯುವವರು, ಇಳಿದು ಮಾತನಾಡಿಸುವವರು ಯಾರೂ ಇಲ್ಲವೆಂದರೂ ಕೂಡ ಎರಡು ಜೋಡಿ ಕಣ್ಣುಗಳು ಅತ್ತಲೇ ಹೊರಳುತ್ತವೆ.

ಯಾರೂ ಇಲ್ಲದ್ದು ನೋಡಿ ಕಾಲುಗಳು ನಿರಾಸೆಯಿಂದ ಮನೆಯ ಕಡೆಗೆ ಹೆಜ್ಜೆ ಹಾಕುತ್ತವೆ.

ಒಂದು ಜೋಡಿ ಕಂಗಳು ಇತ್ತ ಬಂದು ''ಅಮ್ಮ'' ಎನ್ನುತ್ತವೆ. ಇಗೋ ಒಂದ್ನಿಮಿಷ ಇರಿ... ರೈಲಿನಲ್ಲಿ ಇನ್ನೂ ಇಳಿಯುವವರು ಇದ್ದಾರೆ ಎಂದು ಜೋಡಿ ಕಂಗಳು ಅತ್ತಲೇ ನೋಡುತ್ತವೆ.

ರೈಲು ಗಾಡಿ ಸದ್ದು ಮಾಡುತ್ತಾ ಹೊರಟಿದೆ. ಕಂಗಳಲ್ಲಿ ನೀರಾಡುತ್ತಿದೆ. ಕಾಲುಗಳು ಮನೆಯ ಕಡೆಗೆ ಚಲಿಸುತ್ತಿವೆ. ಮಳೆ ಮತ್ತೆ ರೈಲು ಗಾಡಿ ಬರುವ ನಿರೀಕ್ಷೆಯಲ್ಲಿ ಅವರೀಗಾಗಲೇ ಮನೆಯ ಕೊನೇ ಮೆಟ್ಟಿಲೇರಿ ನಿಂತಿದ್ದಾರೆ. ಮನೆಯ ಒಳಗಿನ ನಿಶ್ಶಬ್ದಕ್ಕೆ ಉಸಿರುಗಟ್ಟಿದಂತಾಗುತ್ತಿದೆ.

ಜೋಡಿ ಜೀವಗಳು ಹೋದ ರೈಲುಗಾಡಿಯೆಡೆಗೇ ದಿಟ್ಟಿಸುತ್ತಿವೆ.

ಬಿ. ಶ್ರೀನಿವಾಸ
ಶಿರಸ್ತೇದಾರ, ಜಿಲ್ಲಾ ನ್ಯಾಯಾಲಯ, ಹಾವೇರಿ - ೫೮೧ ೧೧೦

# ರಾಮಾಯಣದಲ್ಲಿ ಸೀತೆಯ ಪಾತ್ರ ಪ್ರಸಂಗ – ಒಂದು ಜಿಜ್ಞಾಸೆ

ಬಿ. ಪಿ. ಶಿವಾನಂದರಾವ್

ಭಾರತೀಯ ಸಂದರ್ಭದಲ್ಲಿ ಎರಡು ಮಹಾಕಾವ್ಯಗಳಾದ ರಾಮಾಯಣ ಹಾಗೂ ಮಹಾಭಾರತದಲ್ಲಿ ಮಿಂಚುವ ಸ್ತ್ರೀ ಪಾತ್ರಗಳು ಲೋಕದ ಯಾವ ಪುರಾಣ ಪುಣ್ಯ ಗ್ರಂಥಗಳಲ್ಲಿ ಮೂಡಿ ಬಂದಿರುವ ಸ್ತ್ರೀ ಪಾತ್ರಗಳಿಗಿಂತ ವಿಭಿನ್ನವಾದ, ವಿಶೇಷವಾದ, ಶ್ರೇಷ್ಠತಮ ಗುಣಾಂಶ ಅರ್ಥಾತ್ ಚಿತ್ತಾಕರ್ಷಕ ನೆಲೆ-ಬೆಲೆಯನ್ನು ಪಡೆದಿವೆ. 'ಸ್ತ್ರೀ' ಎಂದಾಕ್ಷಣ ಭಾರತೀಯ ಸಮಾಜದಲ್ಲಿ ಆಕೆ ತಾಯಿ-ಸಂಸಾರದ ಆಧಾರಸ್ತಂಭ, ಪೂಜನೀಯ ದೇವತೆ, ಶಕ್ತಿದಾಯಿನಿ, ಮಾರ್ಗದರ್ಶಿನಿ ಇತ್ಯಾದಿ ಶಬ್ದಸಮೂಹಗಳು, ವಿಶೇಷಣಗಳಿಂದ ಗೌರವ-ಪ್ರೀತಿ- ಅಭಿಮಾನ- ಭಕ್ತಿಯಿಂದ ಆರಾಧಿಸುತ್ತ ಶ್ಲಾಘಿಸುತ್ತ; ಒಂದು ಅನನ್ಯದ್ವಾದ ಶ್ರೇಷ್ಠತೆಯ ಹಣೆಪಟ್ಟಿ ಅಂಟಿಸಿದ್ದು, ಈಗದು ಕ್ಲೀಷೆಯ ವಿಷಯವೇ.

ಹಾಗೆ ಆರಾಧಿಸುತ್ತ ಶ್ಲಾಘಿಸಿ, ಪ್ರೀತ್ಯಾಭಿಮಾನ ವ್ಯಕ್ತಪಡಿಸುವ ಪುರುಷಪ್ರಧಾನ ಸಮಾಜವು ತಾನೇ ರಚಿಸಿದ ಕಾನೂನು ವ್ಯವಸ್ಥೆಗಳಲ್ಲಿ ಆಕೆಯನ್ನು ತನ್ನ ಸುಖಭೋಗೇಚ್ಛೆಗಳಿಗೆ ಮನಸೋಇಚ್ಛೆ ಬಳಸಿಕೊಂಡು ಸುಖಸಂತೋಷ ಪಡುವ ಒಂದು ಮಾನವಯಂತ್ರವೆಂದೋ, ಯಂತ್ರಮಾನವ ಎಂದೋ ದುಡಿಸಿಕೊಳ್ಳುತ್ತಿದ್ದಾನೆಂಬ ಆರೋಪವೂ ಅಷ್ಟೇ ಕ್ಲೀಷೆ ವಿಷಯ ಹೌದೆಂದು ಪ್ರಾಜ್ಞರೆಲ್ಲ ಅಭಿಮತಿಸುತ್ತಾರೆ. ಇಲ್ಲಿ ಆಕೆ ಕರುಣಾಮಯಿ, ದುಃಖ ಸಹಿಷ್ಣುತಾ ಜೀವಿ, ಸಹನಶೀಲೆ ಹೀಗೆ ಎಲ್ಲ ವಿಶೇಷಣಾ ಪದಪುಂಜಗಳಿಗೂ ಆಕೆ ಜೀವಂತ ಸಾಕ್ಷಿ ಮಾಡಿದ ಪುರಾಣ, ಮಹಾಕಾವ್ಯಗಳಲ್ಲಿ ಹೆಣ್ಣಿನ ಅಂತರ್ಗತ ಚಿಂತನೆ,



ಆಶಾಕಾಂಕ್ಷೆ, ಇವುಗಳತ್ತ ಚಿಂತಿಸದಂತೆ ಆಕೆಯ ಸಕಲ ಸೌಭಾಗ್ಯಗಳಲ್ಲೇ ಅತ್ಯಂತ ಅಮೂಲ್ಯವಾದಂತಹ 'ಸ್ವಾತಂತ್ರ್ಯ'ದ ಬಗೆಗೂ ಯೋಚಿಸದೆ, ಆಕೆಯ ಬದುಕನ್ನು 'ಶೋಷಣೆ'ಯ ಪರಿಧಿಯಲ್ಲಿ ಸವೆಸುತ್ತ ಗಿರಿಗಿಟ್ಲೆಯಲ್ಲೇ ಕೊನೆಗೊಳ್ಳುವಂತೆ ತನ್ನ ಅಧಿಕಾರ ಬಲದಿಂದ ರೂಪಿಸಿದ್ದು ಪುರುಷವರ್ಗವೇ ಎಂಬ ಆರೋಪದಲ್ಲೂ ಸತ್ಯಾಂಶವಿಲ್ಲದಿಲ್ಲ, ಇದಕ್ಕೆ 'ವರದಕ್ಷಿಣೆ', 'ಸತಿ ಸಹಗಮನ ಪದ್ಧತಿ', 'ಬಾಲ್ಯವಿವಾಹ', – ತಾಜಾ ಉದಾಹರಣೆಗಳು.

ಸುದೈವಕ್ಕೆ ಪುರಾಣ-ಮಹಾಕಾವ್ಯಗಳಲ್ಲೆಲ್ಲ ಹೆಣ್ಣನ್ನು ಚಿತ್ರಿಸಿದ ಕವಿಗಳು, ರಸಿಕತೆಯಷ್ಟೇ ಚರ್ಚೆಗೂ ಸಾಕಷ್ಟು ಗ್ರಾಸ ನೀಡಿದ್ದಾರೆ. ಹೀಗಾಗಿ ವಂದನೀಯರು. ಹೆಣ ಬಿದ್ದರೂ ಸೈ, ಹಣ ಹೋದರೂ ಸೈ, ಹೆಣ್ಣನ್ನು (ಮೋಹ) ಬಿಡುವುದಿಲ್ಲ ಎಂದು ಆತ್ಮ ಪ್ರತಿಜ್ಞೆ ಮಾಡಿ ಹೊರಟ ಪುರುಷ ಸಮೂಹ ನಡೆಸಿದ ಯುದ್ಧ-ಕ್ರಾಂತಿ-ತ್ಯಾಗ-ಬಲಿದಾನ ಎಷ್ಟಿಲ್ಲ!? ಇವು ಇತಿಹಾಸದಲ್ಲಿ ಚರ್ಚೆಗೂ ಮೋಹಾಂಧತೆಗೂ – ಅಧಿಕಾರ ಬಲದ್ದೇ ಪ್ರದರ್ಶನಗಳಾದ ನೂರಾರು ದಾಖಲೆಗಳಿವೆ. ಇದನ್ನು ಭೋಗ ಸಂಸ್ಕೃತಿ ಎಂದು ಆರೋಪಿಸುವವರೂ ಇದ್ದಾರೆ. ಸಾಹಿತ್ಯ-ಕಲೆಯ ನಿರ್ಮಿತೆಯ ಯಾವ ಕ್ಷೇತ್ರ ಪ್ರಕಾರ ಗಳನ್ನೆತ್ತಿಕೊಂಡು ಅವಲೋಕಿಸಿದರೂ ನಮಗೆ ಹೆಣ್ಣು-ಹೊನ್ನು-ಮಣ್ಣಿಗಾಗಿ ಮನುಕುಲ ಏನೆಲ್ಲ ಕ್ರಿಯಾಕರ್ಮ ನಡೆಸುತ್ತ 'ಭ್ರಾಂತಿ'ಯಾಗಿ ಪ್ರತಿಫಲಿಸಿದ್ದನ್ನೂ 'ಕ್ರಾಂತಿ' ಎಂದೇ ಭಾವಿಸುತ್ತ ಹೊರಟ ಪುರುಷವರ್ಗವನ್ನು ಹೆಣ್ಣು ಶಂಕೆ-ದೋಷ-ಅಪರಾಧಗಳ ತಕ್ಕಡಿಯಲ್ಲಿಟ್ಟು ನೋಡುವಂತಾಗಿದೆ, ಎಂದು ಮೀಸೆ ತಿರುವುವ ಗಂಡಸರೂ ನಿರುಪಾಯರಾಗಿ ಒಪ್ಪುತ್ತಾರೆ, ಗಂಡಸಿನ ಆಶೋತ್ತರಗಳಿಗೆ ಮನಃಪೂರ್ತಿ ಸ್ಪಂದಿಸಿ ದುಡಿದು ಆಕೆ 'ತ್ಯಾಗಜೀವಿ'ಯ ಕತ್ತಲ ಕೋಣೆಯಲ್ಲಿ ಬದುಕುವಂತೆ ಮಾಡಿದ್ದನ್ನು ಹೆಣ್ಣು ಸಹ ಆಕ್ಷೇಪಿಸುತ್ತಲೇ ಅನುಭವಿಸಿದ್ದನ್ನೇ ಒಪ್ಪುತ್ತಾಳೆ! ಹೆಣ್ಣು ಎಷ್ಟೇ ವಿದ್ಯೆ ಕಲಿಯಲಿ, ಬುದ್ಧಿವಂತ ಳಾಗಿರಲಿ, ದುಡಿಯಲಿ, ದುಡಿಸಿಕೊಳ್ಳಲಿ, ಆಡಳಿತ ನಡೆಸಲಿ, ನಡೆಸಿಕೊಳ್ಳಲಿ, ಆಕೆಯ ಸುಖೀಬಾಳ್ವೆಗೆ, ಸಂರಕ್ಷಣೆಗೆ, ಮಾರ್ಗದರ್ಶನಕ್ಕೆ, ಬದುಕಲ್ಲಿ ಸಾರ್ಥಕ್ಯ-ಸಂತೃಪ್ತಿಗೆ ಸದಾ ಸರ್ವಥಾ ಗಂಡಿನ ಆಶ್ರಯವಿಲ್ಲದೆ ಬದುಕಲಾರ ಳೆಂಬುದೂ ಸೂರ್ಯ ಪ್ರಕಾಶದಷ್ಟೇ ಸತ್ಯವಿಚಾರವಾಗಿದೆ.

ಸಹಜಕ್ಕೂ ಹೆಣ್ಣು ಸೂಕ್ಷ್ಮಗ್ರಹಿತ್ವಕ್ಕೆ, ಮೃದುತ್ವಕ್ಕೆ, ವಿನಯಶೀಲತೆಗೆ, ಸ್ವರ ಮಾಧುರ್ಯಕ್ಕೆ, ತಾಳ್ಮೆಯ ಸ್ವಭಾವಕ್ಕೆ ತುಂಬಾ ಸಶಕ್ತಿ ಪಡೆದಿರುವುದೂ ಪ್ರಕೃತಿಯ ಸೃಷ್ಟಿ ರಹಸ್ಯದ್ದೇ ವಿಷಯವೆಂದು ಮಾವನಶಾಸ್ತ್ರಜ್ಞರು ಪ್ರಕಟಿಸುತ್ತಾರೆ. ಬುದ್ಧಿಮತ್ತೆ, ದೂರದೃಷ್ಟಿತ್ವ, ಸೃಜನಶೀಲತೆ, ನಿರ್ಧಾರಾತ್ಮಕ ಕೌಶಲ್ಯ, ಇವು ಹೆಣ್ಣು-ಗಂಡಿನಲ್ಲಿ ವ್ಯತ್ಯಾಸವಿಲ್ಲ. ಇದು ವೈಜ್ಞಾನಿಕ ಸತ್ಯಾಂಶ. ಹಾಗಿದ್ದರೂ ಪರಂಪರಾಗತ ಮೌಲ್ಯ ಗಳಲ್ಲಿ, ಅನುಷ್ಠಾನದ ರೂಢಿ ಕ್ರಮದಲ್ಲಿ, ಶಾರೀರಕ ದೌರ್ಬಲ್ಯಗಳಲ್ಲಿ ಹೆಣ್ಣು ಗಂಡಿನಷ್ಟು ಸಮಾನ ಸ್ಥಿತಿಶಕ್ತಿ ಹೊಂದಿಲ್ಲವೆಂಬುದೂ ತರ್ಕಾತೀತ ವಿಷಯವೇ. ಇದಕ್ಕೆ ಆಕೆಯ ಶರೀರ ರಚನಾ ಕ್ರಮವೂ ಪ್ರಬಲ ಕಾರಣವಾಗಿದೆ.

ಹೀಗಾಗಿ ಸೃಷ್ಟಿಶೀಲ ಕ್ರಿಯೆ ನೈಸರ್ಗಿಕವಾಗಿ, ಅದು ಹೆಣ್ಣಿಗೆ ಮಾತ್ರ ಲಭ್ಯಗೊಂಡ ಕಾರಣಕ್ಕಾಗಿ 'ಹೆಣ್ಣು ಜಗದ ಕಣ್ಣು' – ಎಂದು ಮಾನವಶಾಸ್ತ್ರಜ್ಞರು, ಅನುಭಾವಿಗಳು ಪ್ರತಿಪಾದಿಸುತ್ತಾರೆ. ಬದುಕಿನುದ್ದಕ್ಕೂ ಆಕೆ ತಾಯ್ತಂದೆ, ಗಂಡ, ಮಕ್ಕಳು, ಹೀಗೆ ತನ್ನವರ ಸುಖಸಂತೋಷಕ್ಕಾಗಿ ದುಡಿಮೆ-ತ್ಯಾಗಗಳಿಂದ ವಾಸ್ತವದಲ್ಲಿ ಮಮತೆಯ ಮೂರ್ತಿ ಎನಿಸಿಕೊಂಡಿದ್ದರೂ ಆಕೆಯ ವೈಯಕ್ತಿಕ ಕಷ್ಟಕ್ಕೆ, ನೋವಿಗೆ, ಸಂಕಟಕ್ಕೆ, ದುಃಖಕ್ಕೆ, ಅನುತಾಪಕ್ಕೆ, ಅನುಕಂಪಕ್ಕೆ ಕಡೆಗೆ ಕಣ್ಣೀರಿಗೂ – ಹೀಗೆ ಬದುಕಿನ ಸಂಕಷ್ಟಗಳಿಗೆಲ್ಲ ಆಕೆ ಬಾಧ್ಯಸ್ಥಳಾಗಿ ಮೈಮನವೊಡ್ಡುತ್ತ, ಮಳೆಗೆ ಮೈಯೊಡ್ಡಿದ ಬಂಡೆಯಂತೆ ಬದುಕುತ್ತಾಳೆಂಬುದೂ ಚಿಂತನಾರ್ಹ ಸಂಗತಿಯಾಗಿದೆ. ಹೆಣ್ಣಿನ ಬಗೆಗೆ ಇಷ್ಟು ಪೂರ್ವ ಪೀಠಿಕೆ ಸಾಕೆನಿಸುತ್ತದೆ. ಈಗ ನೇರ ವಿಷಯಕ್ಕೆ ಬರೋಣ.

ಸೀತಾಮಾತೆ ಹೆಣ್ಣಿನ ಕುಲದಲ್ಲೇ ನಿಷ್ಕಳಂಕ ಹೆಣ್ಣಾಗಿ, ತ್ಯಾಗ, ನಿಷ್ಠೆಗಳಿಗೆ ಅಪ್ರತಿಮ ಪತಿವ್ರತಾ ಶಿರೋಮಣಿಗೆ ಉದಾಹರಣೆಯಾಗಿ ಮೆರೆದ ಮಹಾಕಾವ್ಯದ 'ಸ್ತ್ರೀರತ್ನ' ಎಂದು ಈ ಸಹಸ್ರಾರು ವರ್ಷಗಳ ಕಾಲಪ್ರವಾಹದಲ್ಲಿ ವೇದವಾಕ್ಯದ್ದಷ್ಟೇ ನಿಸ್ಸಂಶಯವಾಗಿ ಜನಪ್ರಿಯಳಾಗಿದ್ದಾಳೆ.

ಆಕೆಗೆ ಸುಖಜೀವನ ಎಂಬುದು ಕೊನೆಗೂ ಮರೀಚಿಕೆ ಯಾಗಿ ನಿಲ್ಲುವಂತಾದ ಬಹಳಷ್ಟು ಪ್ರಸಂಗಗಳನ್ನು ಕಾಣಬಹುದು. ಎಲ್ಲದಕ್ಕಿಂತ ಇದುವರೆಗೆ ನಡೆದ ಅತ್ಯಂತ ಚರ್ಚಾಸ್ಪದ ವಿಷಯವೆಂದರೆ ಸೀತಾ ಪರಿತ್ಯಾಗದ ಪ್ರಸಂಗ. ತುಂಬು ಗರ್ಭಿಣಿಯಾದ ಆಕೆಯನ್ನು, ಅಗಸನ ಮಾತನ್ನು ಕೇಳಿ ಸಹಿಸಲಾರದ ಮರ್ಯಾದಾ ಪುರುಷೋತ್ತಮನಾದ, ನ್ಯಾಯಶೀಲ, ನಿಷ್ಪಕ್ಷಪಾತಿ, ಸತ್ಯವಂತ ಶ್ರೀರಾಮನು ಕಾಡಿಗೆ ಅಟ್ಟುತ್ತಾನೆ. ಎಂತಹ ಅಪರಾಧ ಮಾಡಿದ್ದಾಗಲೂ ಶಿಕ್ಷೆ ನೀಡುವ ಮುನ್ನ ಆ ಅಪರಾಧಿಗೆ ನೀಡುತ್ತಿರುವ ಶಿಕ್ಷೆ ಇಂಥಾ ಅಪರಾಧ ಮಾಡಿದ ಕಾರಣಕ್ಕಾಗಿಯೇ ಎಂದು ನ್ಯಾಯಾಧೀಶ ಅಥವಾ ನ್ಯಾಯ ನೀಡುವಾತ ತಿಳಿಸಿದ ನಂತರವೇ ಶಿಕ್ಷೆ ಜಾರಿಗೊಳಿಸುವುದು ಯಾವುದೇ ನೆಲದ ನ್ಯಾಯಬದ್ಧ ಕ್ರಮವೆಂದು ಮನುಕುಲ ಒಪ್ಪಿದೆ. ಅದನ್ನೇ

ಪ್ರಾಚೀನ-ಅರ್ವಾಚೀನ ಕಾಲದ ಧರ್ಮೋಚಿತ ಅನುಕ್ರಮವೆಂದು ಜಗತ್ತೇ ಒಪ್ಪಿದಾಗ ಶ್ರೀರಾಮ ಕಾರಣ ತಿಳಿಸದೆ (ಶಿಕ್ಷೆಯ ನಿಜವಾದ ಕಾರಣ ತಿಳಿಸದೆ) ಸೀತೆಯನ್ನು ಲಕ್ಷ್ಮಣನ ಜೊತೆ ಕಾಡಿಗೆ ಕಳುಹಿಸಿ, ಅಂತಹ ಭೀಕರಾರಣ್ಯ, ಕಾಡುಮೃಗಗಳಿದ್ದ ಪ್ರದೇಶದಲ್ಲಿ ಆಕೆಯನ್ನು ಒಂಟಿಯಾಗಿ ಬಿಟ್ಟುಬರುವಂತೆ ನೀಡಿದ ರಾಮನ ಆದೇಶ ನ್ಯಾಯಬದ್ಧವೆ, ಎಂಬುದು ವಿವೇಚಿಸಬೇಕಾದ ಸಂಗತಿಯೆ.

ಎರಡನೆಯ ಪ್ರಸಂಗ ಎಷ್ಟು ಭೀಕರ ಎಂದರೆ, ಹಾಗೆ ಕಾಡಿಗೆ ಹೆಂಡತಿಯನ್ನು ಅಟ್ಟುವ ನಿರ್ಧಾರ ತೆಗೆದುಕೊಳ್ಳುವ ಸಂದರ್ಭದಲ್ಲೂ, ತಮ್ಮ ಲಕ್ಷ್ಮಣನು ಅಣ್ಣನಿಗೆ ಪ್ರಸಂಗಾವಧಾನತೆಯ ಸೂಕ್ಷ್ಮತೆಯನ್ನು, ದುಷ್ಫಲವನ್ನು ವಿವರಿಸುತ್ತಾನೆ. ''ರಾಣಿಯಾದ ಹೆಣ್ಣಿಗೆ ಮಾನಸಿಕವಾಗಿ ಶಾರೀರಿಕವಾಗಿ ರಾಜನಾದವನು ವಿವೇಚನಾಶೂನ್ಯನಾಗಿ ಅಗಸನ ಮಾತಿಗೆ ಅಂಜಿಯೋ-ಬೆದರಿಯೋ ನೀಡುವ ಶಿಕ್ಷೆ ಸ್ವಚ್ಛ, ನಿಷ್ಪಕ್ಷಪಾತವಾದ ಆಡಳಿತವಲ್ಲ. ನಿನ್ನ ಮಾತು 'ಶಿಕ್ಷೆ'ಯೇ ಆಗುವುದರಿಂದ ಅದು ಆಕೆಗೆ ಶಾಪವಾಗಿ ತಟ್ಟುತ್ತದೆ, ತಟ್ಟಿದೆ! ಮತ್ತು ಆಕೆ ನಿಷ್ಪಾಪಿ ಸ್ತ್ರೀಯಾದ್ದರಿಂದ ಇಂತಹ ಶಿಕ್ಷೆ ನೀಡುವುದು ಸರಿಯಲ್ಲ'' ಎಂದು ಉಪದೇಶಿಸಿದ್ದನ್ನು ಶ್ರೀರಾಮ ಧಿಕ್ಕರಿಸುತ್ತಾನೆ! ಇದು ರಾಜಾಜ್ಞೆ ಎಂಬ ಅಹಂಕಾರ ಮಿಶ್ರಿತ ಧ್ವನಿಯಲ್ಲಿ ತಮ್ಮನನ್ನು ಆತ ತನ್ನ ಆಜ್ಞೆ ಪಾಲಿಸದಿದ್ದಲ್ಲಿ ''ನೀನೂ ಶಿಕ್ಷಾರ್ಹನಾಗುತ್ತೀಯೆ'' ಎಂಬ ಭೀತಿ ಪ್ರಜ್ಞೆ ಹುಟ್ಟಿಸುವಾಗ ನಮಗೆ ರಾಮನ ನೀತಿವಂತಿಕೆಯ ಬಗ್ಗೆ ಶಂಕೆ ಇಮ್ಮಡಿಯಾಗುತ್ತದೆ.




ಈ ಅನ್ಯಾಯದ ವಿರುದ್ಧ ಸಿಡಿದೆದ್ದು ನಿಲ್ಲುವ ಹೆಣ್ಣು ಸೀತೆಯಲ್ಲ ಎಂಬುದಕ್ಕಾಗಿಯೇ ಇರಬೇಕೆನ್ನುವಂತಿರುವ ಆ ಮೊದಲಿನ ಸನ್ನಿವೇಶ ಘಟಿಸಿದ್ದು ಮತ್ತು ಅದು ಚೋದ್ಯದ್ದೂ ಹೌದು, ದುಃಖಭರಿತದ್ದೂ ಹೌದು. ಹೇಗೆಂದರೆ, ರಾವಣನನ್ನು ಯುದ್ಧದಲ್ಲಿ ಸಂಹರಿಸಿ ಸೀತೆಯನ್ನು ಬಿಡಿಸಿಕೊಂಡು ಶ್ರೀರಾಮ ಅಯೋಧ್ಯೆಗೆ ಹಿಂದಿರುಗಲು ಸಜ್ಜಾಗುತ್ತಿದ್ದ ಸಂದರ್ಭ; ಕಾಯಾ ವಾಚಾ ಮನಸಾ ಸೀತೆ ಪವಿತ್ರಳೆಂಬುದನ್ನು ಆಕೆ ಒಂದು ಕ್ಷಣದಲ್ಲೂ ರಾವಣನ ಪ್ರಲೋಭನೆಗೆ ಮಣಿಯದೆ 'ಶ್ರೀರಾಮ'ನೊಬ್ಬನನ್ನೇ ಸರ್ವಸ್ವ ಎಂದು ನಂಬಿದ್ದನ್ನು ರುಜುವಾತುಗೊಳಿಸಲು, ಸೀತೆಯನ್ನು ಅಗ್ನಿಪ್ರವೇಶ ಮಾಡುವಂತೆ, ಆ ಮೂಲಕ ಆಕೆಯ ನಿಷ್ಕಲ್ಮಶ ಭಾವನೆ ಹಾಗೂ ಚಾರಿತ್ರ್ಯವನ್ನು ವಿಶ್ವಕ್ಕೇ ಸಾಬೀತು ಮಾಡಲಿಕ್ಕಾಗಿಯೇ ಆದೇಶಿಸಿದಾಗ ಸೀತಾಮಾತೆ ಒಂದರೆಕ್ಷಣವೂ ಅಂಜದೆ ಅಗ್ನಿಪ್ರವೇಶ ಮಾಡುತ್ತಾಳೆ! ಅಗ್ನಿದೇವನು ಸೀತೆಯನ್ನು ಸಶರೀರವಾಗಿ ಎತ್ತಿಕೊಂಡು ಬಂದು ಶ್ರೀರಾಮನಿಗೆ ಸಮರ್ಪಿಸಿ ಆಕೆಯ ಪತಿವ್ರತಾ ಧರ್ಮವನ್ನು ಕೊಂಡಾಡಿ ಹರಸಿ ಕಳಿಸುತ್ತಾನೆ. (ಆಗ ಲಕ್ಷ್ಮಣನೂ ಅಲ್ಲಿದ್ದವನೇ!)

ಮೊದಲಿನ ಕಥೆ ಇಷ್ಟು ಘಟಿಸಿದ್ದನ್ನು ಲಕ್ಷ್ಮಣ ಕಂಡಿದ್ದಾನೆ. ಅಗಸನ ಚುಚ್ಚುಮಾತನ್ನು ಅಲ್ಲಗಳೆಯದೆ ಶ್ರೀರಾಮ ಆತನನ್ನೇ ಪುನಃ ಆಸ್ಥಾನಕ್ಕೆ ಕರೆಸಿ ಸರ್ವಸದಸ್ಯರೆದುರು ಹಿಂದೆ ಹೇಗೆ ಸೀತೆಯನ್ನು ಅಗ್ನಿಪ್ರವೇಶ ಮಾಡುವಂತೆ ಆದೇಶಿಸಿ ಪರೀಕ್ಷೆಗೆ ಒಳಪಡಿಸಿದ್ದನೋ ಈಗಲೂ ಹಾಗೆಯೇ ಆಸ್ಥಾನದಲ್ಲಿ ಅಗಸನ ಎದುರೇ ಆಜ್ಞಾಪಿಸಿ ಪರೀಕ್ಷಿಸಬಹುದಿತ್ತು. ಅದನ್ನೂ ಮಾಡಲಿಲ್ಲ! ಗರ್ಭಿಣಿ ಸ್ತ್ರೀಯನ್ನು ಕಾಡಿಗೆ ಅಟ್ಟುವ ಶಿಕ್ಷೆಯೇ ತನ್ನ ಆಡಳಿತದ 'ಪರಮಧರ್ಮ'ವೆಂದು ತೀರ್ಮಾನಿಸಿ ನೀಡಿದ್ದು, ಈ ಘಟನೆ ಇಡೀ ರಾಮಾಯಣ ಕಾವ್ಯದ ಅತ್ಯಂತ ಚರ್ಚಾಸ್ಪದ ವಿಷಯವಾಗಿ, ಇಂದಿಗೂ ವಾದಗ್ರಸ್ತ ಪ್ರಸಂಗವಾಗಿ ಚಿಂತಕರನ್ನು, ಪ್ರಜ್ಞಾವಂತರನ್ನು ಕಾಡಿಸುತ್ತಲೇ ಇದೆ. (ಕುರುಡರು ಆನೆಯನ್ನು ಮುಟ್ಟಿ ತೀರ್ಮಾನಿಸಿ ಕಾಲನ್ನೇ ಆನೆಯೆಂದು ಭ್ರಮಿಸಿದಂತೆ ಇದಲ್ಲ!)

ಪ್ರಾಯಶಃ ವಾಲ್ಮೀಕಿ ವಿರಚಿತ ಈ ಕಾವ್ಯವಸ್ತು ಮೇಲೆ ಹೇಳಿದ್ದ ರೂಪದಲ್ಲಿ ರಚಿಸಿದ್ದೇ ಆಗಿದ್ದರೆ ಲವಕುಶರ ಜನ್ಮವೃತ್ತಾಂತ ಮತ್ತೊಂದು ದಿಕ್ಕಿನಲ್ಲಿ ಉದ್ಭೂತಗೊಂಡ ಕಥಾವಸ್ತುವಿನ ಹರವು ಹರಿದುಹೋಗುತ್ತಿತ್ತು. ಇದು ನಿಜವೇ. ಆಗಲೂ ಶ್ರೀರಾಮ ಲೋಕಮಾನ್ಯ ವ್ಯಕ್ತಿಯಾಗುತ್ತಿದ್ದ. ಆದರೆ ವಾಲ್ಮೀಕಿ ಮುನಿಯ ವಿರಚಿತ ಕಾವ್ಯ ಆತನ ಕಲ್ಪನಾ ಕೌಶಲ್ಯದಲ್ಲಿ ಸೀತೆಯ ವಿಯೋಗ, ರಾಮನ ವಿರಹ ದುಃಖ ಬಣ್ಣಿಸುವುದಿತ್ತು. ಹಾಗೆ ವಿವೇಚಿಸಿದಲ್ಲಿ ಪುರಾಣ, ಮಹಾಕಾವ್ಯಗಳ ಕಥೆಗಳ ಬಗೆಗೆ ವೈಜ್ಞಾನಿಕ ದೃಷ್ಟಿಕೋನದಿಂದ ವಿಮರ್ಶಿಸುತ್ತ ಹೋದಂತೆಲ್ಲ ಹತ್ತಾರು ಪ್ರಶ್ನಾರ್ಹವಾದ, ಅಷ್ಟೇ ಶಂಕಾಸ್ಪದವಾದ ಘಟನೆಗಳನ್ನು ಎತ್ತಿ ತೋರಿಸುತ್ತ ಬಂದಿರುವ ಉದಾಹರಣೆಗಳಿವೆ. ಎಷ್ಟಾದರೂ ನಂಬಿಕೆ-ನೀತಿ-ಭಕ್ತಿ-ಸತ್ಯಸಂಧತೆ ಇವೇ ವಿಶೇಷತಃ ಭಾರತೀಯರು ಕಂಡುಂಡ ಶ್ರೇಷ್ಠ ಮಾನವೀಯಮೌಲ್ಯಗಳು ಎಂಬ ಕಾರಣಕ್ಕಾಗಿ, ಚರ್ಚೆಗೆ – ತರ್ಕಬದ್ಧ ವಿಚಾರವಂತಿಕೆಗೆ – ತಕ್ಕ ಉತ್ತರ ಕೇಳಬಾರದೆಂದು ಪ್ರತಿಭಟಿಸುವ ಅಧ್ಯಾತ್ಮಪ್ರಿಯ ವರ್ಗದವರು ಈಗಲೂ ಸಾಕಷ್ಟಿದ್ದಾರೆಂಬುದನ್ನಿಲ್ಲಿ ಗಮನಿಸಬೇಕು.

ಇಷ್ಟಕ್ಕೂ ಪುರಾಣ ಕತೆಗಳಲ್ಲಿ ಶಂಕೆ, ತರ್ಕ, ಅಪ್ರಬುದ್ಧ ವಿಚಾರಧಾರೆಗಳು ಸಾಕಷ್ಟು ಪ್ರಜ್ಞಾವಂತರನ್ನು ದಿಕ್ಕು ತಪ್ಪಿಸುವಲ್ಲಿ ಯಶಸ್ವಿಯಾಗಿವೆ. ನಮ್ಮ ಅನುಕಂಪಧಾರಾ ಬುದ್ಧಿಗೆ ಥಕ್ಕನೆ ಸಿಗುವ ಪಾತ್ರಗಳಲ್ಲಿ ಸೀತೆಗೇ ಪ್ರಥಮ ಸ್ಥಾನ! ನಂತರ ದ್ರೌಪದಿ, ಗಾಂಧಾರಿ ಇತ್ಯಾದಿ. ಧರ್ಮನೀತಿ ನಿಯಮಗಳೇ, ಸತ್ಯ ಪ್ರಾಮಾಣಿಕತೆಯೇ ಬದುಕಿನ ಉತ್ತುಂಗ ಮೌಲ್ಯಗಳಾಗಿ ರೂಪಿಸಿಕೊಂಡ ವ್ಯಕ್ತಿ ವಾಸ್ತವದಲ್ಲಿ ಸುಖ-ಶಾಂತಿ-ಮುಕ್ತಿ ಮೂರನ್ನೂ ಭಕ್ತಿಯಿಂದಲೇ ಪಡೆಯಲು ಸಾಧ್ಯವಿದೆ ಎಂದು ಬೋಧಿಸಿವೆ/ಸುತ್ತಿವೆ. ಇದಂತೂ ಒಪ್ಪತಕ್ಕ (ಅನುಸರಣೆ ಸಾಧ್ಯವಿಲ್ಲ ಎಂದು ಸಾಬೀತಾಗಿದ್ದರೂ!) ವಿಷಯ. ವಿಪರ್ಯಾಸವೆಂಬಂತೆ ದೈವಭಕ್ತಿ-ಸತ್ಯ-ಅಹಿಂಸೆ ನೀತಿ-ಧರ್ಮ ಬೇಕೆನ್ನುವ ಅದೇ ಸಮಾಜದಲ್ಲಿ ಕಾಮುಕರು, ಧೂರ್ತರು, ಕಪಟಿಗಳು, ನಿರೀಕ್ಷಿತ ಮಟ್ಟಕ್ಕಿಂತ ಹೆಚ್ಚಿಲ್ಲವೆ? ಕಥೆಗಳಲ್ಲಿ ಚಿತ್ರಿತಗೊಳ್ಳುವ 'ಸ್ತ್ರೀ'ಗೆ ಆಕೆ ಕಾಮದ ಬೊಂಬೆಯಂತೆಯೋ ಆಧುನಿಕತೆಗೆ ಪಕ್ಕಾಗಿ ವರ್ತಿಸುವ ಧಾಟಿಯಿಲ್ಲವೆ? ದೃಶ್ಯಗಳಿಲ್ಲವೆ?

ಮತ್ತೊಂದು ಪ್ರಶ್ನೆ ಎಂದರೆ ಭಕ್ತಿರಸ ಪ್ರಧಾನವಾದ ಕಲೆಯ ಸಕಲ ಸೃಷ್ಟಿಧಾರೆ, ಅದು ನಾಟಕ, ಸಾಹಿತ್ಯ, ಪುರಾಣ, ಯಕ್ಷಗಾನ, ಸಂಗೀತ, ನಾಟ್ಯ, ಚಿತ್ರ, ಶಿಲ್ಪ, (ಸಿನಿಮಾದಲ್ಲೂ ಇದ್ದ ಕಾಲವೊಂದಿತ್ತು-ವಿಶೇಷತಃ ಕ್ರಿ.ಶ. ೧೯೪೦-೨೦೦೦ ದವರೆಗೆ) ಈ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳ ಸಹಿತ ಕಲಾ ಪ್ರಕಾರಗಳಲ್ಲಿ 'ದೇವರು-ಧರ್ಮ-ನೀತಿ' – ಈ ಮೂರು ಅಂಶಗಳು ಪ್ರಧಾನವಾಗಿ ಬಿಂಬಿಸಲು ಪ್ರಮುಖವಾದ ಕಾರಣವೆಂದರೆ ಜಾತೀಯತೆ- ಶೋಷಣೆ-ಲಿಂಗ ತಾರತಮ್ಯ-ಅಶಿಕ್ಷಿತತೆ-ಅಸಮಾನತೆ ಇವೇ ಆಗಿದ್ದನ್ನು ನಿರಾಕರಿಸುವಂತಿಲ್ಲ. ಆದರೆ ಅಧ್ಯಾತ್ಮದ ಹೆಸರಿನಲ್ಲಿ ಮುಕ್ತಿ ಮಾರ್ಗಕ್ಕಾಗಿ ಹಳೆಯ ತಲೆಮಾರಿನವರು ಬರೆದಿದ್ದು- ಹೇಳಿದ್ದು-ಪ್ರಚುರಪಡಿಸಿದ್ದು ಎಂಬ ಒಂದೇ ಕಾರಣಕ್ಕಾಗಿ ಏಕೆ ಒಪ್ಪಬೇಕು? ಪ್ರಾಚೀನ ಪುರಾಣ ಕತೆಗಳ ಬಗ್ಗೆ ಸಹಜವಾಗಿ ಉದ್ಭವಿಸಬಹುದಾದ ಶಂಕೆಯ ಪ್ರಶ್ನೆಗಳನ್ನೇ ಕೇಳಬಾರದು; ಅದು 'ನಾಸ್ತಿಕವಾದ' ಎಂದು ಹಣೆಪಟ್ಟಿ ಅಂಟಿಸಿ ದೂಷಿಸುವುದರಲ್ಲಿ ಇಷ್ಟೇನಾ ಪುರುಷಾರ್ಥದ ಕೆಲಸ ಎಂದೆನಿಸುತ್ತದೆ.

ಬದುಕಲ್ಲಿ ಆದರ್ಶಕ್ಕೆ 'ಶ್ರೀರಾಮನು' ಭಾರತೀಯರಲ್ಲಿ, ವಿಶೇಷತಃ ಹಿಂದೂ ಸಂಪ್ರದಾಯಸ್ಥರಲ್ಲಿ 'ಸುಯೋಗ್ಯ ವ್ಯಕ್ತಿ' – ಎಂದು ಆರಾಧಿಸುವವರಿದ್ದಾರೆ. ಅವನನ್ನು ಹಾಗೂ ಶ್ರೀಕೃಷ್ಣನನ್ನು ದೇವರೆಂದು ನಂಬಿ ಪೂಜಿಸುವುದೂ ಉಂಟು. ಸ್ತ್ರೀ ಸಮಾಜಕ್ಕೆ ಸೀತೆ ಕಳಶಪ್ರಾಯಳಾಗಿ ಶೋಭಿಸುವ ಆದರ್ಶ ನಾರೀಮಣಿ ಎಂದು ಆರಾಧಿಸುವ ಹೆಂಗಸರಿದ್ದಾರೆ. ಹೀಗೆ ನಂಬಿದ ಸ್ತ್ರೀಯರು ಗಂಡಸರ ವರ್ತನೆಯನ್ನು ಪ್ರಶ್ನಿಸಿದ ನಿದರ್ಶನಗಳು ನಮ್ಮ ಆಧುನಿಕ ಭಾರತದಲ್ಲಿ ಎಷ್ಟಿವೆ? ಪುರಾಣ ಕತೆಗಳ ಬಗ್ಗೆ, ಅಲ್ಲಿನ ಪಾತ್ರವರ್ಗದವರ ನೀತಿ ನಡಾವಳಿ ಬಗ್ಗೆ, ನಡೆಸಿದ ವರ್ತನೆಗಳ ಬಗ್ಗೆ ಇದುವರೆಗೆ ನಡೆದಷ್ಟು ಚರ್ಚೆ-ವಿಚರ್ಚೆ-ವಾದ-ವಾಗ್ವಾದ, ಬರಹ-ಅಭಿನಯ, ಗೀತ, ಸಂಗೀತ, ಚಿತ್ರ, ಶಿಲ್ಪ, ನಾಟ್ಯ ಇವುಗಳಲ್ಲೆಲ್ಲ ಬಿಂಬಿಸಿದ ವಿಷಯ ವಿಸ್ತಾರ ಅನಂತಕಾಲವೂ ನಮ್ಮ ಯಾವುದೇ ಕ್ಷೇತ್ರಗಳಲ್ಲೂ ನಡೆದ/ನಡೆಸಿದ ದಾಖಲೆಗಳೇ ಇಲ್ಲ ಎಂಬುದೇ ಆನಂದಾಶ್ಚರ್ಯದ ಸಂಗತಿ ಎಂದು ಒಪ್ಪಬಹುದು. ಭಾರತೀಯ ಮಹಾಕಾವ್ಯ, ಪುರಾಣ ಕಥೆಗಳ ಬಗೆಗಿನ ಚರ್ಚೆ-ತೀರ್ಪಿಗೆ ಕೊನೆ-ಮೊದಲಿಲ್ಲ. ಇದು ಅಸಾಧ್ಯ, ತಾತ್ಕಾಲಿಕ ಚಿಂತನೆಗಷ್ಟೇ ಸೀಮಿತ.

ಆದರೆ ಅದೇ ಪುರಾಣ ಸ್ತ್ರೀಯರ ವಿಶೇಷತಃ ರಾಮಾಯಣ, ಮಹಾಭಾರತ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರದ ಬಗೆಗೆ ಅಥವಾ ಆ ಕಥೆಗಳ ಹುಟ್ಟಿನ ಬಗೆಗೂ, ಬೆಳವಣಿಗೆಯಲ್ಲಿ ಬಿಂಬಿಸಿ ಸ್ಥಾಪಿಸಿದ ವಿಶ್ವಾಸದ ನೆಲೆಗಳಲ್ಲೆಲ್ಲ ತರ್ಕರಹಿತವಾಗಿ ಪ್ರಾಂಜಲ ಬುದ್ಧಿಯಿಂದ ನಂಬುವಷ್ಟು ಈ ಪಾತ್ರಗಳ ಸೃಷ್ಟಿ ಕೌಶಲ್ಯ ನಡೆದಿದ್ದು ಎಷ್ಟರಮಟ್ಟಿಗೆ ಸತ್ಯಕ್ಕೆ ಸಮೀಪದ್ದು ಎಂಬ ಪ್ರಶ್ನೆಯೇ ದಿಗಿಲೆಬ್ಬಿಸುತ್ತಿದೆ. ಚರ್ಚೆ ಕೊನೆಗೂ ಅಪರಿಹಾರ್ಯದ್ದೇ ಗಾಳಿಗುದ್ದಾಟ ಆಗುವಷ್ಟು ನಾವು 'ಭಕ್ತಿ'ಯ ಹೆಸರಲ್ಲಿ ತರ್ಕಾತೀತವಾಗಿ ಭೀತಿಯಲ್ಲಿ ನಮಗೆ ಎಲ್ಲಿ ನರಕ ಕಾದಿದೆಯೋ, ಪ್ರಾಪ್ತಿಯಾಗುತ್ತದೋ ಎಂಬ ಕುತಾರ್ಕಿಕ ಸಿದ್ಧಾಂತಗಳಲ್ಲೇ ನಾವು ಕಾಲ ಕಳೆಯುತ್ತ ಭ್ರಮಿಷ್ಟರಾಗಿ ಉಳಿದುಬಿಡುತ್ತೇವೆ.

ಬಿ. ಪಿ. ಶಿವಾನಂದರಾವ್
ನಂ. ೨೯, 'ಐಶ್ವರ್ಯಮ್', ಡಿಫೆನ್ಸ್ ಕಾಲನಿ, ಸಹಕಾರನಗರ, ಬೆಂಗಳೂರು - ೫೬೦ ೦೯೨



ನಮ್ಮ ಪರಮನನ್ನು ಕೆಲವೊಮ್ಮೆ ಬೇಕಾದ ಬೇಡವಾದ ಸಮಸ್ಯೆಗಳು ಕಾಡಿಸ ತೊಡಗುತ್ತವೆ. ಆಗೆಲ್ಲ ಆತ ಓಡುವುದು ಆತನ ಗುರುಗಳಾದ ಡಾ॥ ಪುಟ್‌ಬುದ್ಧಿಯ ಬಳಿಗೆ.

''ಗುರುಗಳೇ ನಂದೊಂದು ಜಿಗ್ನಾಸೆ !''

''ಏನ್ ಮಾರಾಯ ನಿನ್ ಜಿಜ್ಞಾಸೆ. ತಗೊ ಒಂದ್ ಗುಟುಕು ಕಾಫಿ. ಗಡಿಬಿಡಿ ಮಾಡಿಕಾಬ್ಯಾಡ...''

''ಈ ಸಡ್ಯಂತ್ರ ಅಂತಾರಲ್ಲ ಏನು ಅಂಗಂದ್ರೆ ?''

''ಥೂ ನಿನ್ ಉಚ್ಚಾರ್ಣೆ ಇಂಪ್ರೂವೇ ಆಗ್ಲಿಲ್ವಲ್ಲ! ಅದು ಷಡ್ಯಂತ್ರ ಅಂತ. ಅದ್ರಿಂದ ನಿನಗಾದ ನಷ್ಟ ಏನೂಂತ ?''

''ನೀವೇ ಏಳಿದ್ದೀರಲ್ಲ ನನ್ ಐಕ್ಯೂ ಬಾಳಾ ಕಡಿಮೆ ಅಂತ...''

''ಆಯ್ತು ಆಯ್ತು... ಷಡ್ಯಂತ್ರ ಅಂದ್ರೆ ಆರು ಯಂತ್ರಗಳು. ಅಂದರೆ ಗೊತ್ತಾಯ್ತಲ್ಲ– ಆರು ತಾಯಿತಗಳು !''

ಪರಮನಿಗೆ ಬೆರಗೋ ಬೆರಗು! ''ಅಯ್ಯೋ ಕುಂತ್ಯವ್ವಾ !'' ಎಂದ.

''ಆಗೋ ನಿನ್ ಐಕ್ಯೂ ಸೂಚ್ಯಂಕ ಏರ್ತಾ ಇದೇ ಅಂತಾಯ್ತು.




ಮಹಾಭಾರತದ ಅರಣ್ಯಪರ್ವದಲ್ಲಿ ಒಂದು ಪ್ರಸಂಗ ಬರುತ್ತೆ. ಒಂದಿನ ದ್ರೌಪದಿ 'ಯಾಕೋ ರಾತ್ರಿಯೆಲ್ಲ ಕೆಟ್ ಕನಸು ಅತ್ತೆಮ್ಮಾ... ನಿದ್ದೇನೆ ಬರ್ಲಿಲ್ಲ. ಆಯಾಸ ಆಗುತ್ತೆ' – ಅಂತ ಅತ್ತೆ ಕುಂತಿಯಲ್ಲಿ ಹೇಳಿಕೊಳ್ಳುತ್ತಾಳೆ. ಆಗ ಕುಂತಿ ಆರು ತಾಯಿತಗಳನ್ನು ಮಂತ್ರಿಸಿ ದ್ರೌಪದಿಯ ತೋಳಿಗೆ ಕಟ್ಟಿ ಇನ್ನುಮೇಲೆ ಕೆಟ್ಟ ಸ್ವಪ್ನಗಳ ಭಯವಿಲ್ಲ ಎಂದು ಧೈರ್ಯ ಹೇಳುತ್ತಾಳೆ !''

''ಗುರುಗಳೇ ಸಟೀಗ್ ದೇವ್ರಾಗಿ ! ಒಂದೇ ಯಂತ್ರ ಕೊಟ್ಟಿದ್ರೆ ಸಾಕಾಗ್ತಿರ್ಲಿಲ್ವೆ ?''

''ಅದಕ್ಕೆ ಕಣೋ ಸ್ವಲ್ಪ ಮಹಾಭಾರತ ಓದ್ಕೋ ಅಂತ ಬಡ್ಕೊಂಡದ್ದು!''

''ನಿಮ್ ಮಾತ್ಗೇ ಬರ್ತೀನಿ. ಐದ್ ಕೆಟ್ ಸ್ವಪ್ನ ಅಂದ್ರೆ ಪಂಚ್ ಪಾಂಡವರು. ಕುಂತಿ ಆರು ಯಂತ್ರ ಕೊಟ್ಟಿದ್ಯಾಕೆ ?''

ಗುರುಗಳಿಗೆ ಬಂತು ಕೋಪ. ''ಈಡಿಯೆಟ್.. ಪಂಚ ಪಾಂಡವರು ಸರಿ. ಕುಂತಿಗೆ ಹಿರೀ ಮಗ ಕರ್ಣ ಇಲ್ವೇ !''

ಗುರುಗಳು ತಮಾಷೆ ಮಾಡುತ್ತಿರಬಹುದು ಎಂಬ ಅನುಮಾನ ಪರಮನಿಗೆ.

''ನೋಡಯ್ಯ ಪರಮ, ಸಂಸ್ಕೃತದಲ್ಲಿ ಒಂದು ಸೂಕ್ತಿ ಇದೆ 'ಷಡ್ಯಂತ್ರ್ ಕೌನ್ ರಚಾತಾ ಹೈ ವಹೀ ಉಸ್ಕಾ ಬಲಿ ಹೋತಾಹೈ.' ಅನ್ನೋ ಮಾತು ಗುಂಡೋಪಖ್ಯಾನದಲ್ಲಿ ಬರುತ್ತೆ. ಅಂದ್ರೇನು ಗೊತ್ತಾಯ್ತೋ? ಯಾರು ಷಡ್ಯಂತ್ರದ ಮೊರೆ ಹೋಗುತ್ತಾರೋ ಅವರೇ ಆ ಷಡ್ಯಂತ್ರಕ್ಕೆ ಬಲಿಯಾಗುತ್ತಾರೆ ಅಂತ. ಅವೆಲ್ಲ ನಿಂಗೆಲ್ಲಯ್ಯ ಗೊತ್ತಾಗುತ್ತೆ! ನೀನೊಬ್ಬ ಮಡಯ... ಅದಕ್ಕೆ ಸ್ವಲ್ಪ ಸಂಸ್ಕೃತ ಕಲಿಯೋ ಅಂದದ್ದು...''

''ಏ ತಡೀರಿ ಗುರುಗಳೇ. ಇದ್ಯಾವ ಸೀಮೆ ಸಂಸ್ಕೃತ ?''

''ಸದ್ಯ ಮಾರಾಯ ಇದನ್ನ ಲ್ಯಾಟಿನ್ ಅನ್ಲಿಲ್ವಲ್ಲ!''

''ನಾನಂದದ್ದು ಅಂಗಲ್ಲ, ನಾನೂ ಬೇಕಾದಷ್ಟು ಹಿಂದಿ ಸಿನಿಮಾ ನೋಡಿದ್ದೀನಿ. ನಿಮ್ಮ ಮಾತು ಹಿಂದಿ ತರಾ ಅನ್ನಿಸ್ತು...''

''ಆದ್ರೂ ಪಾಕ್ಡಾ ಕಣಯ್ಯ ಪರಮ ನೀನು! ತಿರುಗಿ ಮಹಾಭಾರತಕ್ಕೆ ಹೋಗೋಣ. ಅರಗಿನರಮನೆ ವಿಷಯ ಗೊತ್ತಲ್ಲ, ದುರ್ಯೋಧನ ಏನ್ಮಾಡ್ತಾನೆ... ಮಯನ್ನ ಕರೆಸಿ ಒಂದು ಮಾಯದ ಅರಮನೆ ಕಟ್ಟಿಸ್ತಾನೆ. ಪಾಂಡವರು ಅದರಲ್ಲಿ ವಾಸವಿರುವಂತೆ ಅವರ ಮನ ಒಲಿಸುತ್ತಾನೆ. ವಾಸವಿರುವಾಗ ಅದಕ್ಕೆ ಬೆಂಕಿಹಚ್ಚಿ ಅವರನ್ನು ಇಡೀಯಾಗಿ ದಹಿಸಿಬಿಡುವ ತಂತ್ರ ಹೂಡುತ್ತಾನೆ. ಇದನ್ನೇ ಷಡ್ಯಂತ್ರ ಅನ್ನೋದು ! ಅಂದ್ರೇನು, ಇದು ಎದುರಾಳಿಗಳನ್ನು ನಿರ್ನಾಮಗೊಳಿಸಲು ಹೂಡುವ ತಂತ್ರ. ಇದನ್ನು ಸಂಚು ಅಂತಲೂ ಅಂತಾರೆ. ಗೊತ್ತಾಯ್ತೇನಯ್ಯ !''

''ಸ್ವಲ್ಪ ಗೊತ್ತಾಯ್ತು, ಸ್ವಲ್ಪ ಗೊತ್ತಾಗ್ಲಿಲ್ಲ!''

''ಅದನ್ನೇ ದ್ವಂದ್ವ ಅನ್ನೋದು ! ಈ ದ್ವಂದ್ವ ಇಷ್ಟೆಲ್ಲ ಭಾರಿ ಗೊಂದಲದಲ್ಲಿ ಬೀಳಿಸಿಬಿಡುತ್ತೆ.''

''ಈಗ ಷಡ್ಯಂತ್ರ ಎಲ್ಲಿದೆ ? ರಾಮಾಯಣ ಮಹಾಭಾರತದ ಕಾಲದಲ್ಲಿ ಮಾತ್ರ ಇತ್ತೆ ?''

''ಗುಡ್ ಕ್ವಶ್ಚನ್ ! ಈಗ ಷಡ್ಯಂತ್ರ ತಲೆಗೇರಿಸಿಕೊಂಡಿರುವವರು ಸರಕಾರಿ ಜನ. ನಮ್ಮ ಬಿಜೆಪಿಯವರು ಅಧಿಕಾರಕ್ಕೆ ಬಂದಮೇಲೆ ಷಡ್ಯಂತ್ರವನ್ನು ಅಂಗೀಕರಿಸಿ ಅಧಿಕೃತಗೊಳಿಸಿದ್ದಾರೆ ಎನ್ನಬಹುದು. 'ಸೆಂಟರ್ ಫಾರ್ ಷಡ್ಯಂತ್ರ ಸ್ಟಡೀಸ್'ನ ವರದಿ ಪ್ರಕಾರ, ನಮ್ಮ ಮುಖ್ಯಮಂತ್ರಿ ಯಡಿಯೂರಪ್ಪನವರು ಈ ಶಬ್ದವನ್ನು ಹೆಚ್ಚುಬಾರಿ ಉಪಯೋಗಿಸಿ ಚಲಾವಣೆಗೊಳಿಸಿದವರ ಪಟ್ಟಿಯಲ್ಲಿ ಮೊದಲಿಗರಾಗಿದ್ದಾರೆ. ಉದಾಹರಣೆಗೆ, ವಿರೋಧಪಕ್ಷದವರು ಸದನದಲ್ಲಿ ಕೇಳುವ ಪ್ರಶ್ನೆಗಳು ಸರಕಾರಕ್ಕೆ ಇರಸುಮುರಸು ಎನ್ನಿಸಿದರೆ ಕೂಡಲೇ ಆಡಳಿತ ಪಕ್ಷ ಅದಕ್ಕೆ ಷಡ್ಯಂತ್ರದ ಮುದ್ರೆ ಒತ್ತಿಬಿಡುತ್ತೆ! ಬಾಸ್ ಹೇಳಿದ ಮೇಲೆ ಮಂತ್ರಿವರ್ಯರೂ ಅವರನ್ನು ಅನುಸರಿಸಬೇಕಲ್ಲ! ಇಂಟೆಲಿಜೆನ್ಸ್ ರಿಪೋರ್ಟ್ ಪ್ರಕಾರ, ಮುಂಗಾರು ಮಳೆಬಾರದೆ ಉಂಟಾಗಿರುವ ವಿದ್ಯುತ್ ಕೊರತೆಗೆ ಇಟಲಿ ಮೂಲದವರೇ ಮಾಡಿರುವ ವಿದ್ಯುತ್ ಷಡ್ಯಂತ್ರವೇ ಕಾರಣವಂತೆ ! ಅಷ್ಟು ಮಾತ್ರವಲ್ಲ, ಇತ್ತೀಚೆಗೆ ಯಡಿಯೂರಪ್ಪನವರು ಕನಸಿನಲ್ಲಿ ಷಡ್ಯಂತ್ರ ಷಡ್ಯಂತ್ರ ಎಂದು ಹತ್ತಾರು ಸಲ ಪೇಚಾಡಿಕೊಳ್ಳುತ್ತಾರಂತೆ...''

''ಹೇ ಹೇ...'' ಎಂದು ಪರಮ ಹ್ಯಾಪನಗೆ ನಕ್ಕ. ಅದು ಗುರುಗಳು ನೀಡಿದ ವಿವರಣೆಗೆ ಸೂಚಿಸಿದ ಮೆಚ್ಚುಗೆ ಎಂದೇ ಭಾವಿಸಬಹುದು.

''ಯಡಿಯೂರಪ್ಪನವರು ಶೋಭಾ ಕರಂದ್ಲಾಜೆ ಮತ್ತು ಸೋಮಣ್ಣನವರನ್ನು ಮಂತ್ರಿ ಮಾಡಬೇಕೆಂದು ತುದಿಗಾಲಿನಲ್ಲಿ ನಿಂತಿದ್ದಾರೆ ಎಂದಿಟ್ಟುಕೋ, ಈ ಆರೆಸ್ಸೆಸ್ ವರಿಷ್ಠರು, ಶ್ರೀಮಾನ್ ಗಡಕರಿ ಮುಂತಾದ ಬಿಜೆಪಿ ವರಿಷ್ಠರು ಯಡಿಯೂರಪ್ಪನವರ ಮಹದಾಸೆಗೆ ತಣ್ಣೀರೆರಚಬೇಕೆ ! ಅದು ಅವರು ಮಾಡಿದ ಷಡ್ಯಂತ್ರ !''

ಬೀರಣ್ಣ

''ಓ ಅರ್ಥವಾಯ್ತು. ಷಡ್ಯಂತ್ರವನ್ನು ವಿರೋಧ ಪಕ್ಷದವರೇ ಮಾಡಬೇಕಾಗಿಲ್ಲ. ಸ್ವಂತ ಪರಿವಾರದವರೂ ಮಾಡಬಹುದು ಅಂತ.''

''ಪ್ರಾಚೀನ ಸಾಹಿತ್ಯ ಓದ್ಕೋಬೇಕಾಗಿತ್ತು ನೀನು. ಷಡ್ಯಂತ್ರದ ವಾಸನೆ ಇಲ್ಲದೆ ಯಾವ ಸಾಹಿತ್ಯವೂ ಇಲ್ಲ...''

''ಇನ್ನೂ ಒಂದ್ವಿಷ್ಯ ಗೊತ್ತಾಯ್ತು ಗುರುಗಳೆ! ಅರ್ಜುನ ತನ್ನ ಬಂಧು-ಬಳಗದವರನ್ನು, ಗುರು-ಹಿರಿಯರನ್ನು ಕೊಲ್ಲಬೇಕಾಗುತ್ತೆ. ಅದ್ರಿಂದ ನಾನು ಬಿಲ್‌ಕುಲ್ ಯುದ್ಧ ಮಾಡೊಲ್ಲ ಅಂತ ಮೊಂಡು ಹಿಡಿಯುತ್ತಾನೆ. ಆಗ ನೋಡಿ ಕೃಷ್ಣ ಪರಮಾತ್ಮ ಎಂಥಾ ಷಡ್ಯಂತ್ರ ಮಾಡ್ದ ಅಂತ! ಬೋಧಿಸಿದ್ನಲ್ಲಪ್ಪ ಭಗವದ್ಗೀತೇನ. ಆಗೇನಾಯ್ತು ಜೈ ಭಜರಂಗ ಬಲಿ ಅಂತ ಅರ್ಜುನ ಎದ್ನಿಂತ.''

''ಭೇಷ್ ಇದನ್ನೇ ವಿಮರ್ಶೆಯ ಒಳನೋಟ ಅನ್ನೋದು!'' ಬಹಳ ಇಂಪ್ರೂವ್ ಆಗಿದ್ದೀ ಕಣಯ್ಯ!''

''ಗುರುಗಳೇ ನಾವ್ ನಡೀತಾ ಇರೂವಾಗ ಕಾಲು ಎಡವಿ ಬೆರಳಿಗೆ ನೋವಾಗುತ್ತೆ. ಆಗ ಷಡ್ಯಂತ್ರ ಯಾರ್ದು? ಬೆರಳಿಂದೋ, ಅದಕ್ಕೆ ತಾಗಿದ ಕಲ್ಲಿಂದೋ?''

''ಗುರುವನ್ನು ಮೀರಿಸಿದೆ ಕಣಯ್ಯ''

''ಗುರುಗಳೇ ನಂದು ಇನ್ನೂ ಒಂದ್ ಡೌಟು! ಈ ಷಡ್ಯಂತ್ರವನ್ನು ಯಾರು ಯಾರ ಮೇಲೆ, ಯಾವಾಗ ಬಳಸಬಹುದು. ಇದರ ನೆಗೆಟಿವ್ ಮತ್ತು ಪಾಸಿಟಿವ್ ಪರಿಣಾಮಗಳೇನು?''

''ಓಹೋ... ಭಾರಿ ಸೆನ್ಸಿಟಿವ್ ಪ್ರಶ್ನೆ ಕಣಯ್ಯ ಇದು! ಕಾಂಗ್ರೆಸ್ಸಿನವರು ಹಿಡಿದ ಪಟ್ಟುಬಿಡದೆ ಗಣಗಣ ಅಂತ ಬೆಂಗಳೂರಿನಿಂದ ಬಳ್ಳಾರಿಯವರೆಗೆ ಪಾದಯಾತ್ರೆ ಮಾಡಿ ಜನಜಾಗೃತಿ ಉಂಟುಮಾಡಿದರೆ ಅದು ವಿರೋಧಪಕ್ಷದವರ ಷಡ್ಯಂತ್ರ! ಸರಕಾರದ ಪಾಲಿಗೆ ನೆಗೆಟಿವ್ ಪ್ರಕ್ರಿಯೆ! ಪ್ರತಿಯಾಗಿ ಕಾಂಗ್ರೆಸಿಗರು ಬಳ್ಳಾರಿಯ ಮೇಲೆ ಹಾಕಿರುವ ಕೆಟ್ಟದೃಷ್ಟಿಗೆ ಪರಿಹಾರವಾಗಿ ರೆಡ್ಡಿ ಸೋದರರು ದೊಡ್ಡ ಯಜ್ಞ ಮಾಡಿ ಸಂಸ್ಕೃತ ಶ್ಲೋಕಗಳನ್ನು ಮೈಕಿನ ಮೂಲಕ ಬಿತ್ತರಿಸಿದರೆ ಅದು ಜನರ ವಿರುದ್ಧ ನಡೆಸಿದ ಷಡ್ಯಂತ್ರ. ಯಜ್ಞದಲ್ಲಿ ಭಾಗವಹಿಸಿದ ಪುರೋಹಿತರ ಪಾಲಿಗೆ ಪಾಸಿಟಿವ್ ಪರಿಣಾಮ!''

''ಗುರುಗಳೇ ಮಂತ್ರಿಗಳ ಕಾರಿನ ಗೂಟ ಗಮನಿಸದೆ ಓವರ್‌ಟೇಕ್ ಮಾಡಿದ್ರೆ ಅದು ಯಾವ ಕ್ಯಾಟಗಿರಿಯ ಷಡ್ಯಂತ್ರವಾಗುತ್ತೆ?''

''ಭಾರಿ ಇಂಪ್ರೂವ್‌ಮೆಂಟ್ ಕಣಯ್ಯ ನಿಂದು!''

''ನಂಗೊಂದ್ ಐಡಿಯಾ ಗುರುಗಳೇ! ನನ್ ಸೈಕಲ್ಲೂ ಒಂದ್ ಗೂಟಾ ಹಾಕ್ಕಂಡ್ರೆ? ಆಗೇನಾಗುತ್ತೆ?''

''ಆಗ ಜನಸಾಮಾನ್ಯ, ಮಂತ್ರಿ ಸಮಾನರಾಗ್ತಾರಾ ಅಂತ ಕಾನೂನು ಪಂಡಿತರನ್ನು ಕೇಳ್ಬೇಕಾಗುತ್ತೆ!''

''ಗೊತ್ತಾಯ್ತು ಗುರುಗಳೆ, ನಿಮ್ ಕಾನೂನು ಜ್ಞಾನ ಅಷ್ಟಕ್ಕಷ್ಟೆ ಅಂತ! ಕೋಪಿಸ್ಕೋಬೇಡಿ ಸುಮ್ನೆ ತಮಾಷೆಗೆ...''

''ಹೋಗ್ಲಿ ಏನಾದ್ರು ತಲೆಗೆ ಹತ್ತಿತೇನಯ್ಯ!''

''ನೀವೇ ಹೇಳಿದ್ರಲ್ಲ ದ್ವಂದ್ವ ಅಂತ. ಈಗ ನನ್ ತಲೆಗೆ ಒಂದ್ವಿಷ್ಯ ಹೊಳೀತು ನೋಡಿ. ನಿಮ್ಮೇಲೇನೇ ಏನಾದ್ರೂ ಷಡ್ಯಂತ್ರ ಮಾಡಿದ್ರೆ ಹೆಂಗೆ ಅಂತ!''

ಬೀರಣ್ಣ

## ಹೈಕುಗಳು

ಆಕೆಗಿಷ್ಟ ಗುಲಾಬಿ;
ನನಗವಳ
ಗುಲಾಬಿಗೆನ್ನೆ!

* * *

ಬರಲಾಗದು ದೇವರಿಗೆ
ಬೀಗ ಹಾಕಿದೆ
ಗುಡಿಗೆ!

* * *

ಜೇನುಗಳೇ
ಜೋಪಾನ ಗೂಡು
ಕಿಚ್ಚಿಡುವ ಕೈಗಳಿವೆ!

* * *

ಚುಚ್ಚಿ ನೋಯಿಸದಿರಿ
ನೊಂದು ಸುಣ್ಣವಾಗಿದೆ
ಮನಸು!

* * *

ಆಸೆ
ಹಣ್ಣಾಗುವ ಮುಂಚೆಯೆ
ದೇಹ ಹಣ್ಣಾಗಿಬಿಡುತ್ತೆ!

* * *

ತಾಯಿ
ಭೂಮಿಗಿಂತ ಮಿಗಿಲು
ಹೊರಲಾರರು ಮಕ್ಕಳು!

* * *

ಕನಸುಗಳು
ನಿರಾಸೆ ತರುತ್ತವೆ
ನನಸಾಗದೆ!

* * *

ಎಲ್ಲರೂ ಆಗುತ್ತಾರೆ
ಬೆತ್ತಲು;
ಭಾಗ್ಯಶಾಲಿ ಬಚ್ಚಲು!

* * *

ಕನಸಿಗೆ
ಜೀವ ತುಂಬುವ ಗೆಳತಿ
ಬಾ ನನಸಿಗೆ!

* * *

ಇಷ್ಟಗಲದ ಕಣ್ಣಲ್ಲಿ
ಅಷ್ಟೊಂದು ಕಂಬನಿ
ಎಲ್ಲಿತ್ತೋ!

* * *

ಸೇರಿದ್ದೇ ತಪ್ಪಾಯಿತು
ನದಿ ಕಡಲಾಗಿ
ಉಪ್ಪಾಯಿತು!

* * *



೧೮೫೭ರ ಪ್ರಥಮ ಸ್ವಾತಂತ್ರ್ಯ ಮಹಾ ಸಂಗ್ರಾಮದ ೧೫೦ನೆಯ ವರ್ಷಾಚರಣೆಯ ಶುಭ ಸಂದರ್ಭದಲ್ಲಿ ಡಾ॥ ಬಸವರಾಜ ನಾಯ್ಕರವರು ನರಗುಂದ ಬಂಡಾಯವನ್ನು ಕುರಿತು 'ಸ್ವಾತಂತ್ರ್ಯದ ಕನಸುಗಾರ' ಎಂಬ ರಂಗನಾಟಕವನ್ನು ರಚಿಸುವ ಮೂಲಕ ಸ್ವಾತಂತ್ರ್ಯಯೋಧರಿಗೆಲ್ಲ ನುಡಿನಮನ ಸಲ್ಲಿಸಿರುವುದು ಅತ್ಯಂತ ಸೂಕ್ತವಾಗಿದೆ. ನರಗುಂದ ಸಂಸ್ಥಾನದ ದೊರೆ ಭಾಸ್ಕರರಾಯ ಭಾವೆಯವರ ದಂಡನಾಯಕರಾಗಿ ಅರಮನೆಯ ಸಂರಕ್ಷಣೆಯಲ್ಲಿಯೇ ಬ್ರಿಟಿಷರ ಗುಂಡಿಗೆ ಬಲಿಯಾದ ವೀರಭದ್ರನಾಯಕ ಡಾ॥ ಬಸವರಾಜ ನಾಯ್ಕರವರ ಮುತ್ತಜ್ಜ. ಈ ನಾಯ್ಕರ ಪೂರ್ವಜರು ಕೆಳದಿಯ ಶಿವಪ್ಪನಾಯಕನ ವಂಶದವರೂ ಹೌದು. ಹೀಗಾಗಿ ತಮ್ಮ ಪೂರ್ವಜರ ಸ್ವಾಮಿನಿಷ್ಠೆ, ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ, ನಾಡ ಗೌರವಗಳೂ ಬಳುವಳಿಯಾಗಿ ಬಂದು 'ಸ್ವಾತಂತ್ರ್ಯದ ಕನಸುಗಾರ'ನನ್ನು ಸೃಷ್ಟಿಸಿರುವುದು ನಿಜಕ್ಕೂ ಹೆಮ್ಮೆಯ ಸಂಗತಿ. ಈ ದಿಶೆಯಲ್ಲಿ ಈ ಐತಿಹಾಸಿಕ ನಾಟಕವೊಂದು ಮೈಲುಗಲ್ಲು.

**ಡಾ॥ ಮಹಾಲಿಂಗ ಯಾಳಗಿ**

# ಸ್ವಾತಂತ್ರ್ಯದ ಕನಸುಗಾರ: ಒಂದು ಅವಲೋಕನ



"ಇತಿಹಾಸವನ್ನು ಮರೆತವರು ಇತಿಹಾಸ ನಿರ್ಮಿಸ ಲಾರರು" ಎಂದು ಡಾ॥ ಬಿ. ಆರ್. ಅಂಬೇಡ್ಕರ್‌ರವರು ಸಾರಿದ್ದು ಇಂದಿಗೂ ಸತ್ಯ. ಮುಂದೆಯೂ ಸತ್ಯವೇ. ಇತಿಹಾಸ ವೆನ್ನುವುದು ಕೇವಲ ಗತಕಾಲಕ್ಕೆ ನಿಷ್ಠವಾಗಿ ಉಳಿಯದೆ, ವರ್ತಮಾನಕ್ಕೂ ನಿಷ್ಠವಾಗಿ ಬೆಳೆದಾಗ ಅದು ಭವಿಷ್ಯತ್ತಿ ನಲ್ಲಿಯೂ ಬೆಳಗಬಲ್ಲುದು. ಐತಿಹಾಸಿಕ ಪ್ರಜ್ಞೆ ಇಲ್ಲದ ನಾಡಿಗೆ, ದೇಶಕ್ಕೆ, ರಾಷ್ಟ್ರಕ್ಕೆ ಭವಿಷ್ಯವೇ ಇಲ್ಲ. ಇತಿಹಾಸ ಪ್ರಜ್ಞೆ, ಚಾರಿತ್ರಿಕ ದೃಷ್ಟಿ, ನಾಡಿನ, ದೇಶದ, ರಾಷ್ಟ್ರದ ಉಜ್ವಲ ಭವಿಷ್ಯತ್ತಿಗೆ ನಾಂದಿ ಹಾಡಬಲ್ಲವು. ಇತಿಹಾಸ ಇತಿಹ್ರಾಸ ವಾಗದಂತೆ, ಚರಿತ್ರೆ ಕಟ್ಟುಕಥೆಯಾಗದಂತೆ ನೋಡಿಕೊಳ್ಳ ಬೇಕಾದುದು ಪ್ರತಿಯೊಬ್ಬ ನಾಗರಿಕನ ಆದ್ಯ ಕರ್ತವ್ಯ. ಒಂದು ವ್ಯಕ್ತಿಯ ಚರಿತ್ರೆ ಇತಿಹಾಸದ ಕಾಲಗರ್ಭದಲ್ಲಿ ಹೂಳಿಹೋಗದೆ ವರ್ತಮಾನ ಕಾಲಕ್ಕೆ ಸ್ಫೂರ್ತಿ, ಚೈತನ್ಯ ನೀಡಿ ಮಾರ್ಗ ದರ್ಶಕವಾಗಬೇಕು. ಭವಿಷ್ಯತ್ತಿನ ದಿಕ್ಸೂಚಿಯಾಗಬೇಕು.

ಈ ದಿಶೆಯಲ್ಲಿ ಈಗಾಗಲೇ ೧೮೫೭ರಲ್ಲಿ ಜರುಗಿದ 'ಸಿಪಾಯಿ ದಂಗೆ' ಭಾರತದ ಪ್ರಥಮ ಸ್ವಾತಂತ್ರ್ಯ ಸಮರವನ್ನು ಕುರಿತು ಅನೇಕ ಲೇಖಕರು ಸಾಹಿತ್ಯದ ವಿವಿಧ ಮುಖಗಳ ಮೂಲಕ 'ಕ್ಷ'-ಕಿರಣ ಬೀರಿದ್ದಾರೆ. ಒಂದೊಂದು ಕಿರಣವೂ ಆಯಾ ಕಾಲದ ಭಾರತೀಯರ ಸ್ವಾತಂತ್ರ್ಯ ಸಂಗ್ರಾಮದ ಪ್ರಜ್ವಲಿಸುವ ಪುಟಗಳು. ಈ ಸ್ವಾತಂತ್ರ್ಯದ ಕಿಡಿ ಇಡೀ ಭಾರತದ ತುಂಬ ವ್ಯಾಪಿಸಿತ್ತು. ಆದರೆ ಉತ್ತರ ಭಾರತಕ್ಕಿಂತಲೂ ಮೊದಲೇ ದಕ್ಷಿಣ ಭಾರತದಲ್ಲಿ 'ಸೂರ್ಯ ಮುಳುಗದ ಸಾಮ್ರಾಜ್ಯ'ವೆಂದು ಹೆಸರಾಗಿದ್ದ ಆಂಗ್ಲ ಪ್ರಭುತ್ವಕ್ಕೆ ರಾಹು-ಕೇತುಗಳಂತೆ ಅಡ್ಡಬಂದು ಆ ಪ್ರಜ್ವಲಿಸುವ ಸೂರ್ಯನನ್ನೇ ಮರೆಮಾಡಿದ್ದು ಐತಿಹಾಸಿಕ ಸತ್ಯ. ಅದರಲ್ಲಿ ಕರ್ನಾಟಕದ ಪಾತ್ರವಂತೂ ಅದ್ಭುತ, ಅಷ್ಟೇ ವೀರೋಚಿತ. ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಉತ್ತರ ಕರ್ನಾಟಕದ (ಅಂದು ಮುಂಬೈ ಕರ್ನಾಟಕ) ನರಗುಂದ ಬಂಡಾಯವು ತ್ಯಾಗ, ಪರಾಕ್ರಮ, ಸ್ವಾತಂತ್ರ್ಯಪ್ರೇಮಗಳ ರಕ್ತರಂಜಿತ ಸಂಪುಟ.

ಸ್ವಾತಂತ್ರ್ಯ ಸಂಗ್ರಾಮದ ಘಟನೆಗಳು ಅಂದು ರಾಜಕೀಯ ವಾಗಿದ್ದರೆ, ಇಂದು ಇತಿಹಾಸದ ಗರ್ಭಗುಡಿಯನ್ನು ಸೇರಿವೆ. ಸ್ವಾತಂತ್ರ್ಯಕ್ಕಾಗಿ ಅಂದು ರಕ್ತತರ್ಪಣ ಗೈದವರ ಸತ್ಯಕಥೆಗಳು ಜನಮನದಿಂದ ದೂರವಾಗುತ್ತಿರುವುದು ದುರದೃಷ್ಟಕರ. ಆದರೂ ಹಲವಾರು ವಿದ್ವಾಂಸರು ಆ ಕಾಲದಲ್ಲಿ ಜರುಗಿದ ಅಪೂರ್ವ ಘಟನೆಗಳನ್ನು ಅದ್ಭುತ ಸಂಗತಿಗಳನ್ನು ಚಾರಿತ್ರಿಕ, ಐತಿಹಾಸಿಕ ಸಂಶೋಧನೆಯ ಮೂಲಕ ತೋರಿಸಿಕೊಡುವ ಸಾಹಸ ಮಾಡಿದ್ದಾರೆ. ಇಂಥವರಲ್ಲಿ ಡಾ॥ ಬಸವರಾಜ ನಾಯ್ಕರವರೂ ಒಬ್ಬರು. ಕರ್ನಾಟಕ ವಿಶ್ವವಿದ್ಯಾಲಯ ದಲ್ಲಿ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿ, ಪ್ರಾಧ್ಯಾಪಕರಾಗಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿ ಅಂತರರಾಷ್ಟ್ರೀಯ ಮನ್ನಣೆ ಪಡೆದಿದ್ದಾರೆ. 'ದಿ ಸನ್ ಬಿಹೈಂಡ್ ದಿ ಕ್ಲೌಡ್' ಮತ್ತು 'ಲೈಟ್ ಇನ್ ದಿ ಹೌಸ್' ಎಂಬ ಕಾದಂಬರಿಗಳೇ ಅಲ್ಲದೆ 'ದಿ ಥೀಫ್ ಆಫ್ ನಾಗರಹಳ್ಳಿ' ಆ್ಯಂಡ್ ಅದರ್ ಸ್ಟೋರೀಸ್' ಮತ್ತು 'ದಿ ರೆಬೆಲಸ್ ರಾಣಿ ಆಫ್ ಬೆಳವಾಡಿ ಆ್ಯಂಡ್ ಅದರ್ ಸ್ಟೋರೀಸ್' ಎಂಬುವು ಡಾ॥ ನಾಯ್ಕರವರ ಸಾಹಿತ್ಯ ಕೃತಿಗಳು. ಇದರೊಂದಿಗೆ ಅನೇಕ ಬಾನುಲಿ ನಾಟಕಗಳನ್ನು ರಚಿಸಿದ್ದು, ಅವು ಧಾರವಾಡ ಹಾಗೂ ಗುಲಬರ್ಗಾ ಆಕಾಶವಾಣಿ ಕೇಂದ್ರಗಳಿಂದ ಬಿತ್ತರಗೊಂಡಿವೆ. ಇವರ 'ಜೋಗಿಭಾವಿ' ಎಂಬ ನಾಟಕವು ಕರ್ನಾಟಕ ಮತ್ತು ಗುಲಬರ್ಗಾ ವಿಶ್ವವಿದ್ಯಾನಿಲಯಗಳ ಬಿ.ಎ. ಮತ್ತು ಎಂ.ಎ. ತರಗತಿಗಳಿಗೆ ಪಠ್ಯವಾಗಿತ್ತು. ಅಲ್ಲದೆ ಇತ್ತೀಚೆಗೆ ಬೆಂಗಳೂರಿನ ದೂರದರ್ಶನದ ಚಂದನ ಮತ್ತು ಡಿಡಿ ಒಂದನೆಯ ವಾಹಿನಿಯಲ್ಲಿ ಟೆಲಿಚಿತ್ರವಾಗಿ ಪ್ರಸಾರವಾಗಿದೆ.

೧೮೫೭ರ ಪ್ರಥಮ ಸ್ವಾತಂತ್ರ್ಯ ಮಹಾಸಂಗ್ರಾಮದ ೧೫೦ನೆಯ ವರ್ಷಾಚರಣೆಯ ಶುಭ ಸಂದರ್ಭದಲ್ಲಿ ಡಾ॥ ಬಸವರಾಜ ನಾಯ್ಕರವರು ನರಗುಂದ ಬಂಡಾಯ ವನ್ನು ಕುರಿತು 'ಸ್ವಾತಂತ್ರ್ಯದ ಕನಸುಗಾರ' ಎಂಬ ರಂಗನಾಟಕ ವನ್ನು ರಚಿಸುವ ಮೂಲಕ ಸ್ವಾತಂತ್ರ್ಯಯೋಧರಿಗೆಲ್ಲ ನುಡಿನಮನ ಸಲ್ಲಿಸಿರುವುದು ಅತ್ಯಂತ ಸೂಕ್ತವಾಗಿದೆ. ನರಗುಂದ ಸಂಸ್ಥಾನದ ದೊರೆ ಭಾಸ್ಕರರಾಯ ಭಾವೆ ಯವರ ದಂಡನಾಯಕರಾಗಿ ಅರಮನೆಯ ಸಂರಕ್ಷಣೆ ಯಲ್ಲಿಯೇ ಬ್ರಿಟಿಷರ ಗುಂಡಿಗೆ ಬಲಿಯಾದ ವೀರಭದ್ರ ನಾಯಕ ಡಾ॥ ಬಸವರಾಜ ನಾಯ್ಕರವರ ಮುತ್ತಜ್ಜ. ಈ

ನಾಯ್ಕರ ಪೂರ್ವಜರು ಕೆಳದಿಯ ಶಿವಪ್ಪನಾಯಕನ ವಂಶದವರೂ ಹೌದು. ಹೀಗಾಗಿ ತಮ್ಮ ಪೂರ್ವಜರ ಸ್ವಾಭಿಮಾನ, ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ, ನಾಡ ಗೌರವಗಳು ಬಿಳುವಳಿಯಾಗಿ ಬಂದು 'ಸ್ವಾತಂತ್ರ್ಯದ ಕನಸುಗಾರ'ನನ್ನು ಸೃಷ್ಟಿಸಿರುವುದು ನಿಜಕ್ಕೂ ಹೆಮ್ಮೆಯ ಸಂಗತಿ. ಈ ದಿಶೆಯಲ್ಲಿ ಈ ಐತಿಹಾಸಿಕ ನಾಟಕವೊಂದು ಮೈಲುಗಲ್ಲು.

ಈಗಾಗಲೇ 'ನರಗುಂದ ಬಂಡಾಯ'ವನ್ನು ಕುರಿತು ಅನೇಕ ಕೃತಿಗಳು ಬಂದಿವೆ. ಪಂ॥ ಭೀಮಾಜಿ ಜೀವಾಜಿ ಪುಲಿಕವಿಗಳ 'ನರಗುಂದ ಬಂಡಾಯ'ವೆಂಬ ಚರಿತ್ರೆ, ಬಸವರಾಜ ಕಟ್ಟೀಮನಿಯವರ 'ನರಗುಂದ ಬಂಡಾಯ'ವೆಂಬ ಕಾದಂಬರಿ, ಎ. ಎಸ್. ಹೂಗಾರರ 'ಕ್ರಾಂತಿವೀರ ಬಾಬಾಸಾಹೇಬ', ಅವರೇ ಸಂಪಾದಿಸಿದ 'ಜಾನಪದ ನರಗುಂದ' ಎಂಬ ಗೀತ ಸಂಗ್ರಹ ಬೆಳಕು ಕಂಡಿವೆ. ೧೯೨೦ರ ದಶಕದಲ್ಲಿ ಹುಯಿಲಗೋಳ ಅಚ್ಯುತರಾಯರು ರಚಿಸಿದ 'ನರಗುಂದ ಬಂಡಾಯ'ವೆಂಬ ನಾಟಕವನ್ನು ವೃತ್ತಿರಂಗಭೂಮಿಯಲ್ಲಿ ಅಭಿನಯಿಸಲಾಗುತ್ತಿತ್ತು. ಗರೂಡ ಸದಾಶಿವರಾವ ಅಬ್ಬಿಗೇರಿ ಕಂಪನಿ, ಶಿರಹಟ್ಟಿ ಕಂಪನಿ ಹಾಗೂ ಇತರ ಸಂಘಗಳು 'ನರಗುಂದ ಬಂಡಾಯ', 'ಕಿತ್ತೂರ ಚೆನ್ನಮ್ಮ', 'ಸಂಗೊಳ್ಳಿ ರಾಯಣ್ಣ' ನಾಟಕಗಳನ್ನು ನಾಡಿನಾದ್ಯಂತ ಆಡುತ್ತಿದ್ದು, ಇಂಥ ನಾಟಕಗಳ ಮೂಲಕ ರಾಷ್ಟ್ರೀಯ ಚಳುವಳಿ ಉತ್ತರ ಕರ್ನಾಟಕದಲ್ಲಿ ಪ್ರಬಲಗೊಂಡಿತ್ತಲ್ಲದೆ ಜನತೆಯಲ್ಲಿ ರಾಷ್ಟ್ರಪ್ರೇಮ ಜಾಗೃತಗೊಂಡಿತ್ತೆಂಬುದನ್ನು ಮರೆಯುವಂತಿಲ್ಲ. ಜಾನಪದ ಕವಿಗಳು 'ನರಗುಂದ ಬಂಡಾಯ'ದ ಸಮಗ್ರ ಐತಿಹ್ಯವನ್ನು ಕೋಲಾಟ, ಹಂತಿಪದ, ಗೀಗೀ ಪದ, ಲಾವಣಿಗಳ ಮುಖಾಂತರ ಹಾಡಿದ್ದಾರೆ. ಇವುಗಳಲ್ಲಿ ಕ್ರಾಂತಿವೀರ ಬಾಬಾಸಾಹೇಬನ ವೈಭವಯುತ ಬದುಕನ್ನು, ತಾನು ಮತ್ತು ಹೆಂಡತಿ ಹೊಳೆಯಲ್ಲಿ ಆತ್ಮಸಮರ್ಪಣೆ ಮಾಡಿದುದನ್ನು, ಮ್ಯಾನ್ಸನ್‌ನ ರುಂಡ ಹಾರಿಸಿ ತಂದು ಅಗಸಿಬಾಗಿಲಿಗೆ ಕಟ್ಟಿದುದನ್ನು ಮತ್ತು ಬಂಡಾಯದ ದುರಂತವನ್ನು ಹೃದಯಂಗಮವಾಗಿ ಬಣ್ಣಿಸಿದ್ದಾರೆ. ಜಾನಪದ ಹಾಡುಗಳಲ್ಲಿ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆ ಕಂಡುಬಂದರೂ ಐತಿಹಾಸಿಕ ಘಟನೆಗಳು ಸಾಕಷ್ಟು ಸಾಕ್ಷಿಯನ್ನೊದಗಿಸುತ್ತವೆ.

ಡಾ॥ ಬಸವರಾಜ ನಾಯ್ಕರವರು 'ನರಗುಂದ ಬಂಡಾಯ'ದ ದುರಂತದ ಚಿತ್ರಣವನ್ನು 'ಸ್ವಾತಂತ್ರ್ಯದ ಕನಸುಗಾರ'ನನ್ನು ನಾಟಕೀಯವಾಗಿ ಕಂಡಿರಿಸಿದ್ದಾರೆ. ೨೩೬ ಪುಟಗಳ ಈ ಬೃಹತ್ ನಾಟಕದಲ್ಲಿ ಒಟ್ಟು ೯ ಅಂಕಗಳು ೭೯ ದೃಶ್ಯಗಳು ಇವೆ. ಇದರಲ್ಲಿ ೨೭ ಐತಿಹಾಸಿಕ ಪಾತ್ರಗಳಲ್ಲದೆ ಸೇವಕರು, ನಾಗರಿಕರು, ಸೈನಿಕರು, ಸರದಾರರು ಈ ನಾಟಕದ ಜೀವತಂತುಗಳಾಗಿದ್ದಾರೆ. ಈ ನಾಟಕವನ್ನು ಓದುತ್ತ ಹೋದಂತೆ, ''ಎಷ್ಟೇ ಕಹಿಯಾದರೂ ಐತಿಹಾಸಿಕ ಸತ್ಯಕ್ಕೆ ಚ್ಯುತಿ ಬರದಂತೆ ನೋಡಿಕೊಂಡಿದ್ದೇನೆ. ಇತಿಹಾಸದ ಅಸ್ಥಿಪಂಜರಕ್ಕೆ ರಕ್ತ ಮಾಂಸ ತುಂಬಿದ್ದೇನೆ. ಎಲ್ಲಿಯೂ ಭಾವುಕತೆಗೆ ಎಡೆಗೊಡದೆ ವಾಸ್ತವವಾದಿ ಶೈಲಿಯಲ್ಲಿ ಬರೆದಿದ್ದೇನೆ'' ಎಂದು ಮುನ್ನುಡಿಯಲ್ಲಿ ನಾಟಕಕಾರರು ಹೇಳಿರುವ ಮಾತುಗಳು ಸೂಕ್ತವಾಗಿವೆ.

ಈ ನಾಟಕದ ಪ್ರಾರಂಭವು ಭಾಸ್ಕರರಾಯರ ಕುಲದೇವರಾದ ಶ್ರೀ ವೆಂಕಟೇಶ್ವರ ದೇವಸ್ಥಾನಕ್ಕೆ ಅಪ್ಪಾಸಾಹೇಬ ಹಾಗೂ ಅವರ ಹದಿಹರೆಯದ ಪುತ್ರ ಭಾಸ್ಕರರಾಯನೊಂದಿಗೆ ಅರ್ಚನೆಗೆಂದು ಬಂದ ಸಮಯದಲ್ಲಿ ತಿರುಪತಿಯ ತಿಮ್ಮಪ್ಪ ಅರ್ಥಾತ್ ವೆಂಕಟೇಶ್ವರ ಸ್ವಾಮಿ ನರಗುಂದದಲ್ಲಿ ನೆಲೆಸಿದ, ಹಿಂದೆ ಜರುಗಿಹೋದ ಪ್ರಸಂಗವನ್ನು ನೆನಪಿನಂಗಳಕ್ಕೆ ತರುವದರಲ್ಲಿದೆ. ಸಂಪ್ರದಾಯದಂತೆ ಪ್ರತಿವರುಷ ತಿರುಪತಿಗೆ ರಾಮರಾಯರು ಹೊರಟಾಗ ತುಂಗಭದ್ರಾ ನದಿಗೆ ಮಹಾಪೂರ ಬಂದು ಸಿಬ್ಬಂದಿಯೊಂದಿಗೆ ದಾಟಲಾರದ ಪರಿಸ್ಥಿತಿಯಲ್ಲಿ ಸಿಲುಕಿರುವಾಗ ಶ್ರೀ ವೆಂಕಟೇಶ್ವರನೇ ಕುರಿಗಾರ ವೆಂಕನಾಗಿ ಬಂದು ದಾರಿ ತೋರಿದ್ದನ್ನು, ಅದೇ ವೆಂಕನೇ ಶ್ರೀ ವೆಂಕಟೇಶ್ವರ ಮೂರ್ತಿಯಲ್ಲಿ ಕಂಡು ರಾಮರಾಯರು ಮೂರ್ಛೆಹೋಗುವ ಸನ್ನಿವೇಶ ನರಗುಂದ ದೊರೆಗಳ ದೈವಭಕ್ತಿಗೆ ಸಾಕ್ಷಿಯಾದುದನ್ನು ನಾಟಕಕಾರರು ಪಾತ್ರಗಳ ಮುಖಾಂತರ ವಿವರಿಸಿ, ಶ್ರೀ ವೆಂಕಟೇಶ್ವರನನ್ನು ನರಗುಂದದಲ್ಲಿ ಪ್ರತಿಷ್ಠಾಪಿಸಿದ್ದನ್ನು, ಅಪ್ಪಾಸಾಹೇಬರು ಬಾಬಾಸಾಹೇಬರಿಗೆ ವಿವರಿಸುವುದನ್ನು ಅಂಕ ೧,೩ ದೃಶ್ಯಗಳಲ್ಲಿ ತೋರಿಸಿದ್ದಾರೆ.

ಭಾಸ್ಕರರಾಯನ ರಸಿಕತನಕ್ಕೆ, ಕಲಾಪ್ರೇಮಕ್ಕೆ ಭೀಮಾಸಾನಿಯ ಪ್ರಸಂಗ ಇಣುಕಿದೆ. ಸಾಮಾನ್ಯವಾಗಿ ರಾಜ-ಮಹಾರಾಜರು, ಸಂಸ್ಥಾನಿಕರು, ಸಿರಿವಂತರಿಗೆ ಇದು ಸಹಜ ಸ್ವಭಾವ. ''ಇಂದಿನಿಂದ ನೀನು ಭೀಮಾಸಾನಿಯಲ್ಲ, ನನ್ನ ಹೃದಯಕ್ಕೆ ಮುದನೀಡುವ ಚಂದ್ರಿಕೆ'' ಎಂದು ನುಡಿದಾಗ ''ಚಂದ್ರಿಕೆಗೆ ಸ್ವಂತ ಅಸ್ತಿತ್ವವಿಲ್ಲ, ಚಂದ್ರನೊಂದು ಕನ್ನಡಿ ಇದ್ದ ಹಾಗೆ, ಅಲ್ಲವೆ ಪ್ರಭು ? ಭಾಸ್ಕರನ ಕಿರಣಗಳಿಲ್ಲದೆ ಚಂದ್ರಿಕೆ ಉಂಟಾಗುವುದಾದರೂ ಹೇಗೆ ?'' (ಪು. ೨೪) ಎಂಬ ನುಡಿಗಳಲ್ಲಿ ಕಾವ್ಯರಸವಿದೆ. ಚಂದ್ರಿಕೆಯಲ್ಲಡಗಿದ ಕಲ್ಪನಾಶಕ್ತಿ, ಅವಳಲ್ಲಿರುವ ಕವಿಹೃದಯವನ್ನು ಸುಂದರವಾಗಿ ಅಭಿವ್ಯಕ್ತಿಸಲಾಗಿದೆ. ಇಲ್ಲಿ ಬರುವ ಆ ಪ್ರೇಮಿಗಳ ಜುಗಲ್‌ಬಂದಿ ಅತ್ಯಂತ ಹೃದಯಂಗಮವಾಗಿದೆ (ಪು. ೨೫).

ಭಾಸ್ಕರರಾಯ ಅಂತಃಪುರದಲ್ಲಿ ತಾಯಿ ಹಾಗೂ ಪತ್ನಿಯೊಂದಿಗೆ ಸಂಭಾಷಿಸುತ್ತಿರುವಾಗ, ಹುಟ್ಟಿದ ಮಗು ಆರೇ ತಿಂಗಳಲ್ಲಿ ತೀರಿಹೋಗುತ್ತದೆ. ಮುಂದೆ ಈ ಸಂಸ್ಥಾನಕ್ಕೆ ಗತಿಯೇನು



## ಅಮ್ಮ

ಎಲ್ಲರೂ ನಿನ್ನ ಬಗ್ಗೆ
ಕಥೆ, ಕವನಗಳ ಬರೆದರು
ನನ್ನ ಭಾವನೆಗಳನೆ
ಕಿತ್ತು ಬರೆದಂತೆ !

ನಿನ್ನ ನಿರ್ಮಲ ಪ್ರೀತಿಗಾಗಿ
ಪ್ರತಿ ಜೀವಿಯೂ ಕಂಬನಿಗರೆಯಿತು
ನನ್ನ ಹೃದಯವೇ
ಕಿತ್ತು ಬರುವಂತೆ !

ನಿನ್ನಲ್ಲಿದ್ದ ಹಸಿರಿಗಾಗಿ
ಹಂಬಲಿಸಿ ಜಗತ್ತು
ಕೈ ಚಾಚಿತ್ತು ಬಲಿಯದ
ನನ್ನ ಕೈಗಳಂತೆ !

ಪಕ್ವತೆಯಿಲ್ಲದ ಯಾರಿಗೂ
ನಿನ್ನ ಪ್ರೀತಿಯ
ಕೊಟ್ಟು ತೆಗೆದುಕೊಳ್ಳುವ
ಬಗೆ ತಿಳಿಯದು ನನ್ನ

ಒಳಸೇರುವ ನೆವದಲ್ಲಿ
ಹೃದಯ ಕೊರೆದು
ತೂತು ಬೀಳಿಸಿ...
ಅಮ್ಮಾ... ಹೇಳಲಾರೆ...

ಸೌಭಾಗ್ಯ ಹಾಸನದ
ತೃತೀಯ ಪತ್ರಿಕೋದ್ಯಮ, ಆಳ್ವಾಸ್ ಕಾಲೇಜು, ಮೂಡುಬಿದಿರೆ.

ಎಂದು ಚಿಂತಿಸುತ್ತಿರುವಾಗ ಯಮುನಾಬಾಯಿ, ''ದೇವರ ಲೀಲೆಯು ವಿಚಿತ್ರ. ಬಡಬಗ್ಗರ ಮನೆಯಲ್ಲಿ ತಿನ್ನಲಿಕ್ಕೆ ಕೂಳು ಇರದಿದ್ದರೂ ಮನೆತುಂಬ ಮಕ್ಕಳನ್ನು ಕೊಟ್ಟಿರುತ್ತಾನೆ. ಆದರೆ ಎಲ್ಲ ವೈಭವ ಸಂಪತ್ತು ಇರುವ ನಮ್ಮಂಥವರಿಗೆ ಮಕ್ಕಳನ್ನು ಕೊಡುವುದಿಲ್ಲ'' (ಪು. ೨೭) ಎಂದು ಹೇಳುವ ಈ ನುಡಿಗಳಲ್ಲಿ ವಾಸ್ತವಿಕ ಸತ್ಯವಿರುವುದನ್ನು ಕಾಣುತ್ತೇವೆ. ಭಾಸ್ಕರರಾಯನ ಕುಂಡಲಿಯನ್ನು ಪರೀಕ್ಷಿಸಿದ ಜ್ಯೋತಿಷಿ ಆಡಿದ ನುಡಿಗಳೂ ದಿಟವಾಗಿವೆ (ಪು. ೩೦). ಧಾರವಾಡದ ಕಲೆಕ್ಟರನು ನಿಶ್ಶಸ್ತ್ರೀಕರಣ ಕಾಯಿದೆ ಜಾರಿಗೆ ತರುವ ಅಧಿಸೂಚನೆಯನ್ನು ಕಳಿಸಿದಾಗ ಮಂತ್ರಿ, ''ಭಾರತ ದೇಶದವರು ತಮ್ಮ ವಿರುದ್ಧ ದಂಗೆ ಏಳಬಾರದೆಂದು ಈ ಬೆರಿಕಿ ಜನ ಮುಂಜಾಗ್ರತಾ ಕ್ರಮವಾಗಿ ನಿಶ್ಶಸ್ತ್ರೀಕರಣ ಕಾಯಿದೆ ಜಾರಿಗೆ ತಂದಿದ್ದಾರೆ'' ಎಂದು ಹೇಳಿದಾಗ ದಂಡನಾಯಕ ವೀರಭದ್ರನಾಯಕರು ಆಡುವ ''ಇದೆಂಥ ಕಾಯಿದೆ, ಸರ್ಕಾರ್, ಆತ್ಮರಕ್ಷಣೆಗಾಗಿ ನಮಗೆ ಶಸ್ತ್ರಾಸ್ತ್ರಗಳು ಬೇಕಲ್ಲವೇ ? ಈ ಕೆಂಪು ಮೂತಿಯ ಜನ ನಮ್ಮ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡು ನಮ್ಮನ್ನು ರೆಕ್ಕೆ ಮುರಿದ ಹಕ್ಕಿಗಳಂತೆ ಮಾಡ ಬೇಕೆಂದಿದ್ದಾರೆ'' (ಪು. ೩೫) ಎಂಬ ವೀರೋಚಿತ ನುಡಿಗಳು ಕುಂಪಣಿ ಸರಕಾರದ ಕುಹಕತನಕ್ಕೆ, ಮುಂದೊದಗಬಹುದಾದ ದುರಂತಕ್ಕೆ ಹಾಗೂ ವೀರಭದ್ರನಾಯಕನ ಮುಂದಾಲೋಚನೆಗೆ ಕನ್ನಡಿ ಹಿಡಿದಿವೆ. ಕೊಲ್ಲಾಪುರಕ್ಕೆ ಮ್ಯಾನ್ಸನ್‌ನ ಭೇಟಿಗೆಂದು ಹೋದಾಗ ಸಭಾಂಗಣಕ್ಕೆ ಬರುವ ಆಸ್ಥಾನಿಕರೆಲ್ಲ ಬಾಗುತ್ತಲೇ ಬರಬೇಕೆಂದು ಮಾಡಿದ ಆಜ್ಞೆಯನ್ನು ಅಪಮಾನಿಸುವ ವ್ಯವಸ್ಥೆಯನ್ನು ವೀರಭದ್ರನಾಯಕನು ಚಾಣಾಕ್ಷತನದಿಂದ ಪರಿಹರಿಸಿದ್ದು ಅವರ ಸ್ವಾಮಿನಿಷ್ಠೆ-ಸ್ವಾಭಿಮಾನವನ್ನು ಎತ್ತಿತೋರಿಸುತ್ತವೆ.

ನರಗುಂದ ಸಂಸ್ಥಾನದ ಭೂಕಂದಾಯವನ್ನು ಸಂದಾಯ ಮಾಡಲು ರಘೋಪಂತ ಜೋಶಿಯನ್ನು ಕಳಿಸಿದ್ದರು. ಆತನೆಸಗಿದ ಕೃತಘ್ನ ಕೃತ್ಯವನ್ನು ಕುರಿತು ವಿಷ್ಣುಪಂತನೊಂದಿಗೆ ಭಾಸ್ಕರರಾಯರು ಆಡುವ ''ಆತನಿಗೆ ನೆಲೆಯಿಲ್ಲದಾಗ ನೆಲೆಯನ್ನು ಕೊಟ್ಟವರು ನಮ್ಮ ತಂದೆಯವರು. ನಮ್ಮ ತಂದೆಯವರ ಮತ್ತು ನನ್ನ ನಡುವಿನ ಸಂಬಂಧವನ್ನು ಕೆಡಿಸುವ ಪ್ರಯತ್ನ ಮಾಡಿದ ಈ ಶಕುನಿ. ಈ ಮನುಷ್ಯನಿಗೆ ಸಹಾಯ ಮಾಡುವದೆಂದರೆ ಹಾವಿಗೆ ಹಾಲೆರೆದಂತೆಯೆ ಸರಿ. ಈ ಹಾವನ್ನು ಕ್ಷಣಾರ್ಧದಲ್ಲಿ ಕೊಂದುಹಾಕಬಲ್ಲೆ. ಆದರೆ ಹೆಂಡಿರು ಮಕ್ಕಳನ್ನು ಹೊಂದಿದ ಈತನನ್ನು ಕೊಂದರೆ ಆತನ ಅವಲಂಬಿತರಿಗೆ ವೃಥಾ ದುಃಖ, ತೊಂದರೆಯುಂಟಾಗುತ್ತದೆ'' (ಪು. ೫೧) ಎಂಬ ಮಾತುಗಳು ದುಷ್ಟ ವ್ಯಕ್ತಿಗಳನ್ನು ಕೊಲ್ಲುವ ಅಧಿಕಾರವಿದ್ದರೂ ಅವರನ್ನು ಮನ್ನಿಸುವುದು ಅವರ ಹೃದಯಶ್ರೀಮಂತಿಕೆಯನ್ನು ಎತ್ತಿತೋರಿಸುತ್ತವೆ.

ಭಾಸ್ಕರರಾಯನ ಕಾಮದ ಕಣ್ಣಿಗೆ ಬಿದ್ದ ತನ್ನ ಸೊಸೆಯನ್ನು ಜೀವಂತವಾಗಿ ಸಮಾಧಿ ಮಾಡಬೇಕೆಂಬ ವಿಚಾರದಲ್ಲಿದ್ದ ಗಂಗಾಧರನು ಮನದಲ್ಲಿ ಮಾಡಿದ ಸಂಕಲ್ಪ (ಪು. ೫೭) ಭಾಸ್ಕರರಾಯನ ವ್ಯಕ್ತಿತ್ವಕ್ಕೊಂದು ಕಪ್ಪು ಚುಕ್ಕೆ. ಇದು ಕಲ್ಪಿತ ಕಥೆಯಾಗಿರಲು ಸಾಧ್ಯವಿದೆ. ''ಸಾಹೇಬರೆ, ನಾವೇನು ಕೈಗಳಲ್ಲಿ ಬಳೆ ಧರಿಸಿಲ್ಲ. ನಮ್ಮ ರಕ್ಷಣೆಯನ್ನು ಮಾಡಿಕೊಳ್ಳುವ ಶಕ್ತಿ ನಮಗಿದ್ದೇ ಇದೆ. ನಮ್ಮ ಆಯುಧಗಳನ್ನು ನಿಮಗೆ ಕೊಟ್ಟು ನಿಮ್ಮಿಂದ ರಕ್ಷಣೆ ಪಡೆಯುವುದು ನಮಗೆ ಬೇಕಾಗಿಲ್ಲ'' (ಪು. ೬೧) ಎಂದು ಮ್ಯಾನ್ಸನ್ ಸಾಹೇಬರಿಗೆ ಎದುರುತ್ತರ ನೀಡಿದ ಕೆಂಚನಗೌಡರು ಧೈರ್ಯ, ಸ್ವಾಭಿಮಾನ, ಶೌರ್ಯದ ಪ್ರತೀಕವಾಗಿ ಕಂಡುಬರುವುದು ಮೆಚ್ಚತಕ್ಕದ್ದು. ಆದರೆ ಚಿತ್ರದುರ್ಗದ ರಾಣಿಯು ಕೆಂಚನಗೌಡರ ಸಹೋದರಿ ಎಂಬ ಪ್ರಸ್ತಾಪವನ್ನು ನಾಟಕಕಾರರು ಮಾಡಿದ್ದಾರೆ. ಹಮ್ಮಿಗಿ ಕೆಂಚನಗೌಡರಿಗೆ ಸಹೋದರಿ ಇರಲಿಲ್ಲವೆಂದು ಅವರ ವಂಶಾವಳಿಯಿಂದ ತಿಳಿದುಬರುತ್ತದೆ. ಇದೊಂದು ನಾಟಕಕಾರರ ಕಲ್ಪನೆ ಇರಬೇಕು. ಪುಟ ೫೯ರಲ್ಲಿ ಬನ್ಯಾಬಾಪು ಭಾಸ್ಕರರಾಯರಿಗೆ ಹೇಳಿದ ಮಾತುಗಳಲ್ಲಿ ಸತ್ಯಾಂಶವಿದೆ. ಈ ಸಂಭಾಷಣೆಯಲ್ಲಿ ಭಾಸ್ಕರರಾಯನ ಪತ್ನಿಯನ್ನು 'ವೈನಿ' ಎಂದು ಸಂಬೋಧಿಸಿರುವುದು ಉಚಿತವಲ್ಲ. 'ರಾಣಿ ಸರ್ಕಾರ್' ಅಥವಾ 'ರಾಣಿಯವರು' ಎಂದಿದ್ದರೆ ಸಮಂಜಸವೆನಿಸುತ್ತಿತ್ತು ಮತ್ತು ಅದಕ್ಕೊಂದು ಬೆಲೆ ಬರುತ್ತಿತ್ತು.

ಬನ್ಯಾಬಾಪು-ಕೃಷ್ಣಾಜಿ ಪಂತರು ಮದ್ದಿನಲ್ಲಿ ಸೆಗಣಿ ಬೆರೆಸಿದ್ದರಿಂದ ಕುಂಪಣಿ ಸರ್ಕಾರದ ಸೈನ್ಯವನ್ನು ಎದುರಿಸುವಲ್ಲಿ ವಿಫಲನಾದ ಭಾಸ್ಕರರಾಯ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ತನಗೆ ಸ್ವಾಮಿನಿಷ್ಠರಾದ ಮೂರು ನಾಲ್ಕು ಆಪ್ತ ಸೇವಕರೊಂದಿಗೆ ನರಗುಂದದಿಂದ ಪಲಾಯನ ಮಾಡಬೇಕಾಗುತ್ತದೆ. ಹಾಗೆ ಹೋಗುವ ಮುನ್ನ ತನ್ನ ತಾಯಿ ಮತ್ತು ಪತಿಗೆ ನಡೆದ ಸಂಗತಿ ತಿಳಿಸಿ, ''ನಿಮ್ಮನಿಮ್ಮ ದಾರಿ ನೀವು ನೋಡಿಕೊಳ್ಳಿ'' ಎಂದು ಹೇಳಿ ಹೋದಮೇಲೆ ಅತ್ತೆ ಸೊಸೆಯರಿಬ್ಬರೂ ಅರಮನೆಯಿಂದ ಪಾರಾಗಿಹೋಗಿ ಕುಂಪಣಿ ಸರಕಾರದ ಕೈಗೆ ಸಿಕ್ಕು ಅವಮಾನಿತರಾಗಬಾರದೆಂದು ಮಲಪಹಾರಿಯಲ್ಲಿ ಆತ್ಮಸಮರ್ಪಣೆ ಮಾಡುವ ಸನ್ನಿವೇಶ ಹೃದಯವನ್ನು ಕಲಕಿಸುವಂತಿದೆ. ಮುಂದೆ ಭಾಸ್ಕರರಾಯ ಸೆರೆಸಿಕ್ಕಿದ್ದು, ಗಲ್ಲು ಶಿಕ್ಷೆ ವಿಧಿಸಿದಾಗ ಶಂಕರಭಟ್ಟನ ಪ್ರೇರಣೆಯಂತೆ ಪಾರಾಗಿಹೋದದ್ದು, ಶಂಕರಭಟ್ಟನನ್ನೇ ಭಾಸ್ಕರರಾಯನೆಂದು ತಿಳಿದು ಗಲ್ಲಿಗೆ ಏರಿಸಿದ್ದು – ಇವೆಲ್ಲವೂ ಅವಾಸ್ತವವೆನಿಸುತ್ತದೆ. ಅವನ ಅಂತ್ಯ ಹೇಗಾಯಿತು ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ''ತೊರಗಲ್ಲ ಹೆಡಿ ತುಳದ ನಾಗರದ್ಹಾಂಗ ಹರಿದಾಡುತ್ತಿದ್ದ ಬಾಬಾಸಾಹೇಬನನ್ನು ಬೆನ್ನಟ್ಟಿದ್ದರೂ ಹಿಡಿಯಲು ಸಾಧ್ಯವಾಗದೆ ಬೇರೊಬ್ಬನನ್ನು ಬಂಧಿಸಿಕೊಂಡು ಬಂದು ತಮ್ಮ ಮಾನ ಉಳಿಸಿಕೊಳ್ಳುವುದಕ್ಕಾಗಿ ಅವನೇ ಬಾಬಾಸಾಹೇಬ ಅಂತ ಬ್ಯಾರೆ ಯಾರನ್ನೊ ಗಲ್ಲಿಗೇರಿಸಿ ದರೆಂದು'' ಒಬ್ಬ ಕವಿ ಹೇಳುತ್ತಾನೆ. ತೊರಗಲ್ಲ ಗೌಡರ ಮನೆಯಲ್ಲಿ ಸಿಕ್ಕ ಬಾಬಾಸಾಹೇಬನ ಮೇಲೆ ಮ್ಯಾನ್ಸನ್‌ನ ಕೊಲೆಯ ಆರೋಪ ಹೊರಿಸಿ ಬೆಳಗಾವಿಯಲ್ಲಿ ಫಾಸಿ ಕೊಟ್ಟರೆಂದು ಇನ್ನೊಬ್ಬ ಕವಿ ಹಾಡಿದ್ದಾನೆ. ಐತಿಹಾಸಿಕ ಸತ್ಯಕ್ಕೆ ಪುಷ್ಟಿ ನೀಡುವ ಮಾತಿದು. (ಪು. ೩೩, ಜಾನಪದದಲ್ಲಿ ನರಗುಂದ ದರ್ಶನ – ಶ್ರೀಮತಿ ಪ್ರೊ|| ಎಚ್. ಎಂ. ಬೀಳಗಿ-ನರಗುಂಪ್ರ.)

ಕೊನೆಯದಾಗಿ, ಬಾಬಾಸಾಹೇಬ ನೇಪಾಳಕ್ಕೆ ಪಾರಾಗಿ ಹೋಗಿ ನಾನಾಸಾಹೇಬನನ್ನು ಕಾಣುತ್ತಾನೆ. ಭಾಸ್ಕರರಾಯ ನಾನಾ ಸಾಹೇಬನೊಂದಿಗೆ ಮಾತನಾಡುತ್ತ, ''ನಾನು ಮಾಡಿದ ಬಂಡಾಯವೆಲ್ಲ ವ್ಯರ್ಥವಾಯಿತೇನೋ ಎಂದು ಹಳಹಳಿಯಾಗುತ್ತದೆ'' ಎಂದು ತನ್ನ ಮನದ ಅಳಲನ್ನು ತೋಡಿಕೊಂಡಾಗ, ''ಭಾಸ್ಕರರಾಯರೆ, ಹಳಹಳಿ ಮಾಡಿಕೊಳ್ಳಬೇಡಿರಿ... ನಾವೆಲ್ಲ ಹಚ್ಚಿದ ಈ ಸ್ವಾತಂತ್ರ್ಯ ಜ್ಯೋತಿ ಮುಂದೆ ಒಂದಿಲ್ಲ ಒಂದು ದಿನ ನಮ್ಮ ದೇಶವನ್ನು ನಂದಾದೀಪದಂತೆ ಬೆಳಗುತ್ತದೆ. ಈಗ ನಾವು ಬಂಡಾಯದ ಬೀಜವನ್ನು ಬಿತ್ತಿದ್ದೇವೆ. ಅದು ಮೊಳೆತು ಮುಂದೊಂದು ದಿನ ಹೆಮ್ಮರವಾಗಿ ಬೆಳೆಯುತ್ತದೆ ಎಂಬ ನಂಬುಗೆ ನನಗಿದೆ. ಆಗ ನಾವು ಯಾರೂ ಜೀವಂತವಾಗಿರುವುದಿಲ್ಲ. ಆದರೆ ನಮ್ಮ ಮೊಮ್ಮಕ್ಕಳು - ಮೊಮ್ಮಕ್ಕಳಿನ ತಲೆಮಾರಿನವರಾದರೂ ಆ ಸ್ವಾತಂತ್ರ್ಯವನ್ನು ಅನುಭವಿಸುತ್ತಾರೆ. ನಮ್ಮ ಈಗಿನ ಬಂಡಾಯ ಮುಂದೆ ಬರಲಿರುವ ಸ್ವಾತಂತ್ರ್ಯಕ್ಕೆ ನಾಂದಿಯಾಗಲಿದೆ ಎಂದು ಭಾವಿಸುತ್ತೇನೆ'' (ಪು. ೨೨೫) ಎಂದು ನಾನಾಸಾಹೇಬರು ಅಂದು ಆಡಿದ ನುಡಿಗಳು ಮುಂದೆ ತೊಂಭತ್ತೇ ವರ್ಷಗಳಲ್ಲಿ ಸತ್ಯವಾದುದನ್ನು ಕಾಣುತ್ತೇವೆ. ಅದಕ್ಕಾಗಿ ಜೀವ ತೆತ್ತವರಿಗೆ ಲೆಕ್ಕವಿಲ್ಲ. ಗುಂಡಿಗೆ ಆಹುತಿಯಾದವರು ಲೆಕ್ಕಕ್ಕೆ ಸಿಕ್ಕಿಲ್ಲ. ಗಲ್ಲುಗಂಬವೇರುತ್ತ ''ಇನ್‌ಕ್ವಿಲಾಬ್ ಜಿಂದಾಬಾದ್'' ಎಂದು ಸತ್ಯಲೋಕಕ್ಕೆ ಹೋದವರೆಷ್ಟೆಂಬುದು ಇತಿಹಾಸದಲ್ಲಿ ಅಡಗದೆ ಮನೆ ಮಾರು, ಹೆಂಡತಿ ಮಕ್ಕಳನ್ನು ಮರೆತು ನಮ್ಮ ನಾಡು, ದೇಶ ಸ್ವತಂತ್ರವಾಗಲಿ ಎಂದು ಮಾಡಿ ಮಡಿದವರು ಒಬ್ಬರೇ ಇಬ್ಬರೇ ಕೋಟ್ಯಂತರ ಜನ... ಅಲ್ಲ ಹುತಾತ್ಮರು...

ನೇಪಾಳದಿಂದ ಸನ್ಯಾಸಿ ವೇಷದಲ್ಲಿ ಕಾಶಿಗೆ ಬಂದ ಭಾಸ್ಕರರಾಯನನ್ನು ಒಂದು ಕಾಲದಲ್ಲಿ ನರಗುಂದದವರೇ ಆದ ಕಾಶೀಬಾಯಿ, ಅವಳ ಅಣ್ಣನ ಮಗಳು ಕಂಡದ್ದು, ಮುಂದೆ ಕಾಶೀಬಾಯಿಯ ಇಚ್ಛೆಯಂತೆ ಅರವತ್ತೆರಡರ ಇಳಿವಯಸ್ಸಿನಲ್ಲಿ ಇಪ್ಪತ್ತರ ಸಾವಿತ್ರಿಯನ್ನು ಮದುವೆಯಾದದ್ದು, ಗಂಡು ಮಗುವನ್ನು ಹೆತ್ತು ಗಣೇಶಪಂತನೆಂದು ಹೆಸರಿಟ್ಟದ್ದು, ''ನಾನು ನನ್ನ ರಾಜ್ಯವನ್ನೆಲ್ಲ ಕಳೆದುಕೊಂಡ ಮೇಲೆ ನೀನು ಹುಟ್ಟಿದೆ... ಈಗ ನಿನಗೆ ಕೊಡಲಿಕ್ಕೆ ಯಾವ ತರಹದ ಸಂಪತ್ತು ಉಳಿದಿಲ್ಲವಲ್ಲ! ನಾನು ಮತ್ತು ನನ್ನಂಥ ದೇಶಾಭಿಮಾನಿಗಳು ಹಚ್ಚಿದ ಬಂಡಾಯದ ಕಿಡಿ ದೇಶದ ತುಂಬೆಲ್ಲ ಹರಡಿ ಒಂದಿಲ್ಲೊಂದು ದಿನ ಸ್ವಾತಂತ್ರ್ಯ ಜ್ಯೋತಿಯಾಗಿ ಬೆಳಗುವುದೆಂಬ ಆಶೆ ನನಗಿದೆ. ನನ್ನ ಜೀವನ ಮುಗಿಯಿತು, ನೀನಾದರೂ ಸ್ವತಂತ್ರ ಭಾರತದ ಪ್ರಜೆಯಾಗಿ ಬಾಳು ಎಂದು ಆಶಿಸುತ್ತೇನೆ. ಸ್ವಾತಂತ್ರ್ಯದ ನನ್ನ ಕನಸು ನಿನ್ನ ಕಾಲಕ್ಕಾದರೂ ನನಸಾಗಲಿ'' (ಪು. ೨೩೬) ಎಂಬ ಭಾಸ್ಕರರಾಯನ ಆಶಾ ನುಡಿಗಳೊಂದಿಗೆ ಈ ನಾಟಕ ಮುಕ್ತಾಯಗೊಳ್ಳುತ್ತದೆ. ಅಲ್ಲಲ್ಲಿ ಹಿಂದೆ ಆದ ಘಟನೆಗಳನ್ನು ಬೇರೊಬ್ಬರ ಮುಖಾಂತರ ನಾಟಕಕಾರರು ಹೇಳಿಸಿದ್ದಾರೆ. ಇದು ಚರ್ವಿತಚರ್ವಣವಲ್ಲ. ಪ್ರೇಕ್ಷಕರ ಮನಸ್ಸಿನ ಮೇಲೆ ಅಚ್ಚೊತ್ತುವ ಒಂದು ನಾಟಕೀಯ ಕೌಶಲ.

ಇತ್ತೀಚೆಗೆ ಕನ್ನಡ ಸಾಹಿತ್ಯದಲ್ಲಿ ನಾಟಕಗಳ ರಚನೆ ವಿರಳವಾಗಿದೆ. ಅದರಲ್ಲಿಯೂ ಐತಿಹಾಸಿಕ ನಾಟಕಗಳೂ ಕೈಬೆರಳೆಣಿಸುವಷ್ಟು ಕಡಿಮೆಯಾಗಿವೆ. ಸಂಕ್ರಮಣ ಕಾಲದಲ್ಲಿ ರಂಗಭೂಮಿಯಮೇಲೆ ಪ್ರದರ್ಶಿಸಬಲ್ಲ ಈ 'ಸ್ವಾತಂತ್ರ್ಯದ ಕನಸುಗಾರ' ನಾಟಕ ಒಂದು ಅಪೂರ್ವ ಕೊಡುಗೆಯಾಗಿದೆ. ಅಲ್ಲಲ್ಲಿ ಸಂದರ್ಭಕ್ಕೆ ತಕ್ಕಂತೆ ರಂಗಗೀತೆಗಳನ್ನು ಕೂಡಿಸಿದ್ದರೆ ಈ ನಾಟಕಕ್ಕೆ ಹೆಚ್ಚಿನ ಕಳೆಬರುತ್ತಿತ್ತು. ಡಾ|| ಬಸವರಾಜ ನಾಯ್ಕರವರಿಗೆ ಹೃತ್ಪೂರ್ವಕ ಅಭಿನಂದನೆಗಳು.



ಡಾ|| ಮಹಾಲಿಂಗ ಯಾಳಗಿ
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು
[illegible], ಬಸವೇಶ್ವರ ನಗರ
[illegible]

ಹೊಸ ಓದು



**ಶಂ. ಬಾ. ಜೋಶಿ**
**(ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು-ಬರೆಹ)**
*ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ*
**ಪುಟ : ೯೬**
**ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯
ಬೆಂಗಳೂರು - ೫೬೦ ೦೦೧

ಮೌಲಿಕ ಸಾಹಿತ್ಯವನ್ನು ಕನ್ನಡಿಗರಿಗೆ ನೀಡಿದ, ತುಂಬಿದ ಕೊಡದಂತೆ ಸುಸಂಪನ್ನರಾಗಿ ಬಾಳಿದ ಶಂಬಾ ಅವರ ವ್ಯಕ್ತಿತ್ವ ಬಹಳ ಎತ್ತರದ್ದು, ಸುಲಭದಲ್ಲಿ ಎಟುಕಲಾರದ್ದು. ಮರಾಠೀ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಅಗಾಧ ಪಾಂಡಿತ್ಯವಿದ್ದ ಅವರು ಕನ್ನಡನುಡಿ – ಸಂಸ್ಕೃತಿ ಶೋಧನೆ, ಮರಾಠೀ ಸಂಸ್ಕೃತಿ ಶೋಧನೆ, ಭಾರತೀಯ ಸಂಸ್ಕೃತಿ ಶೋಧನೆ ಈ ಮೂರೂ ನೆಲೆಗಳಲ್ಲಿ ಪಾಂಡಿತ್ಯಪೂರ್ಣ ಕೃತಿರಚನೆ ಮಾಡಿದ್ದಾರೆ. ಈ ಶೋಧದ ಅವರ ದಾರಿಯು ಚಾರಿತ್ರಿಕ-ಸಾಂಸ್ಕೃತಿಕ-ಭೌಗೋಳಿಕ ನೆಲೆಗಳ ಮೂರು ಪಾತಳಿಗಳಲ್ಲಿ ಕ್ರಮಿಸಿ, ಮಹತ್ವದ ಮಜಲುಗಳನ್ನು ಮನಗಂಡಿದ್ದಾರೆ. ಸ್ಥಿತ್ಯಂತರದ ಅವಸ್ಥೆಗಳನ್ನು ಕಾಲಕಾಲಕ್ಕೆ ಗುರುತಿಸಿದ್ದಾರೆ. ಮಹಾರಾಷ್ಟ್ರ, ಕನ್ನಡ, ತಮಿಳು ಮುಂತಾದ ಪದಗಳ ಜಾಡು ಹಿಡಿದು ಅವರು ವಿಶೇಷ ಅಧ್ಯಯನ ಮಾಡಿದರು. ಬಹು ಪ್ರಸಿದ್ಧಿಯ ಕೃತಿ 'ಋಗ್ವೇದ ಸಾರ: ನಾಗಪ್ರತಿಮಾ ವಿಚಾರ'. ಕನ್ನಡ ಪುಸ್ತಕ ಪ್ರಾಧಿಕಾರವು ಅವರ ಬರಹಗಳನ್ನು ಆರು ಬೃಹತ್ ಸಂಪುಟಗಳಲ್ಲಿ ಸಂಗ್ರಹಿಸಿದೆ. ಅವರು ವೇದಗಳನ್ನು ಸಮಗ್ರವಾಗಿ ಓದಿಕೊಂಡಿದ್ದರು. ಪ್ರಸ್ತುತ ಪುಸ್ತಕವು ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಯಲ್ಲಿದ್ದು ಶಂಬಾ ಬದುಕಿನ ವಿವರ ಮತ್ತು ಸಾಹಿತ್ಯದ ಸ್ಥೂಲ ಪರಿಚಯವನ್ನು ನೀಡುತ್ತದೆ.

**ಈ ಕ್ಷಣ (ಅಂಕಣ ಬರಹಗಳು)**
*ಜ್ಯೋತಿ ಗುರುಪ್ರಸಾದ್*
**ಪುಟ : xvi + ೮೦ = ೯೬** **ಬೆಲೆ : ರೂ. ೬೫**
**ಸೃಷ್ಟಿ ಪಬ್ಲಿಕೇಷನ್ಸ್**, ನಂ. ೧೨೧, ೧೫ನೇ ಮುಖ್ಯರಸ್ತೆ, ಎಮ್. ಸಿ. ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦



ಕನ್ನಡ, ಇಂಗ್ಲಿಷ್ ಎರಡರಲ್ಲೂ ಎಂ.ಎ. ಪದವಿ ಪಡೆದು ಕಾಲೇಜಿನಲ್ಲಿ ಉಪನ್ಯಾಸಕಿಯಾಗಿರುವ ಜ್ಯೋತಿ ಸಾಹಿತ್ಯ ಕ್ಷೇತ್ರದಲ್ಲೂ ಮುಂಚೂಣಿಯಲ್ಲಿನ ಹೆಸರು. 'ಅಗ್ನಿ' ಪತ್ರಿಕೆಗಾಗಿ ಬರೆದ ಇಲ್ಲಿನ ಲೇಖನಗಳು ಆ ಕ್ಷಣಕ್ಕೆ ಹೊಳೆದವು. ಎಲ್ಲ ಕ್ಷಣಗಳೂ ಒಂದೇ ಆಗಿರದೆ ಅಪೂರ್ವ ಅನುಭವಗಳಾಗಿದ್ದು ನೋವು, ನಲಿವು, ಸಂಭ್ರಮ, ಧೈರ್ಯ, ಭಯಗಳ ಮಿಶ್ರಣವಾಗಿ ನಮ್ಮೊಂದಿಗೆ ಹಂಚಿಕೊಳ್ಳಬಯಸುತ್ತವೆ. ಬದುಕನ್ನು ಅರ್ಥಪೂರ್ಣವಾಗಿ ಬಾಳಬೇಕೆನ್ನುವುದು ಒಂದು ಆಶಯ. ಉನ್ನತ ಆದರ್ಶಗಳ ಆವಿಷ್ಕಾರ ಯಾವ ಹಂತದಲ್ಲಿ, ಬದುಕಿನ ಯಾವ ವಯಸ್ಸಿನಲ್ಲಿ, ಅದು ಶಿಕ್ಷಣದಿಂದಲೋ ಅಥವಾ ಅಂತರಂಗದಿಂದಲೇ ಉಕ್ಕುವ ಝರಿಯಂತಹ ಒತ್ತಡದಿಂದಲೋ ಎಂಬ ತೀವ್ರವಾದ ಅನಿಸಿಕೆಯೊಂದು ಶಿಕ್ಷಕಿಯಾಗಿರುವ ಅವರನ್ನು 'ಪ್ರೀತಿಯೊಂದೇ ಸಂಜೀವಿನಿ' ಎಂಬ ಲೇಖನದಲ್ಲಿ ಕಾಡಿಸಿದೆ. ಮಹಾ ಸುನಾಮಿಯಂತಹ ದುರಂತಗಳಿಗೆ ಚಿಕ್ಕ ಚಿಕ್ಕ ಘಟನೆಗಳೇ ಕಾರಣವಾಗಬಹುದು. ಎಳವೆಯಲ್ಲೇ ಮಗುವಿಗೆ ಸನ್ನಡತೆ ಕಲಿಸಬೇಕೆಂಬುದು ಈ ಲೇಖನದ ಆಶಯ. ಅನೇಕ ಸಾಹಿತ್ಯ ಶಿಬಿರಗಳು, ಸಾಹಿತ್ಯಗೋಷ್ಠಿಗಳು, ಸಮ್ಮೇಳನಗಳಲ್ಲಿ ಭಾಗವಹಿಸಿರುವ ಜ್ಯೋತಿಯವರು ಅಲ್ಲಿನ ಎಲ್ಲವನ್ನೂ ಸೂಕ್ಷ್ಮ ಮನಸ್ಸಿನಿಂದ ಹೊಸನೋಟದಿಂದ ಗ್ರಹಿಸುವ ಶಕ್ತಿಯುಳ್ಳವರೆಂದು ಅವರ ಬರಹಗಳಿಂದ ಗ್ರಹಿಸಬಹುದು.

**ಪೂರ್ಣನ ಗರಿಗಳು**
*ಪೂರ್ಣಪ್ರಜ್ಞ*
**ಪುಟ : ೭೪** **ಬೆಲೆ : ರೂ. ೩೦**
**ಛಂದ ಪುಸ್ತಕ**, ಐ-೦೦೪, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ
ಬೆಂಗಳೂರು - ೫೬೦ ೦೭೬

'ಗಂಧದ ಮಾಲೆಯನ್ನು ಪರಿಮಳದಲ್ಲಿ ಮಾಡುತ್ತಾರೆ' – ಗದ್ಯ-ಪದ್ಯದಂತಿರುವ ಈ ಸಾಲು ಹತ್ತು ವರ್ಷದವನಿದ್ದಾಗ ಪೂರ್ಣಪ್ರಜ್ಞ ಬರೆದಿದ್ದು. ಇಂತಹುದೇ ತನಗೆ ತೋಚಿದ ಕೆಲವು ಸಾಲುಗಳನ್ನು, ಅನಿಸಿಕೆಗಳನ್ನು ತನ್ನ ನೋಟ್‌ಬುಕ್‌ನಲ್ಲಿ ಆಗಾಗ ಬರೆದು ಅಮ್ಮನಿಗೆ ತೋರಿಸಿ ಜೋಪಾನವಾಗಿಟ್ಟಿದ್ದ. ಬಂದವರಿಗೆಲ್ಲ ಅಳುಕಿಲ್ಲದೆ ತೋರಿಸಿ 'ಪುಟ್ಟಕವಿ' ಎನ್ನಿಸಿಕೊಂಡಿದ್ದ. ಹಾರಲು, ಹಾಡಲು ಕಲಿಯುವ ಪುಟ್ಟ ಹಕ್ಕಿಯಂತೆಯೇ ಇದ್ದ. ಛಂದ ಪುಸ್ತಕದವರು ಇವನ್ನು ಸಂಗ್ರಹಿಸಿ 'ಪೂರ್ಣನ ಗರಿಗಳು' ಎಂಬ ಶೀರ್ಷಿಕೆಯಡಿ ಪ್ರಕಟಿಸಿದ್ದಾರೆ. ಈ ಶ್ವೇತ ವರ್ಣದ ಪುಟ್ಟ ಪುಸ್ತಕವು ದೊಡ್ಡವರ ಬಣ್ಣದ ಪುಸ್ತಕಗಳ ಜತೆ ಸ್ವಲ್ಪ ಜಾಗ ಹುಡುಕಿಕೊಂಡು ಸೇರಿಕೊಂಡಿದೆ. ಪುಸ್ತಕವನ್ನು ಪೂರ್ಣನಿಗೆ ತೋರಿಸಿ ಅವನ ಮುಖವರಳುವುದನ್ನು ನೋಡುವ ಅದೃಷ್ಟ ನಮಗಿಲ್ಲ. ಏಕೆಂದರೆ ಅವನಿಗೆ ಆಗಲೇ ಪರೋಪಕಾರದ ಕರ್ತವ್ಯ ಒದಗಿ ಬಂತು. ಗೆಳೆಯರೊಂದಿಗೆ ನೀರಾಟವಾಡಲು ಹೋಗಿ, ಮುಳುಗಿ ಅಪಾಯದಲ್ಲಿದ್ದ ಗೆಳೆಯನನ್ನು ಕೈನೀಡಿ ಪಾರುಮಾಡಿ – ತಾನು ಕೆಸರನೀರಲ್ಲಿ ಮುಳುಗಿ ನಮ್ಮ ಪಾಲಿಗೆ........ ನೀಲಾಕಾಶದಲ್ಲಿ ಹಾರುತ್ತಾ ಬಂದ ಹಕ್ಕಿಯೊಂದು ಸ್ವಲ್ಪ ಹೊತ್ತು ಮರದ ಮೇಲೆ ವಿಶ್ರಮಿಸಿ, ಇಂಪಾಗಿ ಹಾಡಿ, ರಂಜಿಸಿ ಒಂದಿಷ್ಟು ಗರಿಗಳನ್ನು ನಮಗಾಗಿ ಉದುರಿಸಿ – ಮತ್ತೆಲ್ಲೋ ಹಾರಿಹೋದಂಥ ಅನುಭವ; ಹಣ್ಣೆಲೆಯ ಬದಲು ಮರದಿಂದ ಹಸುರು ಎಲೆಗಳು ಉದುರುತ್ತಿದ್ದರೆ ಅದೆಷ್ಟು ಸಂಕಟ...

**ಕೆ. ವಿ. ಸುಬ್ಬಣ್ಣ (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು-ಬರೆಹ)**
*ಡಾ॥ ನಾ. ದಾಮೋದರ ಶೆಟ್ಟಿ*
**ಪುಟ : ೯೬**
**ಬೆಲೆ : ರೂ. ೬೦**
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧



ನೀಲಕಂಠೇಶ್ವರ ನಾಟ್ಯ ಸೇವಾ ಸಂಘವೆಂದರೆ ಅದು ಹೆಗ್ಗೋಡಿನ ಕೆ. ವಿ. ಸುಬ್ಬಣ್ಣನವರ ಸಂಚಾರಿ ನಾಟಕ ತಂಡವೆಂಬುದು ಯಾರಿಗೇ ಆಗಲಿ ಗೊತ್ತಿರುವ ವಿಚಾರವೆ. ಹೆಗ್ಗೋಡಿನಲ್ಲಿ ರಂಗ ಶಿಕ್ಷಣಕೇಂದ್ರ ಪ್ರಾರಂಭಿಸಿ, ರಂಗಾಸಕ್ತರಿಗೆ ತರಬೇತಿ ನೀಡಿ, ಅಲ್ಲಿಯೇ ಶಿವರಾಮ ಕಾರಂತ ರಂಗಮಂದಿರವನ್ನೂ ಸ್ಥಾಪಿಸಿ, ರಂಗ ಚಟುವಟಿಕೆಗಳಿಗೊಂದು ಉನ್ನತ ಸ್ಥಾನ ತಂದುಕೊಟ್ಟರು. ವ್ಯಕ್ತಿತ್ವ ಮತ್ತು ಸರಳತೆಯ ಮಟ್ಟಿಗಂತೂ ಎಲ್ಲರಿಗೂ ಅವರು 'ನಮ್ಮ ಸುಬ್ಬಣ್ಣ' ಎಂದೇ ಅನ್ನಿಸಿಬಿಟ್ಟರು. ಕನ್ನಡದ ಜಗತ್ತು ಮತ್ತು ಕನ್ನಡದ ಮನಸ್ಸನ್ನು ಅವರಷ್ಟು ಗಾಢವಾಗಿ ಅರ್ಥೈಸಿ ಚಿಂತಿಸಿದವರು ವಿರಳ. ಒಂದೊಮ್ಮೆ ಕನ್ನಡ ವರ್ಣಮಾಲೆಯಿಂದ 'ಋ' ಅಕ್ಷರವನ್ನು ಹೊರದಬ್ಬುವ ಪ್ರಸ್ತಾಪ ಬಂದಾಗ ವಿವಿಧ ವೇದಿಕೆಗಳಿಂದ 'ಋ' ಅಕ್ಷರದ ಪರ ಮಾತಾಡಿ ಅದನ್ನುಳಿಸಲು ಕರೆ ನೀಡಿದ್ದರು. ಪ್ರಾರಂಭದಿಂದಲೂ ಪತ್ರಿಕೆಗಳಲ್ಲಿ ಸಾಂದರ್ಭಿಕ ಲೇಖನಗಳನ್ನು ಬರೆಯುತ್ತಿದ್ದರು. ನಾಟಕಗಳು, ಅದರಲ್ಲೂ ಕಾಳಿದಾಸನ ನಾಟಕಗಳು ಅವರಿಗೆ ಬಹುಪ್ರಿಯ. ಸಂಸ್ಕೃತ ಹಾಗೂ ಇತರ ದೇಶ-ವಿದೇಶಗಳ ಉತ್ತಮ ನಾಟಕಗಳನ್ನು ಅನುವಾದಿಸಿ ರಂಗ ಪ್ರಯೋಗ ನಡೆಸಿದ್ದರು. ಪುಟ್ಟ ಹಳ್ಳಿ ಹೆಗ್ಗೋಡು ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟದ್ದು, ರಾಮೋನ್ ಮ್ಯಾಗ್ಸೇಸೆ ಪ್ರಶಸ್ತಿ ಇವರನ್ನು ಅರಸಿ ಬಂದದ್ದು ಸುಬ್ಬಣ್ಣನವರ ಸಾಧನೆಗೆ ಸಾಕ್ಷಿ. ನವಕರ್ನಾಟಕದ ಸಾಧನೆಗಳಲ್ಲೊಂದಾದ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದ ಕನ್ನಡ ಸಾಹಿತಿಗಳನ್ನು ಪರಿಚಯಿಸಿ ಕೊಡುವ ಸಾಹಿತ್ಯ ಸಂಪದ ಮಾಲೆಯಲ್ಲಿ ಈ ಕೃತಿಯೂ ಒಂದು.



**ಕನ್ನಡ ನಾಟಕ – ಯಾಜಮಾನ್ಯ ಸಂಕಥನ** (ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ)

*ಡಾ|| ಟಿ. ವೆಂಕಟೇಶಮೂರ್ತಿ*

**ಪುಟ :** xii + ೨೦೮

ಬೆಲೆ : ರೂ. ೧೮೦

**ಅಧ್ಯಯನ ಮಂಡಲ,** ಕೇರಾಫ್ ಕಾವ್ಯ ಮಂಡಲ, ೧೩/೮೫, ಆರ್. ವಿ. ರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪

*ಪ್ರಾಚೀನ ಕಾಲದಿಂದಲೂ ರಮ್ಯ ಸಾಹಿತ್ಯ ಪ್ರಕಾರಗಳೆನಿಸಿಕೊಂಡ ನಾಟಕಗಳು ಸಾಕಷ್ಟು ಸಂಖ್ಯೆಯಲ್ಲಿ ರಚಿಸಲ್ಪಟ್ಟಿವೆ. ಅವುಗಳನ್ನು ಆಧರಿಸಿ ಮುಂದಿನ ಹಂತಗಳಲ್ಲಿ ಇಂದಿನವರೆಗೂ ನಾಟಕದ ಕಥಾವಸ್ತುವಿನಲ್ಲಿ ಹಲವು ನಾಟಕಕಾರರಿಗೆ ಹಲವು ಆಯಾಮಗಳಲ್ಲಿ ಯಾಜಮಾನ್ಯ ಸಂಸ್ಕೃತಿಯ, ತುಳಿತದ, ಅಟ್ಟಹಾಸಗಳ ವಿಧವಿಧವಾದ ಆದರ್ಶಗಳ ದರ್ಶನಗಳಾಗಿವೆ. ನಾಟಕಕಾರನ ಮೂಲ ಒಲವು ಯಾವ ಕಡೆ ಇದೆ ಎಂಬುದು ಅಲ್ಲಿ ಮೇಲುಗೈ ಪಡೆದ ದನಿಯಾಗಿರುತ್ತಿತ್ತು. ಅಂದಿನ ಆದರ್ಶಗಳು ಇಂದಿನವುಗಳಿಗಿಂತ ಬೇರೆ. ಈ ಆದರ್ಶಗಳು ಮರುವ್ಯಾಖ್ಯಾನಗೊಳ್ಳುತ್ತ, ಮರುಹುಟ್ಟು ಪಡೆದು ಪಲ್ಲಟಗೊಂಡ ಸಂಸ್ಕೃತಿಯೊಂದಿಗೆ ಬದಲಾಗುತ್ತಾ ಹೊಸ ಹೊಸ ನಾಟಕಗಳಾಗಿ ಹೊಸ ಹೊಳಹಿನೊಂದಿಗೆ ಎದುರುನಿಂತಿವೆ. ಕಾಲ ಯಾವುದೇ ಇರಲಿ, ಅಧಿಕಾರ ದರ್ಪ, ಯಾಜಮಾನ್ಯ ಹಿರಿತನ, ಶ್ರೀ ಸಾಮಾನ್ಯನ ಬದುಕು ಇವೆಲ್ಲ ಎಲ್ಲರ ನಾಟಕಗಳಲ್ಲೂ ಕಥಾವಸ್ತುವೇ ಆಗಿವೆ. ಈ ಪುಸ್ತಕದ ಮುಖ್ಯ ಉದ್ದೇಶ ಹಳೆಯ ಕಾಲದ ಉಳಿಕೆಯಂತೆ ಉಳಿದುಬಂದ ಯಾಜಮಾನ್ಯ ಸಂಸ್ಕೃತಿಯನ್ನು, ಅದು ವಿಜೃಂಭಿಸಿದ ನೆಲೆಯನ್ನು ನಾಟಕಗಳಲ್ಲಿ ಹುಡುಕುವುದು. ಇದಕ್ಕೆ ಲೇಖಕರ ಆಯ್ಕೆ ಕುವೆಂಪು ಅವರಿಂದ ಪ್ರಾರಂಭಿಸಿ ನಿನ್ನೆ ಮೊನ್ನೆಯ ನಾಟಕಕಾರರವರೆಗೂ ಇದೆ. ಗಂಭೀರಗತಿಯಲ್ಲಿ ನಿಷ್ಪಕ್ಷಪಾತದಿಂದ ನಡೆಸಿದ ಈ ನಾಟಕಗಳ ವಿಶ್ಲೇಷಣೆ ಯಾರಿಗೆ ಯಾರ ಬಗ್ಗೆ ಒಲವು ಇತ್ತೆಂಬುದನ್ನು ಖಚಿತಪಡಿಸುತ್ತದೆ.*



**ಕಲ್ಯಾಣದ ಕೊನೆಯ ದಿನಗಳು** (ಐದಂಕದ ನಾಟಕ)

*ಕ. ವೆಂ. ರಾಜಗೋಪಾಲ*

**ಪುಟ :** ೯೬

ಬೆಲೆ : ರೂ. ೭೫

**ಸಿರಿವರ ಪ್ರಕಾಶನ,** ನಂ. ಎಮ್ ೩೭/ಬಿ, ೮ನೇ ಅಡ್ಡರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೫೬೦ ೦೨೧

*ಭಕ್ತಿ ಭಂಡಾರಿ ಬಸವಣ್ಣ ವಚನ ಕ್ರಾಂತಿಯ ಮೂಲಕ ಸಮಾಜದಲ್ಲಿ ಒಂದು ಪರಿವರ್ತನೆಯನ್ನುಂಟುಮಾಡಿದವನು. ಭಕ್ತಿಮಾರ್ಗದ ಮೂಲಕವೇ ಜನರನ್ನು ಸಂಘಟಿಸಿ ಮೇಲು ಕೀಳೆಂಬ ತಾರತಮ್ಯದ ವಿರುದ್ಧ ಸೆಣಸಾಡಿದವನು. ಆಯುಧಗಳಿಲ್ಲದ ಕ್ರಾಂತಿ ಅದು. ಅಂದಿನ ವಚನಕಾರರ ವಚನಗಳಿಂದಲೇ ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು ಅರಿತುಕೊಳ್ಳಬಹುದು. ಆದರೆ ಇಂದಿನ ಪರಿಸ್ಥಿತಿ ಅದಕ್ಕಿಂತ ಭಿನ್ನವಾಗಿದೆಯೆ? ಅಂದಿನ ಸಾಮಾಜಿಕ ಅನಿಷ್ಟಗಳು ಅಂದಿಗೇ ಕೊನೆಯಾದವೆ? ಇಂದು ಎಲ್ಲರೂ ಸೌಖ್ಯವೆ? ಹೀಗೆ ಚಿಂತಿಸಿದವರು ವಿರಳ. ಮಾನ್ಯ ಕ. ವೆಂ. ರಾಜಗೋಪಾಲ ಅವರು ಯಾವಾಗಲೂ ಗಹನ ವಿಚಾರಗಳತ್ತಲೇ ತಮ್ಮ ಗಮನ ಹರಿಸುವವರು. ಹಾಗಾಗಿ 'ಕಲ್ಯಾಣದ ಕೊನೆಯ ದಿನಗಳು' ಎಂಬ ವಿಶಿಷ್ಟ ನಾಟಕವನ್ನು ನೀಡಿದ್ದಾರೆ. ಅವೇ ಅಂದಂದಿನ ಸಮಸ್ಯೆಗಳಲ್ಲದಿದ್ದರೂ ಇಂದಿಗೂ ಹೋರಾಟ ಮಾಡಬೇಕಾದ ಸನ್ನಿವೇಶಗಳು ತಲೆಗೊಂದರಂತೆ ಇವೆ. ಕ್ರಾಂತಿಕಾರಿಗಳಿದ್ದರೂ ಕ್ರಾಂತಿ ಯಾಕೋ ಸಫಲವಾಗುತ್ತಿಲ್ಲ. ಹಾಗಾಗಿ ಅಂದಿನ ಕಲ್ಯಾಣದ ಪಾತ್ರವರ್ಗವೆಲ್ಲವೂ ಇಂದಿನ ಈ ನಾಟಕದ ಮೂಲಕ ನಮ್ಮ ಸಮಸ್ಯೆಗಳನ್ನು ನಿವಾರಿಸುವತ್ತ ಪ್ರಯತ್ನಪಡುತ್ತಾ ಇದೆ.*

– **ಇಂದಿರಾಕುಮಾರಿ,** *೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*




# ಗಣಪತಿ ಹಬ್ಬದ ಚಂದ್ರ

ಸೆಪ್ಟೆಂಬರ್ ೧೧ರಂದು ಗಣಪತಿ ಹಬ್ಬ; ಆ ದಿನ ಚಂದ್ರನನ್ನು ನೋಡಬಾರದಂತೆ. ಅದರ ಫಲ ಏನೇ ಆದರೂ ಈ ಬಾರಿ ಚಂದ್ರನನ್ನು ಮರೆಯದೇ ನೋಡಿ. ಇಲ್ಲದಿದ್ದಲ್ಲಿ ಅತಿ ಸುಂದರ ದೃಶ್ಯವೊಂದನ್ನು ಕಳೆದುಕೊಳ್ಳುವಿರಿ. ಅಂದು ಚಂದ್ರ ಶುಕ್ರಗ್ರಹವನ್ನು ಮರೆಮಾಡುವ ಅಪೂರ್ವ ಘಟನೆ ಆಚ್ಛಾದನೆ ನಡೆಯಲಿದೆ. ಇದು ದಕ್ಷಿಣ ಭೂಭಾಗಕ್ಕೆ ಕಾಣುತ್ತದೆಯಾದರೂ ನಮಗೆ ಅವೆರಡೂ ಅಂಟಿಕೊಂಡಂತೆ ಕಾಣುವುದೇ ವಿಶೇಷ. ಕ್ಯಾಮೆರಾಗೆ ಕೆಲಸ ಕೊಡಿ. ಹಂತ ಹಂತವಾಗಿ ಚಂದ್ರ ಶುಕ್ರದತ್ತ ಸರಿಯುವುದನ್ನು ಸೆರೆ ಹಿಡಿಯಿರಿ.

ಈ ತಿಂಗಳಲ್ಲಿ ಆಕಾಶ ಶುಭ್ರವಾಗಿರುವ ಸಾಧ್ಯತೆ ಕಡಿಮೆ. ಆದರೂ ಚಂದ್ರ ಮತ್ತು ಶುಕ್ರ - ಇವುಗಳನ್ನು ತೆಳ್ಳನೆಯ ಮೋಡದ ಮಧ್ಯೆಯೂ ಪತ್ತೆ ಮಾಡಬಹುದು. ಸಂಜೆ ಪಶ್ಚಿಮದಲ್ಲಿ ಶುಕ್ರ, ಮಂಗಳಗಳನ್ನು ನೋಡಬಹುದು. ಪೂರ್ಣ ಕತ್ತಲಾದ ಮೇಲೆ ಪೂರ್ವಕ್ಕೆ ತಿರುಗಿ ಅಲ್ಲಿ ಶುಕ್ರದ ಪ್ರತಿಸ್ಪರ್ಧಿ ಎಂಬಂತೆ ಕಾಣುವ ಚುಕ್ಕೆಯೊಂದು ಕಾಣಲಿದೆ. ಅದೇ ಗುರು ಗ್ರಹ. ಈ ತಿಂಗಳಲ್ಲಿ ಅದರ ವಿಯುತಿ ಅಂದರೆ ರಾತ್ರಿಯುದ್ದಕ್ಕೂ ಅದರ ದರ್ಶನ ಉಂಟು. ಅತಿ ಪ್ರಕಾಶಮಾನವಾಗಿ ಕಾಣುವ ಸಂದರ್ಭವೂ ಇದೆ. ದೂರದರ್ಶಕ ಇರುವವರು ಕೆಂಪು ಮಚ್ಚೆಯನ್ನು ಹುಡುಕಲು ಸದವಕಾಶ. ಹಾಗೆಯೇ ಅದರ ಪಕ್ಕದಲ್ಲಿ ಕಾಣುವ ಚುಕ್ಕೆಗಳನ್ನೂ ಗಮನಿಸಿ. ಅವುಗಳಲ್ಲೊಂದು ಯುರೇನಸ್. ನಡುರಾತ್ರಿಗೆ ಅದು ನೆತ್ತಿಯ ಮೇಲೇರುತ್ತದೆ. ಆಗ ಅದರ ಉಪಗ್ರಹಗಳನ್ನೂ ಮತ್ತು ಯುರೇನಸ್‌ಅನ್ನೂ ದುರ್ಬೀನಿನ ಮೂಲಕವೇ ನೋಡಬಹುದು.

ಶನಿಗ್ರಹ ದಿಗಂತದ ತೀರಾ ಅಂಚಿಗೆ ಇದೆ. ನೋಡಲು ಸಾಧ್ಯವಿಲ್ಲ ಎಂದೇ ಹೇಳಬಹುದು. ಇನ್ನೊಂದು ಗ್ರಹ ಬುಧ ಬೆಳಗಿನ ಜಾವ ಕಾಣುತ್ತದೆ. ೧೯ರಂದು ಗರಿಷ್ಠ ಕೋನೋನ್ನತಿ ಅಂದರೆ ಸ್ಪಷ್ಟವಾಗಿ ನೋಡುವ ಸಾಧ್ಯತೆ ಇದೆ ಎಂದರ್ಥ.

೨೩ರಂದು ಶರದ್ ವಿಷುವ. ಹಗಲು ರಾತ್ರಿಗಳ ಅವಧಿ ಸಮ. ಮುಂದೆ ಹಗಲಿನ ಅವಧಿ ಕಡಿಮೆ ಯಾಗುತ್ತಾ ಹೋಗುತ್ತದೆ. ಶರದ್ ಮಾಸದಲ್ಲಿ ಆಕಾಶದಲ್ಲಿ ನದಿ ಮತ್ತು ಸೇತುವೆಯೊಂದು ಕಾಣುತ್ತದೆ. ಹೀಗೆಂದು ವಾಲ್ಮೀಕಿ ರಾಮಾಯಣದಲ್ಲಿ ಸೂಚಿಸಿರುವುದು ಆಕಾಶಗಂಗೆಯನ್ನು. ವೃಶ್ಚಿಕ, ಧನು ಈ ರಾಶಿಗಳ ಮೂಲಕ ಕಾಣುವ ಈ ಸುಂದರ ನದಿಯನ್ನು ನೋಡಲು ಮೋಡಗಳು ಅವಕಾಶ ಕೊಡಬೇಕಷ್ಟೆ. ನದಿಯ ಒಂದು ಭಾಗ ರಾಜಹಂಸ (ಸಿಗ್ನಸ್), ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಪುಂಜಗಳ ಮೂಲಕ ಸಾಗುತ್ತದೆ. ಆಕಾಶದ ಉಳಿದ ಭಾಗಗಳಲ್ಲಿ ಉದಾಹರಣೆಗೆ, ನೆತ್ತಿಯ ಮೇಲಿನ ಭೀಮ (ಹರ್‌ಕ್ಯುಲೆಸ್), ಪೂರ್ವದಲ್ಲಿ ಕುಂಭ, ಪಶ್ಚಿಮದಲ್ಲಿ ಕನ್ಯಾ - ಹೀಗೆ ನಕ್ಷತ್ರಗಳು ಸಾಕಷ್ಟಿಲ್ಲ ಎಂಬುದು ಬರಿಗಣ್ಣಿಗೇ ತಿಳಿಯುತ್ತದೆ. ಶರದ್ ಪೂರ್ಣಿಮೆ ೨೨ರಂದು. ಅಂದು ನೀವು ಚಂದ್ರನನ್ನು ನೋಡಿದಿರಾದರೆ ಅದರ ಪಕ್ಕದ ಗುರು ಗ್ರಹವನ್ನು ಖಂಡಿತಾ ಗುರುತಿಸಬಲ್ಲಿರಿ. ಆದರೆ ಅಂದಿನವರೆಗೂ ಕಾಯಬೇಕಾಗಿಲ್ಲ. ಇದಕ್ಕೆ ಮೊದಲೇ ಗುರುತಿಸಿದ್ದರೆ ಚಂದ್ರನ ಬೆಳಕು ಕ್ಷೀಣಕಾಯಗಳ ಹುಡುಕಾಟಕ್ಕೆ ಎಂತಹ ಅಡ್ಡಿ ಉಂಟುಮಾಡುತ್ತದೆ ಎಂಬುದರ ಪ್ರಾತ್ಯಕ್ಷಿಕೆ ದೊರಕಲಿದೆ. ಏಕೆಂದರೆ ಉಪಗ್ರಹಗಳು ಮತ್ತು ಯುರೇನಸ್‌ಅನ್ನು ಹುಡುಕುವುದು ಕಷ್ಟವೇ. ಅಷ್ಟೇಕೆ ? ಆಕಾಶಗಂಗೆಯನ್ನು ಗುರುತಿ ಸುವುದೂ ಸಾಧ್ಯವಾಗುವುದಿಲ್ಲ.

ಈ ತಿಂಗಳ ಅಮಾವಾಸ್ಯೆಗೆ ಏಳು ಗಂಟೆಗೆ ಮುಂಚೆ ಚಂದ್ರ - ಭೂಮಿ ದೂರ ಕನಿಷ್ಠವಾಗಿರುತ್ತದೆ. ಅಂದರೆ ಅಮಾವಾಸ್ಯೆಯ ಭರತ - ಇಳಿತಗಳು ಎಂದಿಗಿಂತ ಜೋರು ಎನ್ನಬಹುದು. ಆದರೆ ಮಳೆಗಾಲದ ಅಬ್ಬರದಲ್ಲಿ ಈ ವ್ಯತ್ಯಾಸ ಗೋಚರಿಸುವುದೇ ? ಗಮನಿಸಿ ನೋಡಿ.

**ಖಗೋಳ ದಿನಚರಿ**

೧ ಚಾಂದ್ರಮಾಸದ ಕೊನೆಯ ಪಾದ - ಮಂಗಳ, ಚಿತ್ರಾ ಮತ್ತು ಶುಕ್ರ ಒಟ್ಟಾಗಿ ಕಾಣುತ್ತವೆ. *

೮ ಅಮಾವಾಸ್ಯೆ ೧೬:೦೦ಕ್ಕೆ; ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೯:೨೮ಕ್ಕೆ

೯ ಚಂದ್ರ - ಶನಿ ನಡುವೆ ಕನಿಷ್ಠ ಕೋನ

೧೧ ಶುಕ್ರ - ಚಂದ್ರ - ಮಂಗಳ ಪುಟ್ಟ ಗುಂಪು; ಶುಕ್ರದ ಆಚ್ಛಾದನೆ * (ಭಾರತಕ್ಕೆ ಕಾಣುವುದಿಲ್ಲ)

೧೩ ಚಂದ್ರ - ಜ್ಯೇಷ್ಠಾ ಜೋಡಿ *

೧೪ ಚಾಂದ್ರಮಾಸದ ಮೊದಲ ಪಾದ

೧೭-೧೯ ಗುರು - ಯುರೇನಸ್ ಒಂದು ಡಿಗ್ರಿಗೂ ಕಡಿಮೆ ಅಂತರದಲ್ಲಿ *

೧೯ ಬುಧ ಗ್ರಹದ ಗರಿಷ್ಠ ಕೋನೋನ್ನತಿ * (ಮುಂಜಾವು)

೨೧ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ

೨೦ -೨೧ ಗುರು - ಯುರೇನಸ್ ಇವುಗಳ ವಿಯುತಿ (ಭೂಮಿಯಿಂದ ಕನಿಷ್ಠ ದೂರದಲ್ಲಿ)

೨೩ ಹುಣ್ಣಿಮೆ ೧೪:೧೭ಕ್ಕೆ ; ಶರದ್ ವಿಷುವ; ಚಂದ್ರದ ಪಕ್ಕ ಗುರು *

೨೮ ಚಂದ್ರ - ಕೃತ್ತಿಕಾ ಜೋಡಿ

೨೯ ಶುಕ್ರ - ಮಂಗಳ ನಡುವೆ ಕನಿಷ್ಠ ಕೋನ *

(* ಛಾಯಾಗ್ರಹಣಕ್ಕೆ ಉತ್ತಮ ಸದವಕಾಶ)

ಸೆಪ್ಟೆಂಬರ್ ೧೧ರ ಸಂಜೆ ಶುಕ್ರ, ಚಂದ್ರ ಮತ್ತು ಮಂಗಳ

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸಿಂಧೂ ನಾಗರಿಕತೆ ಲಿಪಿಯ ರಹಸ್ಯ

## -ಒಂದು ವಿಶ್ಲೇಷಣೆ

ಡಾ॥ ಸಿದ್ಧಲಿಂಗ ಸ್ವಾಮಿ

ಪ್ರಾಚೀನ ಇತಿಹಾಸವನ್ನು ಅಧ್ಯಯನ ಮಾಡುವಾಗ ಸಿಂಧೂ ನದಿ ನಾಗರಿಕತೆಯು ಇತಿಹಾಸಕಾರರ ಮತ್ತು ಸಾಮಾನ್ಯ ಮನುಷ್ಯನ ಕುತೂಹಲವನ್ನು ಈಚಿನ ದಿನಗಳಲ್ಲಿ ಮತ್ತಷ್ಟು ಹೆಚ್ಚಿಸುತ್ತಿದೆ. ಭಾರತೀಯ ಉಪಖಂಡದ ಮೊದಲ ಅಧ್ಯಾಯದ ಇತಿಹಾಸ ಸ್ಪಷ್ಟವಾಗಿ ಗೋಚರವಾಗುವುದಕ್ಕಿಂತಲೂ ಹೆಚ್ಚಾಗಿ ಒಗಟಾಗಿ ಉಳಿದಿರುವ ವಿಷಯಗಳೇ ಹೆಚ್ಚಾಗಿವೆ. ಈ ನಾಗರಿಕತೆ ಇನ್ನೂ ಹಲವಾರು ರಹಸ್ಯಗಳನ್ನು ಬಚ್ಚಿಟ್ಟುಕೊಂಡಿದೆ. ಈ ಕಾರಣದಿಂದಾಗಿ ಭಾರತೀಯ ಉಪಖಂಡದ ಸಾಮೂಹಿಕ ಅಸ್ತಿತ್ವದ ರಹಸ್ಯಗಳು ಅಂದರೆ, ನಾವು ಯಾರು ? ಎಲ್ಲಿಂದ ಬಂದವರು ? ನಾವು ಹೇಗಿದ್ದೆವು ? ಇವೇ ಮುಂತಾದ ಪ್ರಶ್ನೆಗಳು ಇನ್ನೂ ಒಗಟಾಗಿವೆ.

ಸಿಂಧೂ ನದಿ ನಾಗರಿಕತೆ ಕ್ರಿ. ಪೂ. ೨೫೦೦ - ೨೦೦೦ದವರೆಗೆ (ಕೆಲವು ವಿದ್ವಾಂಸರು ಕಾಲವನ್ನು ಕ್ರಿ. ಪೂ. ೧೮೦೦ ಎಂದು ಹೇಳಿದ್ದಾರೆ) ಅಸ್ತಿತ್ವದಲ್ಲಿದ್ದು ಇಲ್ಲಿ ದೊರಕಿರುವ ಅಮೂಲ್ಯವಾದ ಪುರಾತತ್ವ ಅವಶೇಷಗಳು ಬಹಳಷ್ಟು ಮಾಹಿತಿಯನ್ನು ಒದಗಿಸಿದರೂ ಸಿಂಧೂ ಲಿಪಿಯನ್ನು ಓದಲಾಗದೆ ಇರುವುದು ಈ ನಾಗರಿಕತೆಯನ್ನು ಅರ್ಥಮಾಡಿಕೊಳ್ಳಲು ಪೂರ್ಣ ಪ್ರಮಾಣದಲ್ಲಿ ಇನ್ನೂ ಸಾಧ್ಯವಾಗುತ್ತಿಲ್ಲ. ಇದಲ್ಲದೆ ಎರಡು (ವಿರೋಧಿ) ರಾಷ್ಟ್ರಗಳ ನಡುವೆ ಈ ನಾಗರಿಕತೆಯ ಕುರುಹುಗಳು ಹಂಚಿಹೋಗಿರುವುದೂ ಸಹ ಈ ನಾಗರಿಕತೆಯ ಅಧ್ಯಯನಕ್ಕೆ ತೊಡಕಾಗಿದೆ. ಇತ್ತೀಚಿನ ಕಾಲದಲ್ಲಿ ಹಿಂದುತ್ವವಾದಿ ಸಂಶೋಧಕರು ಸಿಂಧೂ ನದಿ ನಾಗರಿಕತೆಯನ್ನು ವೇದಗಳ ಕಾಲಕ್ಕೆ ಸಮೀಕ್ಷಿಸುವುದನ್ನು ಸಹ ಮನಗಾಣಬಹುದಾಗಿದೆ. ಅಂದರೆ ಪ್ರಾಚ್ಯ ಅವಶೇಷಗಳನ್ನು ತಮ್ಮ ಇಷ್ಟ ಬಂದ ಹಾಗೆ ಕೋಮುವಾದಿ ದೃಷ್ಟಿಕೋನದಲ್ಲಿ ಅರ್ಥೈಸುವ ಪ್ರಯತ್ನಗಳು ಇಂದಿಗೂ ನಡೆಯುತ್ತಿವೆ.



ಇಲ್ಲಿಯವರೆಗೆ ನೂರಾರು ಲೇಖನಗಳು ಸಿಂಧೂ ಲಿಪಿಯ ರಹಸ್ಯವನ್ನು ಭೇದಿಸಲು ಪ್ರಯತ್ನಮಾಡಿವೆ. ಆದರೆ ಸಮಸ್ಯೆ ಮಾತ್ರ ಹಾಗೆಯೇ ಉಳಿದಿದೆ. ಕಾರಣ ಪ್ರತಿಯೊಬ್ಬ ವಿದ್ವಾಂಸರೂ ತಮಗೆ ತೋಚಿದ ರೀತಿಯಲ್ಲಿ ಚಿತ್ರ ಸಂಕೇತಗಳನ್ನು ಅರ್ಥೈಸಲು ಯತ್ನಿಸಿದ್ದಾರೆ. ಅಂದರೆ ಈ ಚಿತ್ರ ಸಂಕೇತಗಳನ್ನು ಬೇರೆಡೆಗಳಲ್ಲಿ ದೊರಕುವ ಓದಬಹುದಾದ ಲಿಪಿಗಳಲ್ಲಿರುವ ಚಿತ್ರ ಸಂಕೇತಗಳ ಜೊತೆ ಹೋಲಿಸಿ ಸಿಂಧೂ ಲಿಪಿಯನ್ನು ಧ್ವನ್ಯಾತ್ಮಕವಾಗಿ ಅರ್ಥೈಸುವುದರಿಂದ ಲಿಪಿಯನ್ನು ಓದಲು ತೊಡಕಾಗಿದೆ. ಸಿಂಧೂ ಲಿಪಿಯು ಕೆಲವು ಪುರಾತನ ಲಿಪಿಗಳ ಜೊತೆ ಸಾಮ್ಯತೆಯನ್ನು ಹೊಂದಿದ್ದರೂ ಇದನ್ನು ನಿಖರವಾಗಿ ಅರ್ಥೈಸಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ, ಸಿಂಧೂ ಲಿಪಿಯಲ್ಲಿರುವ ಬೆಟ್ಟದ ಚಿತ್ರವನ್ನು ಸುಮೇರಿಯನ್, ಈಜಿಪ್ಷಿಯನ್, ಹಿಟೈಟ್ ಮತ್ತು ಚೀನೀ ಲಿಪಿಗಳ ಜೊತೆ ತಾದಾತ್ಮ್ಯಕವಾಗಿ ನೋಡಲು ಸಾಧ್ಯವಾಗಿದೆ. ಆದರೆ ಈ ಪ್ರತಿಯೊಂದು ಸಂಕೇತಗಳೂ ವಿವಿಧ ಭಾಷೆ, ಧ್ವನಿಯನ್ನು ಹೊಂದಿವೆ.

ಇಂತಹ ಎಲ್ಲ ಇತಿ-ಮಿತಿಗಳ ನಡುವೆ ಹೊಸ ಸಾಕ್ಷ್ಯಗಳ ಹಿನ್ನೆಲೆಯಲ್ಲಿ ಈ ನಾಗರಿಕತೆಯ ವಿಮರ್ಶೆಯನ್ನು ಹಲವು ಪ್ರಸಿದ್ಧ ವಿದ್ವಾಂಸರು ತಮ್ಮ ವಿದ್ವತ್ಪೂರ್ಣ ಸಂಶೋಧನೆಗಳಿಂದ ಜನಸಮೂಹಕ್ಕೆ ಪ್ರಸ್ತುತಪಡಿಸುತ್ತಿದ್ದಾರೆ. ಇಂಥವರಲ್ಲಿ ಪ್ರಮುಖರೆಂದರೆ ಪ್ರೊ॥ ಇರಾವತಂ ಮಹದೇವನ್, ಫಿನ್‌ಲ್ಯಾಂಡಿನ ವಿದ್ವಾಂಸರಾದ ಪ್ರೊ॥ ಆಸ್ಕೋ ಪರ್ಪೋಲಾ, ಸೋವಿಯತ್ ವಿದ್ವಾಂಸ ಯೂರಿ ನೊರಾಜೋವ್, ಬಿ. ವಿ. ಸುಬ್ಬರಾಯಪ್ಪ ಮುಂತಾದವರು. ಇವರೆಲ್ಲರ ಸಂಶೋಧನೆಗಳು ಮಹತ್ವಪೂರ್ಣವಾಗಿವೆ. ಇದಕ್ಕೆ ತದ್ವಿರುದ್ಧವಾದ ವಿಮರ್ಶೆಗಳನ್ನು ಎಸ್. ಆರ್. ರಾವ್, ಎನ್. ಎಸ್. ರಾಜಾರಾಂ, ಡಾ॥ ಡಿ. ಎನ್. ಝಾ, ಡೇವಿಡ್ ಫ್ರಾಲಿ, ಮುಂತಾದವರೂ ಸಹ ಪ್ರತಿಪಾದಿಸುತ್ತಿದ್ದಾರೆ.

ಸಿಂಧೂ ನದಿ ನಾಗರಿಕತೆಯ ಲಿಪಿಯನ್ನು ಅರ್ಥೈಸುವ ಪ್ರಯತ್ನಗಳನ್ನು ೧೯೨೧ರಿಂದಲೂ ಮಾಡಲಾಗುತ್ತಿದೆ ಮತ್ತು ಸತತವಾಗಿ ನಡೆಯುತ್ತಿರುವ ಉತ್ಖನನಗಳಿಂದ ಹಳೆಯ ಸ್ಥಳಗಳು ಮತ್ತು ನೂತನ ಉತ್ಖನನ ನಿವೇಶನಗಳಲ್ಲಿ ದೊರಕಿರುವ ಮುದ್ರೆಗಳನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಲಾಗುತ್ತಿದೆ.

ಪ್ರೊ॥ ಇರಾವತಂ ಮಹದೇವನ್ ೧೯೭೦ರಲ್ಲಿ ಜವಾಹರಲಾಲ್ ನೆಹರೂ ಫೆಲೋಶಿಪ್‌ನ ಅಡಿಯಲ್ಲಿ ಸಿಂಧೂ ಲಿಪಿಯ ಸಮಗ್ರ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದು, ಇದರ ಅಧ್ಯಯನಕ್ಕೆ ಕಂಪ್ಯೂಟರ್‌ನ ಸಹಾಯವನ್ನು ಪಡೆಯಲಾಗಿದೆ. ಮುಂಬೈನ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸಂಸ್ಥೆಯು ಇದಕ್ಕಾಗಿ ಕಂಪ್ಯೂಟರ್ ಪ್ರೋಗ್ರಾಮೊಂದನ್ನು ತಯಾರಿಸಿದ್ದು ಅದರ ನೆರನಿಂದ ಬಹುಶಿಸ್ತೀಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇದರ ಫಲವಾಗಿ ೧೯೭೭ರಲ್ಲಿ ಮಹದೇವನ್‌ರವರು ಈ ಸಂಶೋಧನೆಯನ್ನು The Indus Script – Texts, Concordants and Tables ಎಂಬ ಹೆಸರಿನಲ್ಲಿ ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ಗ್ರಂಥವನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಪ್ರಕಟಿಸಿದೆ. ಈ ಗ್ರಂಥವು ಮುಂದಿನ ಸಂಶೋಧನೆಗಳಿಗೆ ಅನುವಾಗುವಂತೆ ಸಂಶೋಧನಾ ಆಕರಗಳನ್ನು ಸುಸಂಬದ್ಧವಾಗಿ ಮಾಡಿದೆ; ಆದರೆ ಸಿಂಧೂ ಲಿಪಿಯ ಭಾಷೆಯು ಯಾವುದೆಂಬುದನ್ನು, ಯಾವುದೇ ಪ್ರಮೇಯವನ್ನು ಪ್ರತಿಪಾದಿಸುವುದಿಲ್ಲ.

ಈ ಕಂಪ್ಯೂಟರ್ ಆಧಾರದ ಮಾಹಿತಿಯನ್ನು ಬಳಸಿಕೊಂಡು ಸಿಂಧೂ ಲಿಪಿಯ ಭಾಷೆಯನ್ನು ಪತ್ತೆ ಮಾಡುವುದಕ್ಕೆ ವಿವಿಧ ವಿದ್ವಾಂಸರು ಇನ್ನೂ ಪ್ರಯತ್ನಿಸುತ್ತಿದ್ದಾರೆ. ಆದರೆ ಕೆಲವು ಸಂಶೋಧಕರು ಇದನ್ನು ಎಡದಿಂದ ಬಲಕ್ಕೆ ಓದಬೇಕೆಂದು ಮತ್ತೆ ಕೆಲವರು ಬಲದಿಂದ ಎಡಕ್ಕೆ ಓದಬೇಕೆಂದು ಹೇಳುವುದು ವಿವಾದದ ಮುಗ್ಗಟ್ಟನ್ನು ಎತ್ತಿ ತೋರಿಸುತ್ತದೆ. ಈ ಲಿಪಿ ಸಂಸ್ಕೃತ ಇಲ್ಲವೆ ತಮಿಳು ಎಂದು ಸಹ ವಾದಿಸಲಾಗುತ್ತಿದೆ.

ಪ್ರೊ॥ ಇರಾವತಂ ಮಹದೇವನ್ ಅವರ ಸಂಶೋಧನೆಯ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಗಮನಿಸಬಹುದು. ಅವರ ಪ್ರಕಾರ –

ಸಿಂಧೂ ಲಿಪಿಯ ಬರವಣಿಗೆ ಬಲದಿಂದ ಎಡಕ್ಕೆ ಇದೆ ಎಂಬುದನ್ನು ಒಪ್ಪಲಾಗಿದೆ. ಬಹುಶಃ ಸಿಂಧೂ ಭಾಷೆ ಪ್ರೋಟೋ-ದ್ರವಿಡಿಯನ್ ಮೂಲದ್ದಾಗಿರಬೇಕೆಂದು ಅವರ ವಾದ. ಇದಕ್ಕೆ ಪುಷ್ಟಿಯಾಗಿ ಕೆಲವು ಉದಾಹರಣೆಗಳನ್ನು ಪ್ರೊ॥ ಮಹದೇವನ್ ಮಂಡಿಸಿದ್ದಾರೆ :

* ಸಿಂಧೂ ನದಿ ನಾಗರಿಕತೆ ನಗರ ನಾಗರಿಕತೆಯ ಲಕ್ಷಣವನ್ನು ಹೊಂದಿದೆ. ಆದರೆ ವೈದಿಕ ನಾಗರಿಕತೆ ಗ್ರಾಮೀಣದ ಮತ್ತು ಪಶುಪಾಲನೆಯಂತಹದ್ದಾಗಿದೆ.



ಋಗ್ವೇದದಲ್ಲಿ ನಗರ ಜೀವನದ ಒಂದೇ ಒಂದು ವಿವರಣೆಯೂ ಇರುವುದಿಲ್ಲ.

* ಸಿಂಧೂ ಮುದ್ರೆಗಳಲ್ಲಿ ಹಲವಾರು ಪ್ರಾಣಿಗಳು ಚಿತ್ರಿತವಾಗಿದ್ದರೂ ಕುದುರೆಯ ಒಂದೇ ಒಂದು ಚಿತ್ರವೂ ಇಲ್ಲಿಯವರೆಗೆ ದೊರೆತಿಲ್ಲ. ಸಿಂಧೂ ನದಿ ನಾಗರಿಕತೆಯ ಕಲೆಯಲ್ಲಿ ರಥದ ಚಕ್ರಗಳಲ್ಲಿ ಅರವು ಚಿತ್ರಿತವಾಗಿಲ್ಲ. ಆದರೆ ವೈದಿಕ ನಾಗರಿಕತೆಯಲ್ಲಿ ರಥದ ಚಕ್ರಗಳಲ್ಲಿ ಅರಗಳನ್ನು ನೋಡಬಹುದಾಗಿದೆ, ಏಕೆಂದರೆ ಅಂತಹ ವಿವರಣೆಗಳು ಸಾಕಷ್ಟಿವೆ.

* ಹರಪ್ಪ ಸಂಸ್ಕೃತಿಯ ಧರ್ಮ ಏನೆಂಬುದನ್ನು ತಿಳಿಯಲು ಮುದ್ರೆಗಳಲ್ಲಿರುವ ಪಶುಪತಿಯ ಚಿತ್ರ, ಮಾತೃದೇವತೆ, ಅರಳಿ ಮರ, ಸರ್ಪ ಮತ್ತು ಲಿಂಗದ ಚಿತ್ರಗಳನ್ನು ನೋಡಬಹುದಾಗಿದೆ. ಆದರೆ ಇಂತಹ ಆರಾಧನೆ ಋಗ್ವೇದದಲ್ಲಿ ಕಂಡುಬರುವುದಿಲ್ಲ. ಈ ಉದಾಹರಣೆಗಳು ಹರಪ್ಪ ನಾಗರಿಕರು ಮತ್ತು ವೈದಿಕ ಸಂಸ್ಕೃತಿಯ ನಾಗರಿಕರು ಒಂದೇ ಎಂಬುದನ್ನು ನಿರಾಕರಿಸುತ್ತದೆ.

ಆದರೆ ಇದು ಆರ್ಯ ಸಂಸ್ಕೃತಿಯಲ್ಲವೆಂದು ಪ್ರತಿಪಾದಿಸಿರುವವರ ಪೈಕಿ ಹಲವರು ಇದು ತನ್ನಷ್ಟಕ್ಕೆ ತಾನೇ ದ್ರಾವಿಡ ಮೂಲದ್ದು ಎಂದು ಹೇಳಹೊರಟಿದ್ದಾರೆ. ದ್ರಾವಿಡ ಮೂಲದ್ದು ಎಂಬ ವಾದವನ್ನು ಪುಷ್ಟೀಕರಿಸಲು ಸಹ ಅವರ ಪ್ರಕಾರ ಕೆಲವು ಸಾಂದರ್ಭಿಕ ಸಾಕ್ಷಿಗಳು ದೊರೆತಿವೆ :

* ದ್ರಾವಿಡ ಭಾಷೆಯಾದ ಬ್ರೂಹಿ, ಉತ್ತರ ಭಾರತದಲ್ಲಿ ಅಸ್ತಿತ್ವ ಉಳಿಸಿಕೊಂಡಿದೆ.
* ಋಗ್ವೇದದಲ್ಲಿ ಹಲವಾರು ದ್ರಾವಿಡ ಮೂಲ ಶಬ್ದಗಳು ಬಳಕೆಯಲ್ಲಿವೆ.
* ಪ್ರಾಕೃತ ಮೂಲದ ಭಾಷೆಗಳ ಮೇಲೆ ದ್ರಾವಿಡ ಭಾಷೆಯ ಪ್ರಭಾವವನ್ನು ಉತ್ತರ ಭಾರತದಲ್ಲಿ ಗುರುತಿಸಬಹುದಾಗಿದೆ.

ಈ ಸಾಕ್ಷ್ಯಗಳು ದ್ರಾವಿಡ ಭಾಷೆಗಳು ಉತ್ತರ ಭಾರತದಲ್ಲಿಯೂ ಸಹ ಆಡು ಭಾಷೆಗಳಾಗಿದ್ದವೆಂದು ಸೂಚಿಸುತ್ತವೆ. ಆದುದರಿಂದಾಗಿ ಸಿಂಧೂ ಬರವಣಿಗೆಗಳಲ್ಲಿ ಸಹ ದ್ರಾವಿಡ ಭಾಷೆಗಳ ಪ್ರಭಾವವನ್ನು ಗುರುತಿಸಲು ಸಾಧ್ಯವಾಗುತ್ತಿದೆ. ಆರ್ಯ ಮತ್ತು ದ್ರಾವಿಡ ಎಂಬುವು ಭಾಷೆಗಳೇ ವಿನಾ ಜನಾಂಗವಲ್ಲ. ಒಂದು ಭಾಷೆಯ ಜನ ಬೇರೆ ಭಾಷೆಯನ್ನು ಮಾತನಾಡಲು ಸರಾಗವಾಗಿ ತಮ್ಮನ್ನು ತಾವು ಬದಲಾಯಿಸಿಕೊಳ್ಳಬಹುದು. ಆದ್ದರಿಂದ ಸಿಂಧೂ ಲಿಪಿಯ ಬಗೆಗಿನ ಸಂಶೋಧನೆಗಳನ್ನು ಜನಾಂಗೀಯ ದೃಷ್ಟಿಯಿಂದ ನೋಡುವುದು ಸರಿಯಲ್ಲ.

ಲಿಪಿಯ ರಹಸ್ಯವನ್ನು ಭೇದಿಸುವುದು ಅಷ್ಟು ಸುಲಭದ ಕಾರ್ಯವಲ್ಲ. ಬಹುತೇಕ ಪ್ರಾಚೀನ ಲಿಪಿಗಳನ್ನು ಅರ್ಥೈಸಲು ಈ ಮೊದಲೇ ಗೊತ್ತಿರುವ ಭಾಷೆಯ ಲಿಪಿ ಮತ್ತು ಭಾಷಾಂತರಗಳನ್ನು ಬಳಸಿ ಯತ್ನಿಸಲಾಗಿದೆ. ಆದರೆ ಸಿಂಧೂ ಲಿಪಿಯ ಸಂದರ್ಭದಲ್ಲಿ ಅಂತಹ ಭಾಷಾಂತರಗಳು ಲಭ್ಯವಿಲ್ಲ. ಸಿಂಧೂ ಲಿಪಿಯು ಚಿತ್ರ ಸಂಕೇತಾತ್ಮಕವೆಂದು ಬಹುಪಾಲು ವಿದ್ವಾಂಸರ ವಿಶ್ಲೇಷಣೆಯಾಗಿದೆ. ಅಲ್ಲದೆ ಸಿಂಧೂ ಲಿಪಿಗೂ, ಅಸ್ತಿತ್ವದಲ್ಲಿದ್ದ ಬೇರೆ ನಾಗರಿಕತೆಗಳ ಲಿಪಿಗಳಿಗೂ ಸ್ಪಷ್ಟವಾಗಿ ಸಂಬಂಧವಿಲ್ಲವೆಂದು ಅಭಿಪ್ರಾಯಪಡಲಾಗಿದೆ. ಇದಕ್ಕೆ ಕಾರಣ ಲಭ್ಯವಿರುವ ಸಿಂಧೂ ಲಿಪಿಯ ರಚನೆಗಳ ಮಾಹಿತಿಯು ದೀರ್ಘವಾದುವುಗಳೇನಲ್ಲ. ಸಿಂಧೂ ಲಿಪಿಯಲ್ಲಿ ಅತ್ಯಂತ ಉದ್ದವಾದ ರಚನೆ ೨೬ ಚಿಹ್ನೆಗಳನ್ನು ಹೊಂದಿದೆ. ಅಂದರೆ ಸಂಪೂರ್ಣ ವಾಕ್ಯರಚನೆಯ ರೀತಿಯಲ್ಲಿ ಲಿಪಿಯನ್ನು ಅರ್ಥೈಸಲು ಸಾಧ್ಯವಾಗಿಸಿಲ್ಲ. ಪದಪುಂಜಗಳ ನಡುವೆ ಸ್ಥಳವಿಲ್ಲದೆ ಇರುವುದು ಸಹ ಲಿಪಿಯ ರಹಸ್ಯ ಭೇದಿಸುವಲ್ಲಿ ತೊಡಕಾಗಿದೆ. ಬಹಳಷ್ಟು ಸಂಕೇತಗಳು ಅಥವಾ ಚಿಹ್ನೆಗಳು ಚಿತ್ರ ರೂಪದಲ್ಲಿರುವುದರಿಂದ ಆ ಚಿಹ್ನೆಗಳು ಮತ್ತು ಚಿತ್ರಗಳು ಏನನ್ನು ಸೂಚಿಸುತ್ತವೆ ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ.

ಹಾಗಾದರೆ ಸಿಂಧೂ ಲಿಪಿಯನ್ನು ಅರ್ಥೈಸುವ ವಿಧಾನ ಯಾವುದೆಂಬುದನ್ನು ನಿರ್ಧರಿಸಬೇಕಾಗಿದೆ. ಅಂದರೆ ಲಭ್ಯವಿರುವ ಎಲ್ಲಾ ರಚನೆಗಳನ್ನೂ ಗ್ರಂಥಸ್ಥವಾಗಿ ಸಂಪಾದಿಸಿ ವಿಶ್ಲೇಷಿಸಲಾಗುತ್ತಿದೆ. ಈ ಸಂಪಾದಿತ ಚಿತ್ರ ಸಂಕೇತಗಳನ್ನು ಕಂಪ್ಯೂಟರ್ ಮೂಲಕ ಪ್ರತಿಯೊಂದು ಚಿಹ್ನೆಯನ್ನು ಕ್ರಮಾನುಗತವಾಗಿ ಜೋಡಿಸಿ ಅವುಗಳಲ್ಲಿರಬಹುದಾದ ಏಕರೂಪತೆ ಇಲ್ಲವೆ ವೈವಿಧ್ಯತೆಯನ್ನು ಗುರುತಿಸಲಾಗುತ್ತಿದೆ.

ಸಿಂಧೂ ಲಿಪಿಯನ್ನು ಓದಲು ಲಿಪಿಯ ಭಾಷೆ ಯಾವುದೆಂದು ಖಚಿತಪಡಿಸಿಕೊಂಡು ಬೇರೆ ಭಾಷಾ ಕುಟುಂಬದ ಸಾಮೀಪ್ಯವನ್ನು ಗುರುತಿಸಿ ಆ ಭಾಷೆಯ ಸ್ವರ, ವ್ಯಂಜನಗಳ ಜೊತೆ ಹೋಲಿಸಿ ಲಿಪಿಯ ರಹಸ್ಯವನ್ನು ಭೇದಿಸಬೇಕು. ಸಿಂಧೂ ಸಂಸ್ಕೃತಿಯ ಜನಸಂಖ್ಯೆ ಸುಮಾರು ೧೦ ಲಕ್ಷ ಎಂದು ಅಂದಾಜಿಸಲಾಗಿದೆ. ಆ ಸಂಸ್ಕೃತಿಯು ಇಲ್ಲವಾದಾಗ ಈ ಜನಸಂಖ್ಯೆಯ ಪೈಕಿ ಹಲವರಾದರೂ ಉಳಿದುಕೊಂಡಿರುತ್ತಾರೆ. ಆದ್ದರಿಂದ ಸಿಂಧೂ ನದಿ ನಾಗರಿಕತೆಯ ನಂತರದ ವೈದಿಕ ಕೃತಿಗಳಲ್ಲಿ ಸಿಂಧೂ ಭಾಷೆಯ ಕೆಲವು ಕುರುಹುಗಳು ಉಳಿದುಕೊಂಡಿರಬಹುದೆಂದು ಭಾವಿಸಲಾಗಿದೆ. ಬಹುಶಃ ಕ್ರಿ. ಪೂ. ೨೦೦೦ದ ವೇಳೆಗೆ ವೈದಿಕ ಜನರ ವಲಸೆ ಆಗಿರಬಹುದೆಂದು ನಂಬಲಾಗಿದೆ. ಅವತ್ತಿನಿಂದ ಆರ್ಯನ್ ಭಾಷೆಯನ್ನು ಈ ಪ್ರದೇಶದಲ್ಲಿ ಬಳಸಲು ಪ್ರಾರಂಭಿಸಲಾಗಿದೆ. ಆದರೆ ಈ ಭಾಷೆಯನ್ನು ಹರಪ್ಪ ಸಂಸ್ಕೃತಿಯ ಜನ ಬಳಸಿರಲು ಸಾಧ್ಯವೇ ಇಲ್ಲ. ಋಗ್ವೇದದ ಮಂತ್ರಗಳಲ್ಲಿರುವ ಸಂಸ್ಕೃತಿ ಸಿಂಧೂ ಸಂಸ್ಕೃತಿಗಿಂತ ಭಿನ್ನವಾದುದು. ಹಿಂದೆಯೇ ಗಮನಿಸಿದಂತೆ, ಬಹುಮುಖ್ಯವಾದ ಆಧಾರವೆಂದರೆ ಇಂಡೋ-ಆರ್ಯನ್ ಜನಾಂಗಗಳಲ್ಲಿ ಪಳಗಿದ ಕುದುರೆಯು ಬಹುಪಾತ್ರವನ್ನು ವಹಿಸಿರುವುದು. ಆದರೆ ಹರಪ್ಪ ಸಂಸ್ಕೃತಿಯಲ್ಲಿ ಈ ಯಾವ ಕುರುಹೂ ಪತ್ತೆಯಾಗಿಲ್ಲ.

ಸಿಂಧೂ ಲಿಪಿಯ ಅತ್ಯಂತ ಗಮನಾರ್ಹ ಲಕ್ಷಣಗಳೆಂದರೆ ಅದರ ಸ್ಪಷ್ಟತೆ, ನೇರ ಮತ್ತು ಸರಳ ರೇಖಾತ್ಮಕ ಸ್ವರೂಪ ಹಾಗೂ ಅದರ ಚಿಹ್ನೆಗಳ ವಿಸ್ತಾರ ಹಾಗೂ ವೈವಿಧ್ಯ. ಗೆರೆಗಳ ಮತ್ತು ಸ್ವರ ಚಿಹ್ನೆಗಳ ಸೇರ್ಪಡೆಯಿಂದ ಚಿಹ್ನೆಗಳನ್ನು ಬದಲಾಯಿಸುವಲ್ಲಿ ಮತ್ತು ಒಂದು ಚಿಹ್ನೆಯನ್ನು ಇನ್ನೊಂದರೊಡನೆ ಸಂಯುಕ್ತಾಕ್ಷರವಾಗಿ ಜೋಡಿಸುವಲ್ಲಿ ಲಿಪಿಯ ಕಲ್ಪನಾ ಪ್ರತಿಭೆ ಅಭಿವ್ಯಕ್ತವಾಗಿದೆ. ಬಹುತೇಕ ಚಿಹ್ನೆಗಳು ವಿವೃತ ಅಥವಾ ಸಂಯುಕ್ತಾಕ್ಷರಗಳನ್ನು ಸೂಚಿಸುತ್ತವೆ, ಹಾಗೂ ಉಳಿದವು ಭಾವ ಲಿಪಿಯಾಗಿ ಕಾರ್ಯ ನಿರ್ವಹಿಸಿರಬಹುದೆಂದು ಭಾವಿಸಲಾಗಿದೆ. ಇದುವರೆಗೆ ಸಿಂಧೂ ಲಿಪಿಯಿಂದ ಸುಮಾರು ೪೦೦ ವಿಭಿನ್ನ ಚಿಹ್ನೆಗಳನ್ನು ಆರಿಸಿ ಪಟ್ಟಿಮಾಡಲಾಗಿದೆ.



*ಕೆಲವು ಸಿಂಧೂ ಚಿಹ್ನೆಗಳು (ಇರಾವತಂ ಮಹಾದೇವನ್ ಪುಸ್ತಕದಿಂದ)*

ಐತಿಹಾಸಿಕವಾಗಿ ಹರಪ್ಪ ಜನರ ಲಿಪಿಯು ಪ್ರೋಟೋ-ದ್ರವಿಡಿಯನ್ ಎಂದು ಬಹುಮಟ್ಟಿಗೆ ನಂಬಲಾಗುತ್ತಿದೆ. ದ್ರಾವಿಡ ಭಾಷಾ ಕುಟುಂಬದ ೨೬ ಭಾಷೆಗಳನ್ನು ಬಹುತೇಕ ದಕ್ಷಿಣ ಭಾರತ ಮತ್ತು ಮಧ್ಯ ಭಾರತದಲ್ಲಿ ಬಳಸಲಾಗುತ್ತಿದೆ. ಆದರೆ ಈ ಕುಟುಂಬದ ಒಂದು ಭಾಷೆ ಬ್ರೂಹಿ ಬಲೂಚಿಸ್ಥಾನದಲ್ಲಿ ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿದೆ. ಈ ಕಾರಣಕ್ಕಾಗಿ ಬಹುತೇಕ ಭಾಷಾ ವಿದ್ವಾಂಸರು ಸಿಂಧೂ ಲಿಪಿಯನ್ನು ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿರಬೇಕೆಂಬ ಊಹೆಯನ್ನು ಪುಷ್ಟೀಕರಿಸಿದ್ದಾರೆ. ಇದಲ್ಲದೆ ದ್ರಾವಿಡ ಭಾಷೆಯ ಶಬ್ದಗಳು ಸಂಸ್ಕೃತದಲ್ಲಿಯೂ ಕಂಡುಬರುವುದರಿಂದ ಬಹುಶಃ ಹರಪ್ಪ ಜನ ದ್ರಾವಿಡ ಭಾಷೆಯನ್ನೇ ಮಾತನಾಡುತ್ತಿದ್ದರೆಂದು ಊಹಿಸಲಾಗಿದೆ. (ಅಂದರೆ, ಸಂಸ್ಕೃತಕ್ಕೆ ಹರಪ್ಪ ಭಾಷೆಯ ಪ್ರವೇಶ ಬಹು ಹಿಂದೆಯೇ ಆಯಿತು, ಎಂದರ್ಥ.)

**ಸಿಂಧೂ ಲಿಪಿಯ ವರ್ಗೀಕರಣ ಪದ್ಧತಿ**

ಇತಿಹಾಸದಲ್ಲಿ ಲಿಪಿ ವ್ಯವಸ್ಥೆಯನ್ನು ಅಧ್ಯಯನ ಮಾಡಿದಾಗ ಅದು ಮೂರು ಹಂತಗಳಲ್ಲಿ ಬೆಳೆದುಬಂದಿರುವುದನ್ನು ಗಮನಿಸುತ್ತೇವೆ. ಮೊದಲ ಹಂತದ ಲಿಪಿಯನ್ನು 'ಲೋಗೋ - ಸಿಲಬಿಕ್' (ಚಿಹ್ನೆಯು ಸಂಪೂರ್ಣ ಪದದ ಅರ್ಥವನ್ನು ವಿವರಿಸಬಲ್ಲದು) ಎನ್ನುತ್ತಾರೆ. ಎರಡು ಮತ್ತು ಮೂರನೆಯ ಹಂತಗಳನ್ನು ಸಿಲಬಿಕ್ ಮತ್ತು ಆಲ್ಫಬೆಟಿಕ್ ಎನ್ನುತ್ತಾರೆ. ಚಿಹ್ನೆಯು ಒಂದರ್ಥವನ್ನು ಸೂಚಿಸುವಂತೆ, ನಂತರದ ಹಂತದಲ್ಲಿ ಚಿಹ್ನೆಯ ಜಾಗದಲ್ಲಿ ಅಕ್ಷರಗಳನ್ನು ಬಳಸಿದಾಗ ಅದೇ ಅರ್ಥವು ಸೂಚಿತವಾಗುತ್ತದೆ. ಅಂದರೆ ಕ್ರಮೇಣ ಪ್ರತಿ ಚಿಹ್ನೆಗೆ ಅಕ್ಷರಗಳಲ್ಲಿ ಅರ್ಥೈಸುವ ಪದ್ಧತಿ ಬೆಳೆದುಬಂದಿರುವುದನ್ನು ಗಮನಿಸಬಹುದು. ಸಿಂಧೂ ಲಿಪಿಯಲ್ಲಿ ಗುರುತಿಸಲಾಗಿರುವ ಚಿಹ್ನೆಗಳು ಸುಮಾರು ೪೦೦. ಬಹುಶಃ ಈ ಎಲ್ಲಾ ಚಿಹ್ನೆಗಳು ಲೋಗೋ -ಸಿಲಬಿಕ್ ಹಂತದ ಲಿಪಿಗಳಾಗಿವೆ. ಇವುಗಳಲ್ಲಿ ಸುಮಾರು ೨೦೦ ಸಮಾನ ಅಂಶಗಳನ್ನು ಹೊಂದಿವೆ. ಸಿಂಧೂ ಲಿಪಿಯ ಲಕ್ಷಣಗಳಿಗೂ ಸುಮೇರಿಯನ್, ಪ್ರೋಟೋ-ಎಲಾಮೈಟ್, ಹಿಟೈಟ್, ಈಜಿಪ್ಷಿಯನ್, ಕ್ರೀಟನ್ ಹಾಗೂ ಚೀನಿ ಲಿಪಿಗಳ ಲಕ್ಷಣಗಳಿಗೂ ಕೆಲವು ಸಾದೃಶ್ಯಗಳಿವೆ. ಈ ಎಲ್ಲಾ ಲಿಪಿಗಳು ಪರಸ್ಪರ ಸಂಬಂಧ ಹೊಂದಿರುವ ಸಾಧ್ಯತೆ ಇದ್ದರೂ ಅದು ಸೀಮಿತವಾದ ಒಂದು ನಿರ್ದಿಷ್ಟ ಹಂತದವರೆಗೆ ಮಾತ್ರ.

ಸಿಂಧೂ ಲಿಪಿಯ ಕಾಲಮಾನದ ಬಗ್ಗೆ ಹೇಳುವುದಾದರೆ ಇದು ಪ್ರೌಢ ಹರಪ್ಪ ಸಂಸ್ಕೃತಿಯ ಹಂತದ್ದಾಗಿದ್ದು ಸಂಪೂರ್ಣ ಬೆಳವಣಿಗೆ ಹೊಂದಿದ ಲಿಪಿಯನ್ನು ಕ್ರಿ. ಪೂ. ೨೫೦೦ - ೨೦೦೦ದ ನಡುವೆ ಆಗಿರಬಹುದೆಂದು ಊಹಿಸಲಾಗಿದೆ. ಹರಪ್ಪದಲ್ಲಿ ಇತ್ತೀಚಿಗೆ ಸುಟ್ಟ ಮುದ್ರೆಯು ಸಿಕ್ಕಿದ್ದು ಅದು ಬಹುಶಃ ಕ್ರಿ. ಪೂ. ೨೮೦೦ರದ್ದೆಂದು ಭಾವಿಸಲಾಗಿದೆ. ಈ ಲಿಪಿಯನ್ನು ಬಹುತೇಕ ಹೋಲುವ ಕುರುಹುಗಳು ಇರಾನ್ ಪ್ರಸ್ಥಭೂಮಿಯ ಲಿಪಿಯಲ್ಲೂ ದೊರೆತಿದೆ. ಸಿಂಧೂ ಲಿಪಿಯು ಸಿರಿಯಾ ಮತ್ತು ಎಲಾಮೈಟ್ ಲಿಪಿಗಳಿಗಿಂತ ಪ್ರಾಚೀನವೆಂದು ಸಹ ಭಾವಿಸಲಾಗಿದೆ. ಮೆಸಪೊಟೇಮಿಯಾ ಮತ್ತು ಈಜಿಪ್ಟ್‌ನಲ್ಲಿ ಕ್ರಿ. ಪೂ. ೧೬೦೦ರಲ್ಲೇ ಸಿಲಬಿಕ್ ಮತ್ತು ಆಲ್ಫಬೆಟಿಕ್ ಪದ್ಧತಿಯು ಆಚರಣೆಯಲ್ಲಿದ್ದುದನ್ನು ಇದು ಸೂಚಿಸುತ್ತದೆ.

ಸಿಂಧೂ ಲಿಪಿಯು ಲೋಗೋ-ಸಿಲಬಿಕ್ ಎನ್ನುವುದರಲ್ಲಿ ಅನುಮಾನವೇ ಇಲ್ಲ. ಈ ಲಿಪಿಯ ರಹಸ್ಯವನ್ನು ಭೇದಿಸುವ ಎಲ್ಲ ಪ್ರಯತ್ನಗಳು ನಿರ್ಧಾರಕವಾದ ತೀರ್ಮಾನಗಳನ್ನು ಇನ್ನೂ ನೀಡಿಲ್ಲ. ಆದ್ದರಿಂದ ಈ ಲಿಪಿಯ ಭಾಷೆಯನ್ನು ನಿರ್ಧರಿಸುವುದು ಸದ್ಯದ ತಿಳುವಳಿಕೆಯ ಸ್ಥಿತಿಯಲ್ಲಿ ಸಾಧ್ಯವಾಗುವುದಿಲ್ಲ. ಕೆಲವು ವಿದ್ವಾಂಸರು ಅದನ್ನು ಸಂಸ್ಕೃತವೆಂದು ಮತ್ತಿತರರು ದ್ರಾವಿಡವೆಂದು ಪರಿಗಣಿಸುತ್ತಾರೆಂಬುದನ್ನು ಈಗಾಗಲೆ ನೋಡಿದ್ದೇವೆ. ಈ ಲಿಪಿಯನ್ನು ಓದಿ - ಅರ್ಥೈಸುವ ಪ್ರಯತ್ನಗಳಲ್ಲಿ ತೊಡಗಿರುವ ಅನೇಕ ವಿದ್ವಾಂಸರು ತಮ್ಮ ಪರಿಚಿತ ಭಾಷೆಗಳಲ್ಲಿನ ಒಂದಲ್ಲಾ ಒಂದು ಭಾಷೆಯೊಡನೆ ಇಲ್ಲವೆ ಅವುಗಳ ಮೂಲ ರೂಪದೊಡನೆ ಸಿಂಧೂ ಭಾಷೆಯು ವಿಭಿನ್ನವೆಂದು ಭಾವಿಸಿದ್ದಾರೆ. ಇತರ ಲಿಪಿಗಳೊಡನೆ ಸಿಂಧೂ ಚಿಹ್ನೆಗಳ ಸಾದೃಶ್ಯಗಳಿಗೆ ಸಂಬಂಧಿಸಿದಂತೆ ಸುಮೇರಿಯನ್ ಮತ್ತು ಪ್ರೋಟೋ-ಎಲಾಮೈಟ್ ಚಿಹ್ನೆಗಳೊಡನೆ ಇರುವ ಸಾದೃಶ್ಯವು ಲಿಪಿ ರಚನೆಯ ಹಂತಗಳಲ್ಲಾದ ಬೆಳವಣಿಗೆಗಳ ನಿಕಟವಾದ ಸಂಬಂಧವನ್ನು ಮುನ್ಸೂಚಿಸುತ್ತದೆ. ಕಳೆದ ೫೦೦೦ ವರ್ಷಗಳ ಅವಧಿಯಲ್ಲಿ ಭಾಷೆ ನಿಶ್ಚಲವಾಗಿದ್ದಿರಲು ಸಾಧ್ಯವಿಲ್ಲ. ನಮ್ಮ ವಿಶ್ಲೇಷಣೆಗೆ ಲಭ್ಯವಿರುವ ಸಾಮಗ್ರಿಯೇನೋ ದೊಡ್ಡದು. ಆದರೆ ವಿದ್ವಾಂಸರು ಎಷ್ಟೇ ಎಚ್ಚರಿಕೆಯ ಪ್ರಯತ್ನಗಳನ್ನು ನಡೆಸಿದರೂ ಸರ್ವೇಸಾಮಾನ್ಯವಾದ ಅರ್ಥವನ್ನು ನೀಡದಿರುವುದು ನಿರಾಶೆಯ ಸಂಗತಿ.

**ಮುದ್ರೆಗಳ ಮೇಲಿರುವ ಮೀನಿನ ಚಿಹ್ನೆಯ ವಿಶ್ಲೇಷಣೆ**

ಫಿನ್‌ಲ್ಯಾಂಡಿನ ಪ್ರಸಿದ್ಧ ವಿದ್ವಾಂಸರಾದ ಆಸ್ಕೋ ಪರ್ಪೋಲಾ ತಮ್ಮ ಹಲವಾರು ಮಿತ್ರರ ಜೊತೆಗೂಡಿ ಸಿಂಧೂ ಲಿಪಿಯ ರಹಸ್ಯವನ್ನು ಭೇದಿಸುವ ಪ್ರಯತ್ನ ಮಾಡಿದ್ದಾರೆ. ಅವರು ಸಿಂಧೂ ಲಿಪಿ ದ್ರಾವಿಡ ಮೂಲವೆಂದು ಅಭಿಪ್ರಾಯಪಟ್ಟಿದ್ದಾರೆ. ಕಲಾಕೃತಿಯ ಮೇಲೆ ಕೆತ್ತಿರುವ ಚಿಹ್ನೆಗಳು ಸರ್ವೇಸಾಮಾನ್ಯವಾಗಿ ಭಾಷೆಯ ಬಗೆಗಿನ ಸುಳಿವನ್ನು ಕೊಡಬಲ್ಲವು. ಬಹುಪಾಲು ಸಿಂಧೂ ಕೃತಿಗಳು ಮುದ್ರೆಗಳಾಗಿದ್ದು ಅವುಗಳನ್ನು ಯಾವುದಕ್ಕಾಗಿ ಬಳಸಿರಬಹುದೆಂಬ ಅನುಮಾನಗಳು ಹಾಗೆಯೇ ಉಳಿದಿವೆ. ಒಂದು ವಿಧದಲ್ಲಿ ಇದು ಅರ್ಥವ್ಯವಸ್ಥೆಯ ಆಡಳಿತ ಅಥವಾ ವ್ಯಾಪಾರಕ್ಕಾಗಿ ಬಳಸಿರಬಹುದೆಂಬ ಸಂದೇಹಗಳಿವೆ. ಮಧ್ಯಪೂರ್ವದ ಜೊತೆಗಿನ ಸಂಬಂಧಗಳು ಸಿಂಧೂ ನಾಗರಿಕತೆಗೆ ಇತ್ತೆಂಬುದಕ್ಕೆ ಮೆಸಪೊಟೇಮಿಯಾದಲ್ಲಿ ಸಿಂಧೂ ಮುದ್ರೆಗಳು ದೊರಕಿರುವುದು ಪುಷ್ಟಿ ನೀಡಿದೆ. ಮುದ್ರೆಗಳಲ್ಲಿ ದೊರೆತಿರುವ ಮೀನಿನ ಚಿಹ್ನೆ ಮತ್ತು ಮೀನನ್ನು ತಿನ್ನುತ್ತಿರುವ ಮೊಸಳೆ ಚಿತ್ರ ಪ್ರಾಮುಖ್ಯವೆಂದು ಆಸ್ಕೋ ಪರ್ಪೋಲಾ ಹೇಳುತ್ತಾರೆ. ಈ ಚಿಹ್ನೆ ನಾಮಪದವೇ ಅಥವಾ ಬೇರೆ ಏನಾದರೂ ಅರ್ಥವನ್ನು ನೀಡುವುದೇ ಎಂಬ ಬಗ್ಗೆ ಸಂಶೋಧನೆ ಮಾಡಲಾಗಿದೆ. ಏಕೆಂದರೆ ಇದು ಬಹುಪಾಲು ಮುದ್ರೆಗಳಲ್ಲಿ ಕಂಡುಬರುವ ಚಿಹ್ನೆಯಾಗಿದೆ. ಇದು ವಿಪುಲವಾಗಿ ಬಳಕೆಯಾಗಿ ಇರುವುದರಿಂದ ಇದು ಕೇವಲ ಮೀನಿನ ಅರ್ಥವಲ್ಲ, ಅದಕ್ಕೆ ಬೇರೆ ಅರ್ಥಗಳೂ ಉಂಟೆಂದು ಊಹಿಸಲಾಗಿದೆ. ಬಹುಶಃ ಇದರ ಅರ್ಥ 'ದೇವರು' ಕೂಡ ಏಕಾಗಬಾರದೆಂದು ಪರ್ಪೋಲಾ ಊಹಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ಮೀನಿನ

**ಅಸ್ಕೊ ಪರ್ಪೊಲ ವಿಶ್ಲೇಷಣೆ**

| Sign/ Sequence | Pictorial meaning | Phonetic (Dravidian) | Intended meaning | Comments |
|---|---|---|---|---|
| | fish | *meen* | 1. fish<br>2. star | The word *meen* designates both fish and star in most Dravidian languages. Suggests the heavenly bodies were conceived of as fish swimming in the ocean of heaven, representing gods. |
| | intermediate space + fish | *vel (i) + meen* | white star | *Vel-meen* and *Velli* both mean Venus in Tamil. |
| | 3 + fish | *mum (m) + meen* | three stars | The new year asterism Pleiades has this name in Tamil; in myth the wives of the Seven Sages. |
| | 6 + fish | *(*c) aru + meen* | seven stars | In Tamil, the name of Ursa Major, the 'Seven Sages' in India. |
| | 7 + fish | *elu + meen* | seven stars | In Tamil, the name of Ursa Major, the 'Seven Sages' in India. |

ಮಹಾದೇವನ್‌ರವರ ವಿಶ್ಲೇಷಣೆ

| Sign/ Sequence | Pictorial value | Ideographic meaning | Comments |
|---|---|---|---|
| | Jar | Priest | The most frequent and almost always terminal sign of the Indus script is read as a jar and connected to the legend of 'jar-born' sages and the symbolism of the jar connected to priestly ritual in Indian tradition. |
| | Lance | Warrior | Also a terminal sign, or suffix associated with names or titles on seals like the 'jar' sign above. |
| | Man | Servant, attendant or lower functionary | Simple pictogram, frequently shown with 'jar' (lower order of priestly functionary?) but never with ' lance' sign. |
| | Bearer | Officer or functionary | Also appears to be a suffixed element, interpreted as officer because of later Indian traditions referring to senior officers of the king referred to as 'yoke bearers.' |
| | Jar + Bearer | Officer or functionary with priestly duties | Clearly combination of two signs, could be related to later Indian traditions combining the two motifs. |

ಚಿಹ್ನೆಗೆ ಸರ್ವೇಸಾಮಾನ್ಯವಾಗಿ 'ಮೀನ್' ಎಂಬ ಧ್ವನಿಯನ್ನು ಬಳಸಲಾಗಿದೆ. ಇಂತಹದೇ ಚಿತ್ರಗಳನ್ನು ಕ್ಯೂನಿಫಾರಂ ಲಿಪಿಯಲ್ಲಿ ಸಹ ದೇವರು ಎಂಬ ಅರ್ಥದಲ್ಲಿ ಬಳಸಲಾಗಿದೆ. ಒಂದು ವೇಳೆ ಸಿಂಧೂ ಲಿಪಿ ದ್ರಾವಿಡ ಮೂಲವೇ ಆಗಿದ್ದರೆ ಈ ಪದದ ಅರ್ಥಗಳನ್ನು ನಿರಾಕರಿಸುವುದು ಕಷ್ಟವಾಗುತ್ತದೆ. ಈ ಚಿತ್ರಗಳು ಹರಪ್ಪಾದ ಮಡಕೆಯ ಚೂರುಗಳ ಮೇಲೆಯೂ ಸಹ ಪತ್ತೆಯಾಗಿರುವುದು ಮೀನ್ ಶಬ್ದ ಅತ್ಯಂತ ಹೆಚ್ಚು ಬಳಕೆಯ ಚಿಹ್ನೆಯಾಗಿದ್ದಿತೆಂಬುದರ ಸೂಚನೆ.

ಡಾ॥ ಮತಿವಾಣನ್ ಎಂಬ ತಮಿಳಿನ ವಿದ್ವಾಂಸರು ೧೯೯೫ರಲ್ಲಿ 'ದ್ರಾವಿಡ ಭಾಷಿಗರಲ್ಲಿ ಸಿಂಧೂ ಭಾಷೆ' ಎಂಬ ಗ್ರಂಥದಲ್ಲಿ ಸಿಂಧೂ ಲಿಪಿಯು ತಮಿಳು ಮೂಲದ್ದೆಂದು ವಾದಿಸಿದ್ದಾರೆ. ತಮಿಳು ಭಾಷೆ ಮತ್ತು ಸಂಸ್ಕೃತಿಯ ಪ್ರಾಚೀನತೆಯ ಬಗ್ಗೆ ಇರುವ ಅತಿ ವ್ಯಾಮೋಹದಿಂದ ಈ ರೀತಿಯ ಉತ್ಪ್ರೇಕ್ಷಿತ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆಂದು ಕೆಲವು ಆಕ್ಷೇಪಗಳಿವೆ. ಅವರ ಪ್ರಕಾರ ತಮಿಳು ಭಾಷೆ ಮತ್ತು ವ್ಯಾಕರಣ ೧೦ ಸಹಸ್ರ ವರ್ಷಗಳ ಹಿಂದೆಯೇ ರಚಿತವಾಗಿದೆ! ಅವರ ಗುರುಗಳಾದ 'ದೇವನೇಯ ಪವನಾರ್' ಅವರ ಆದೇಶದ ಪ್ರಕಾರ ಸಿಂಧೂ ಲಿಪಿಯ ರಹಸ್ಯವನ್ನು ಭೇದಿಸಲು ಪ್ರಾಚೀನ ತಮಿಳು ವ್ಯಾಕರಣ ಗ್ರಂಥ ಬಳಸಿ ಪ್ರಯತ್ನದಲ್ಲಿ ಸಫಲರಾಗಿದ್ದೇವೆ ಎಂಬುದು ಅವರ ಅನಿಸಿಕೆ. ಇದಲ್ಲದೆ ತಮಿಳು ಸಂಸ್ಕೃತಿಯ ಪ್ರಾಚೀನತೆಯ ಬಗ್ಗೆ ಸಂಕುಚಿತವಾದಿ ಅಭಿಪ್ರಾಯ ಹೊಂದಿರುವ ವಿದ್ವಾಂಸ ವರ್ಗದವರು ಕುಮರಿಕಂದಮ್ ಸಂಸ್ಕೃತಿಯೇ ಜಗತ್ತಿನ ಅತ್ಯಂತ ಪ್ರಾಚೀನ ನಾಗರಿಕತೆಯೆಂದು ಪ್ರತಿಪಾದಿಸುತ್ತಿದ್ದಾರೆ. ಈ ಸಂಸ್ಕೃತಿಯು (ಕುಮರಿಕಂದಮ್) ಪುರಾಣ ಕಾಲದಲ್ಲಿ ಅಸ್ತಿತ್ವದಲ್ಲಿದ್ದು ಸಮುದ್ರದಲ್ಲಿ ಮುಳುಗಿಹೋಗಿದೆ. ಈ ಸಂಸ್ಕೃತಿಯ ಕಾಲ ಅವರ ಪ್ರಕಾರ ಕ್ರಿ. ಪೂ. ೫೦,೦೦೦. ಆಗ್ಗೆ ಕನ್ಯಾಕುಮಾರಿಯ ದಕ್ಷಿಣ ಭಾಗದಲ್ಲಿ ಅದು ಅಸ್ತಿತ್ವದಲ್ಲಿತ್ತು; ಇದಾದ ನಂತರ ಕ್ರಿ. ಪೂ. ೨೦,೦೦೦ನೇ ವರ್ಷದಲ್ಲಿ ಈಸ್ಟರ್ ದ್ವೀಪದ ಬಳಿ ತಮ್ಮ ಈ ಸಂಸ್ಕೃತಿ ಪ್ರತ್ಯಕ್ಷವಾಯಿತು. ಇದೂ ಸಹ ಸಮುದ್ರದಲ್ಲಿ ಕ್ರಿ. ಪೂ. ೧೬,೦೦೦ ವರ್ಷಗಳ ಹಿಂದೆ ಮುಳುಗಿಹೋಯಿತು. ನಂತರ ಕ್ರಿ. ಪೂ. ೬೦೮೭ರಲ್ಲಿ ಎರಡನೇ ತಮಿಳು ಸಂಘಂಅನ್ನು ಪಾಂಡ್ಯ ರಾಜರು ಸ್ಥಾಪಿಸಿದರು. – ಇವೆಲ್ಲಾ ನಂಬಿಕೆಗೆ ಅರ್ಹವಲ್ಲದ ಹೇಳಿಕೆಗಳೆಂದು ಸಹಜವಾಗಿಯೇ ತೋರುತ್ತದೆ. ಏನೇ ಇರಲಿ, ಇದರ ಹಿನ್ನೆಲೆಯಲ್ಲಿ ಸಿಂಧೂ ಲಿಪಿಯ ಬಗ್ಗೆ ಮತಿವಾಣನ್‌ರು ಈ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ.

* ಸಿಂಧೂ ನದಿ ನಾಗರಿಕತೆಯು ಪ್ರಾಚೀನ ಕುಮರಿಕಂದಮ್ ನಾಗರಿಕತೆಯಲ್ಲಿ ಉದ್ಭವವಾಗಿದೆ.
* ಜಗತ್ತಿನ ಅತ್ಯಂತ ಪುರಾತನ ಭಾಷೆಯು ತಮಿಳು ಆಗಿದ್ದು ಎಲ್ಲಾ ಭಾಷೆಗಳು ತಮಿಳು ಮೂಲದಿಂದಲೆ ಜನಿಸಿವೆ.
* ಸಿಂಧೂ ನದಿ ನಾಗರಿಕತೆಯ ಜನರು ತಮಿಳರು.
* ಸಿಂಧೂ ನದಿ ನಾಗರಿಕತೆಯ ಭಾಷೆಯು ತಮಿಳು.
* ಸಿಂಧೂ ನದಿ ನಾಗರಿಕತೆಯ ಲಿಪಿಯು ಸಿಲಬಿಕ್ ಆಗಿದ್ದು ಅದನ್ನು ತಮಿಳು ಲಿಪಿಯ ಹಾಗೆ ಎಡದಿಂದ ಬಲಕ್ಕೆ ಬರೆಯಲಾಗಿದೆ.
* ತಮಿಳಿನ ವ್ಯಾಕರಣ ನಿಯಮಗಳು ತೊಳ್‌ಕಾಪ್ಪಿಯಂನಲ್ಲಿರುವಂತೆ ಸಿಂಧೂ ಲಿಪಿಗೂ ಅನ್ವಯ ವಾಗುತ್ತದೆ. (ಆದರೆ ಈ ವಾದವನ್ನು ಪುಷ್ಟೀಕರಿಸುವ ಪ್ರಾಚ್ಯ ವಸ್ತುಗಳಾಗಲಿ, ಉತ್ಖನನಗಳಾಗಲಿ ಇಲ್ಲದೆ ಇರುವುದರಿಂದ ಈ ವಾದ ಬಾಲಿಶವಾಗಿ ಕಂಡು ಬರುತ್ತದೆ.)

ಮತಿವಾಣನ್ ಸಿಂಧೂ ಮುದ್ರೆಗಳಲ್ಲಿರುವ ಚಿತ್ರಗಳಿಗೆ ತಮಿಳಿನ ಅರ್ಥಗಳನ್ನು ನೀಡುತ್ತಾ ಇವುಗಳಿಗೆ ತಮಿಳು ಸ್ವರಚಿಹ್ನೆ ಮತ್ತು ಧ್ವನ್ಯಾತ್ಮಕ ಅರ್ಥಗಳನ್ನು ನೀಡಿ ತಮಿಳು ಸಿಂಧೂ ಲಿಪಿಯಷ್ಟೇ ಪ್ರಾಚೀನವೆಂದು ಪ್ರತಿಪಾದಿಸುತ್ತಿದ್ದಾರೆ. ಬಹುತೇಕ ಸಂಕೇತಗಳಿಗೆ ಸರ್ವೇಸಾಮಾನ್ಯವಾದ ಒಂದೇ ಧ್ವನಿ ಮೌಲ್ಯವನ್ನು ನೀಡಿರುವುದು ಸಹ ಅಸಮಂಜಸವಾಗಿದೆ.

**ಸಂಸ್ಕೃತ ಮೂಲ ?**

ಡಾ॥ ಡಿ. ಎನ್. ಝಾ ಮತ್ತು ಎನ್. ಎಸ್. ರಾಜಾರಾಂರವರು ಸಿಂಧೂ ಲಿಪಿಯ ಬಗ್ಗೆ ಮತ್ತು ಸಿಂಧೂ ನಾಗರಿಕತೆಯ ಬಗ್ಗೆ ಬೇರೆ ದೃಷ್ಟಿಕೋನವನ್ನು ಹೊಂದಿದ್ದಾರೆ. ಸಿಂಧೂ ಲಿಪಿಯ ರಹಸ್ಯವನ್ನು ಬದಲಾದ ಐತಿಹಾಸಿಕ ಮತ್ತು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅವಲೋಕಿಸಬೇಕೆಂದು ಅವರು ತಿಳಿಸಿದ್ದಾರೆ. ಭಾರತಕ್ಕೆ ಆರ್ಯರ ಧಾಳಿಯು ಕ್ರಿ. ಪೂ. ೧೫೦೦ರಲ್ಲಿ ಆಗಿದೆಯೆಂಬ ವಾದವನ್ನು ಅವರು ತಿರಸ್ಕರಿಸಿದ್ದಾರೆ, ಇಡೀ ಸಿಂಧೂ ನದಿ ನಾಗರಿಕತೆಯು ವೈದಿಕ ಕಾಲದ ನಂತರ ಅಸ್ತಿತ್ವದಲ್ಲಿದ್ದು ಸಿಂಧೂ ಲಿಪಿಯನ್ನು ಸೂತ್ರ ಸಾಹಿತ್ಯ ಮೂಲಕ ಅಧ್ಯಯನ ಮಾಡಬಹುದೆಂದು ತಿಳಿಸಿದ್ದಾರೆ. ಅವರ ಪ್ರಕಾರ ಸಿಂಧೂ ಲಿಪಿ ಸಂಸ್ಕೃತ ಮೂಲವಾಗಿದ್ದು ಯಾಸ್ಕನಿಂದ ರಚಿತವಾದ ನಿಘಂಟುವಿನ ಹಿನ್ನೆಲೆಯಲ್ಲಿ ಓದಲು ಸಾಧ್ಯ. ಇದೊಂದು ಬಗೆಯ ವಿತಂಡವಾದ.

ಸಿಂಧೂ ನದಿ ನಾಗರಿಕತೆ ವೈದಿಕ ಪೂರ್ವ ಸಂಸ್ಕೃತಿ ಎಂಬ ವಾದವನ್ನು ಸಾರಾಸಗಟಾಗಿ ತಿರಸ್ಕರಿಸುವುದೇ ಇವರ ಉದ್ದೇಶವಾಗಿದೆ. ಇವತ್ತಿನ ಜನಪ್ರಿಯವಾದಂತಹ ಅಭಿಪ್ರಾಯಗಳು ಹಲವಾರು ಅಡ್ಡಿ- ಅಡಚಣೆಗಳಿಂದ ಕರಾರುವಾಕ್ಕಾಗಿ ರಾಜಾರಾಂರವರ ಅಭಿಪ್ರಾಯವನ್ನು ಅನುಮೋದಿಸಲು ಪೂರಕವಾಗಿಲ್ಲ. ರಾಜಾರಾಂರವರ ಈ ಅಭಿಪ್ರಾಯಗಳು ಇವತ್ತಿನ ಯಾವುದೇ ಪಠ್ಯ ಪುಸ್ತಕದಲ್ಲಿರಲು ಹಲವಾರು ಕಾರಣಗಳಿಂದ ಸಾಧ್ಯವಿಲ್ಲ. ಅವರ ಪ್ರಕಾರ ಈ ಅಡಚಣೆಗಳೆಂದರೆ –

(೧) ವಸಾಹತುಶಾಹಿ ಹಿತಾಸಕ್ತಿ ಮತ್ತು ಕ್ರಿಶ್ಚಿಯನ್ ಮಿಷನರಿಗಳು : ೧೯ನೇ ಶತಮಾನದ ಯೂರೋಪಿನ ರಾಷ್ಟ್ರಗಳ ಮುಖ್ಯ ವಸಾಹತುವಾಗಿದ್ದ ಭಾರತದ ಬಗೆಗಿನ ಅಭಿಪ್ರಾಯಗಳು ಪೂರ್ವಗ್ರಹದಿಂದ ಕೂಡಿದೆ. ಈ ಹಿತಾಸಕ್ತಿಯ ಪೂರಕವಾಗಿ ಕ್ರಿಶ್ಚಿಯನ್ ಮಿಷನರಿಗಳೂ ಸಹ ಕೆಲಸ ಮಾಡಿದ್ದಾರೆ. ಕ್ರಿಶ್ಚಿಯನ್ ಮಿಷನರಿಗಳು ಧರ್ಮ ಪ್ರಚಾರದ ನೆಪದಲ್ಲಿ ಬೈಬಲ್‌ಅನ್ನು ಯೆಸುರ್-ವೇದವಾಗಿ (ಯೆಸುರ್‌ವೇದ ?) ಜನಪ್ರಿಯಗೊಳಿಸಲು

ಪ್ರಯತ್ನಿಸಿದ್ದಾರೆ. ಆದುದರಿಂದ ಆರ್ಯರ ಧಾಳಿ ಮತ್ತು ವೇದಗಳು ಅಭಾರತೀಯ ಎಂಬುದನ್ನು ಸಾಬೀತುಪಡಿಸುವುದೇ ಈ ಮಿಷನರಿಗಳ ಮತ್ತು ಪಾಶ್ಚಾತ್ಯ ವಿದ್ವಾಂಸರಾದ ಮ್ಯಾಕ್ಸ್ ಮುಲ್ಲರ್‌ರವರ ಮುಖ್ಯ ಉದ್ದೇಶವಾಗಿತ್ತು.

(೨) ಮಾರ್ಕ್ಸ್‌ವಾದಿ ಇತಿಹಾಸಕಾರರು ಸಹ ಸಿಂಧೂ ಸಂಸ್ಕೃತಿ ವೇದಪೂರ್ವ ಮತ್ತು ಅವೈದಿಕ ಎಂದು ವಾದ ಮಂಡಿಸಿರುವುದು ಭಾರತೀಯ ಮಾರ್ಕ್ಸ್‌ವಾದಿಗಳ ಕುಚೋದ್ಯವೆಂದು ರಾಜಾರಾಂ ವಾದಿಸುತ್ತಾರೆ. ಮಾರ್ಕ್ಸ್‌ವಾದಿಗಳು ಸಹ ಕ್ರಿಶ್ಚಿಯನ್ ಮಿಷನರಿಗಳ ತರಹ ಅಭಿಪ್ರಾಯ ಮಂಡಿಸಿರುವುದು ಸರಿಯಲ್ಲ ಹಾಗೂ ಮಾರ್ಕ್ಸ್‌ವಾದಿ ಇತಿಹಾಸಕಾರರು ಭಾರತದ ಐತಿಹಾಸಿಕ ವಿದ್ವತ್ತಿಗೆ ಕೊಟ್ಟಿರುವ ಕೊಡುಗೆ ನಗಣ್ಯ ಎಂಬುದು ರಾಜಾರಾಂರವರ ವಾದ.

(೩) ಆರ್ಯ–ದ್ರಾವಿಡ ಎಂಬ ಭೇದವು ಸಹ ಸಿಂಧೂ ಸಂಸ್ಕೃತಿಯ ಅವೈದಿಕ ಗುಣಗಳನ್ನು ತಿಳಿಸಲು ಬಳಸಿಕೊಳ್ಳಲಾಗಿದೆ. ಸಿಂಧೂ ಲಿಪಿ ಪ್ರೋಟೋ-ದ್ರವಿಡಿಯನ್ ಎಂಬ ವಾದವನ್ನು ರಾಜಾರಾಂ ನಿರಾಕರಿಸುತ್ತಾರೆ ಮತ್ತು ಪ್ರೋಟೋ-ದ್ರವಿಡಿಯನ್ ಎಂಬುದು ಅಸ್ತಿತ್ವದಲ್ಲಿಯೇ ಇರಲಿಲ್ಲ ಎಂದು ವಾದಿಸಿದ್ದಾರೆ. ಆರ್ಯ - ದ್ರಾವಿಡ ವಿಭಜನೆಯು ಜನಾಂಗ ಸಿದ್ಧಾಂತವನ್ನು ಪುಷ್ಟೀಕರಿಸಿದ್ದು ಮತ್ತು ದ್ರಾವಿಡ ಭಾಷೆಗಳು ಹಾಗೂ ಸಂಸ್ಕೃತದ ನಡುವೆ ಇರುವ ವ್ಯತ್ಯಾಸ ಉತ್ಪ್ರೇಕ್ಷೆಯಿಂದ ಕೂಡಿದೆ. ಈ ವಾದಗಳನ್ನು ಮಾಡುವುದರ ಮೂಲಕ ಆರ್ಯ ಮತ್ತು ದ್ರಾವಿಡರು ಬೇರೆಬೇರೆ ಎಂಬ ವಾದ ಸರಿಯಲ್ಲವೆಂದು ರಾಜಾರಾಂ ಅಭಿಪ್ರಾಯಪಟ್ಟಿದ್ದಾರೆ.

(೪) ಭಾಷಾಶಾಸ್ತ್ರದ ಮೂಲಕ ಸಿಂಧೂ ಲಿಪಿಯನ್ನು ಅರ್ಥೈಸುವುದು ಕಷ್ಟ. ರಾಜಾರಾಂ ಪ್ರಕಾರ ಭಾಷಾಶಾಸ್ತ್ರವೆಂಬುದು ಹೆಚ್ಚೆಂದರೆ ಒಂದು ಜುಜುಬಿ ಊಹಾಪೂರಿತ ವಿಜ್ಞಾನ. ಈಗಿನ ಭಾಷಾಶಾಸ್ತ್ರಜ್ಞರು ಉತ್ತುಂಗವಾದಿಗಳು ಮತ್ತು ಉದ್ದೇಶಪೂರ್ವಕವಾಗಿ ಸಂಸ್ಕೃತಿಯನ್ನು ದೂಷಿಸುವವರು. ಪುರಾತತ್ವಜ್ಞರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಲ್ಲಿ ಭಾಷಾಶಾಸ್ತ್ರಜ್ಞರ ಅಡಿಯಾಳುಗಳಾಗಿ ವರ್ತಿಸುತ್ತಿದ್ದಾರೆ. ಪಾಣಿನಿ ಮಾತ್ರ ಭಾಷಾಶಾಸ್ತ್ರವನ್ನು ವಿಜ್ಞಾನವನ್ನಾಗಿ ಅಧ್ಯಯನ ಮಾಡಿದ್ದಾರೆ. ಪಾಣಿನಿಯನ್ನು ಹೊರತುಪಡಿಸಿ ಉಳಿದೆಲ್ಲಾ ಭಾಷಾಶಾಸ್ತ್ರಜ್ಞರು ಪೊಳ್ಳುವಾದವನ್ನು ಹೊಂದಿದ್ದಾರೆ ಎಂಬುದು ರಾಜಾರಾಂರವರ ಅಭಿಪ್ರಾಯವಾಗಿದೆ.

(೫) ಇದಲ್ಲದೆ ಭಾರತೀಯ ಶಾಸ್ತ್ರ ಅಥವಾ ಇಂಡಾಲಜಿ ಸಹ ಯೂರೋ-ಸೆಂಟ್ರಿಕ್ ಆಗಿದ್ದು ಇದು ವೈಜ್ಞಾನಿಕ ಶಿಸ್ತು ಅಲ್ಲ. ಭಾರತದ ನಾಗರಿಕತೆ ಮತ್ತು ಸಂಸ್ಕೃತಿಯ ಅಧ್ಯಯನ ಕಳೆದ ಎರಡು ಶತಮಾನಗಳಲ್ಲಿ ಪ್ರಗತಿಗೆ ಅಡ್ಡಿಯಾಗಿದೆ. ರಾಜಕೀಯ ಉದ್ದೇಶದಿಂದ ತಪ್ಪು-ತಪ್ಪಾಗಿ ಭಾರತೀಯ ಸಂಸ್ಕೃತಿಯನ್ನು ವಿಶ್ಲೇಷಿಸಿದ್ದು ಭಾರತದ ಪುರಾತನತೆಯ ಬಗ್ಗೆ ವಿರೋಧಾಭಾಸಗಳನ್ನು ಸೃಷ್ಟಿಸಿದ್ದಾರೆ. ಈ ಮೇಲಿನ ಅಡಚಣೆಗಳು ಇಂದಿಗೂ ಸಹ ಸಿಂಧೂ ಸಂಸ್ಕೃತಿಯ ಅಧ್ಯಯನಕ್ಕೆ ಭಾರಿ ತೊಂದರೆಯಾಗಿವೆ.

ಇವರ ಪ್ರಕಾರ (ರಾಜಾರಾಂ) ಸಿಂಧೂ ಲಿಪಿ ಮತ್ತು ಬ್ರಾಹ್ಮಿಲಿಪಿಯಲ್ಲಿ ಸಾಮ್ಯತೆ ಇದ್ದು ಅದರಿಂದ ಸಿಂಧೂ ಮುದ್ರೆಗಳನ್ನು ಓದಲು ಸಾಧ್ಯ. ಇದರ ಮೂಲಕ ಸಿಂಧೂ ವರ್ಣಾಕ್ಷರಗಳನ್ನು ವಿಶ್ಲೇಷಿಸಲು ಸಾಧ್ಯವಾಗಿದೆ. ಸಿಂಧೂ ಬರವಣಿಗೆಯ ದಿಕ್ಕು ಯಾವುದೆಂಬುದನ್ನು ಕರಾರುವಾಕ್ಕಾಗಿ ರಾಜಾರಾಂ ಒಪ್ಪಿಕೊಳ್ಳುವುದಿಲ್ಲ. ಸರ್ವೇಸಾಮಾನ್ಯವಾಗಿ ಒಪ್ಪಲಾಗಿರುವ ಬಲದಿಂದ ಎಡಕ್ಕೆ ಬರೆಯಲಾಗಿದೆ ಎಂಬ ವಾದವನ್ನು ರಾಜಾರಾಂ ನಿರಾಕರಿಸುವುದೂ ಇಲ್ಲ ಪುಷ್ಟೀಕರಿಸುವುದೂ ಇಲ್ಲ. ಅಲ್ಲದೆ ಬ್ರಾಹ್ಮಿ ಲಿಪಿ ಎಡದಿಂದ ಬಲಕ್ಕೆ ಓದಿಸಿಕೊಂಡು ಹೋಗುವುದರಿಂದ ಅದೇ ರೀತಿ ಸಿಂಧೂ ಲಿಪಿಯು ರಚಿತವಾಗಿರಬೇಕೆಂಬ ವಾದವನ್ನು ಅಪ್ರತ್ಯಕ್ಷವಾಗಿ ಒಪ್ಪುತ್ತಾರೆ.

ಸಿಂಧೂ ಕೃತಿಗಳಲ್ಲಿ ಸಂಸ್ಕೃತದ ಶುಲ್ಬಸೂತ್ರಗಳು ಮತ್ತು ಕುದುರೆಯ ಚಿತ್ರ ಇದೆ ಎಂಬ ವಾದವನ್ನು ರಾಜಾರಾಂ ಮಂಡಿಸಿದ್ದಾರೆ. ಅವರ ಪ್ರಕಾರ ಗಣಿತದ ಪ್ರಮೇಯಗಳು ಸಿಂಧೂ ಲಿಪಿಯಲ್ಲಿವೆ. ಉದಾಹರಣೆಗೆ, ಸಿಂಧೂ ಮುದ್ರೆಗಳಲ್ಲಿರುವ ಮೂರು ಚಿಹ್ನೆಗಳನ್ನು ಅವರು ಈ ಕೆಳಗಿನಂತೆ ವಿಶ್ಲೇಷಿಸಿದ್ದಾರೆ. ಆ ಮೂರು ಸಂಕೇತಗಳ ಅರ್ಥ 'ಪ, ಕ, ಮ' ಅಂದರೆ 'ಪ' ಎಂಬುದು ಪರಿಧಿ, ವ್ಯಾಸ, ಅನುಪಾತ, 'ಕ' ಎಂದರೆ 'ಕಾರಣಿ' (ವರ್ಗಮೂಲ √) 'ಮ' ಎಂದರೆ ಹತ್ತು. ಇದನ್ನು ಗಣಿತ ಸೂತ್ರದ ಪ್ರಕಾರ $\pi = \sqrt{೧೦} = ೩.೧೬$ ಎಂದು ಸೂಚಿಸಬಹುದು. ಈ ರೀತಿಯ ವಿಶ್ಲೇಷಣೆ ಇಡೀ ಸಿಂಧೂ ಲಿಪಿಯನ್ನು ಗಣಿತ ಸೂತ್ರದಂತೆ ಅಧ್ಯಯನ ಮಾಡಲು ಉಪಕ್ರಮಿಸಿದಂತಾಗಿದೆ. ಅದು ನಿಜಕ್ಕೂ ಸಾಧ್ಯವೇ ಎಂಬುದು ಅನುಮಾನಾಸ್ಪದ.

**ಕುದುರೆಯ ಚಿಹ್ನೆ**

ಸಿಂಧೂ ಮುದ್ರೆಗಳಲ್ಲಿ ಕುದುರೆಯ ಚಿತ್ರ ಇಲ್ಲಿಯವರೆಗೆ ಬರೆಯದೆ ಇರುವುದು ಸಿಂಧೂ ಸಂಸ್ಕೃತಿ ಅವೈದಿಕ ಎಂಬುದಕ್ಕೆ ಇರುವ ಬಹಳ ಸರಳವಾದ ಸಾಕ್ಷ್ಯವಾಗಿದೆ. ರಾಜಾರಾಂ ಮೊಹೆಂಜೋದಾರೋದಲ್ಲಿದ್ದ ಮುದ್ರೆ ಸಂಖ್ಯೆ ೪೫೩ನ್ನು ಕುದುರೆಯ ಚಿತ್ರ ಇತ್ತೆಂಬುದಕ್ಕೆ ವಾದ ಮಂಡಿಸಲು ಬಳಸಿದ್ದಾರೆ. ಈ ಮುದ್ರೆಯ ಮುಂಭಾಗ ಕುದುರೆಯ ಚಿತ್ರ ಎಂಬುದನ್ನು ರಾಜಾರಾಂ ಬಲವಾಗಿ ವಿವರಿಸಿದ್ದಾರೆ. ಆದರೆ ಲಭ್ಯವಿರುವ ನೂರಾರು ಮುದ್ರೆಗಳ ಅಧ್ಯಯನದಿಂದ ಮತ್ತು ಹೋಲಿಕೆಯಿಂದ ಇದು ಎತ್ತಿನ ಅಥವಾ ಏಕಶೃಂಗಿಯ ಚಿತ್ರ ಎಂಬುದು ನಿಸ್ಸಂಶಯ. ಕುದುರೆಯ ಚಿತ್ರವಂತೂ ಅಲ್ಲವೇ ಅಲ್ಲ.

ಆದರೆ ರಾಜಾರಾಂ ಈ ಭಗ್ನವಾಗಿರುವ ಮುದ್ರೆಯನ್ನು ಕಂಪ್ಯೂಟರ್‌ನ್ನು ಬಳಸಿ ಅದರ ಮುಖವನ್ನು ಸೃಷ್ಟಿಸಿ ಅದು ಕುದುರೆಯ ಚಿತ್ರವೆಂದು ಸಾಬೀತುಪಡಿಸಲು ಪದೇಪದೇ ಪ್ರಯತ್ನಿಸಿದ್ದಾರೆ. ಈ ವಾದವನ್ನು ವಿಶ್ವದ ಹಲವಾರು ವಿದ್ವಾಂಸರು ತಿರಸ್ಕರಿಸಿದ್ದು, ರಾಜಾರಾಂ ಕುದುರೆಯ ಅಸ್ತಿತ್ವವನ್ನು ಪ್ರತಿಪಾದಿಸುತ್ತಿರುವುದು ಭಾರತದ ವಿದ್ವತ್ತಿಗೆ ಆದ ದೊಡ್ಡ ದುರಂತ.

ಹೀಗೆ ಸಿಂಧೂ ಲಿಪಿಯ ಬಗ್ಗೆ ಇರುವ ವಾದ ವಿವಾದಗಳು ಹಲವು ಬಗೆಯವಾಗಿದ್ದು ಇದನ್ನು ಪುಷ್ಟೀಕರಿಸಲು ಅಥವಾ ನಿರಾಕರಿಸಲು ವಿದ್ವಾಂಸರು ತಮ್ಮ ವೈಯಕ್ತಿಕ ನೆಲೆಯಲ್ಲಿ ವಾದ ಮಂಡಿಸಿರುವುದನ್ನು ಕಾಣಬಹುದಾಗಿದೆ. ಮೇಲಿನ ಕೆಲವು ವಾದಗಳು ವಿದ್ವತ್ಪೂರ್ಣವಾಗಿದ್ದರೆ ಇನ್ನು ಕೆಲವು ವಾದಗಳು ಆಭಾಸದಿಂದ ಕೂಡಿವೆ.

ಡಾ॥ ಸಿದ್ದಲಿಂಗ ಸ್ವಾಮಿ
ಇತಿಹಾಸ ಉಪನ್ಯಾಸಕರು, ಸರಕಾರಿ ಕಲಾ ಕಾಲೇಜು, ಬೆಂಗಳೂರು - ೫೬೦ ೦೦೧

ಕುಂಚ ವೀಣೆ ಸಿತಾರು ಕೊಳಲು ಲೆಕ್ಕಣಿಕೆ ಇ-
ತ್ಯಾದಿಗಳ ಹಿಡಿಯಬೇಕಾದ ಕೈಗಳು ಹಿಡಿಯು-
ತಿವೆ ಕೋವಿಗಳ ! ನೂರ್ಕಾಲ ಆನಂದದಲಿ
ಬಾಳಬೇಕಾದ ಚೇತನಗಳೆಷ್ಟೋ ಮಡಿಯು-
ತ್ತಿವೆ ಸಿಡಿಸಿಕೊಂಡು ತಮ್ಮನು ತಾವೆ ! ಅನ್ಯ ಹ-
ತ್ಯೆಯಲಿ ತೊಡಗಿದ್ದ ನರ ಆತ್ಮಹತ್ಯಾ ನಿಪುಣ
ಕೂಡ ಇಂದಿನ ದಿನಗಳಲಿ ! 'ಪ್ರಣಯ' ಕಂತೂ ಇಲ್ಲ
ಸ್ಥಾನ; ಪ್ರಳಯದ ನಾಟ್ಯವಿದೆ ಪ್ರಪಂಚದಾದ್ಯಂತ !

ಹೂವಿಲ್ಲ, ಹಣ್ಣಿಲ್ಲ; ಇಲ್ಲ ಕರುಣದ ಕಣ್ಣು;
ಹುಣ್ಣು ಲೋಕದ ಬದುಕು ! ಹಣ್ಣಿಲ್ಲವೇ ? ಉಂಟು
ನಂಜಿನವು ! ಹಬ್ಬಿದೆ ವಿಷೋದ್ಯಾನ; ವಿಸ್ತರಿಸು-
ತಿಹುದು ಮರುಭೂಮಿ : ಜೀವಕ್ಕಿಂತ ಸಾವೇ ಲೇಸು ?

ಸಿ. ಪಿ. ಕೆ.
ಮೈಸೂರು

# ಕೊಸೋವೊ ಸ್ವಾತಂತ್ರ್ಯದ ಸಮರ್ಥನೆ - ಪ್ರತ್ಯೇಕತಾವಾದಕ್ಕೆ ಪ್ರೋತ್ಸಾಹನೆ!

ಸೆರ್ಬಿಯಾದಿಂದ ಪ್ರತ್ಯೇಕಗೊಂಡು ಸ್ವತಂತ್ರರಾಷ್ಟ್ರವೆಂದು ಘೋಷಿಸಿಕೊಂಡ ಕೊಸೋವೊ ಪ್ರಾಂತದ ಕ್ರಮವನ್ನು ಕಾನೂನುಬದ್ಧವಾಗಿದೆ ಎಂದು ಅಂತರರಾಷ್ಟ್ರೀಯ ನ್ಯಾಯಾಲಯ ತೀರ್ಪು ನೀಡಿದೆ. ಜುಲೈ ೨೨, ೨೦೧೦ರಂದು ನೀಡಿರುವ ಈ ತೀರ್ಪು ಪ್ರಪಂಚದಾದ್ಯಂತ ಪ್ರತ್ಯೇಕತಾವಾದಿ ಚಳವಳಿಗಳಿಗೆ ಕುಮ್ಮಕ್ಕು ನೀಡಿದಂತಾಗುವುದೆಂದು ಭಾವಿಸಲಾಗಿದೆ. ಐತಿಹಾಸಿಕವಾದ ಈ ತೀರ್ಪು ವಸ್ತುಶಃ ಪ್ರತ್ಯೇಕತಾವಾದಕ್ಕೆ ಹಸಿರು ನಿಶಾನೆ ತೋರಿದಂತಾಗಿದೆ. ಮೊದಲ ಬಾರಿಗೆ ಅಂಥ ಚಳವಳಿಗಳಿಗೆ ಅಂತರರಾಷ್ಟ್ರೀಯ ಮನ್ನಣೆ ದೊರಕಿದಂತಾಗಿದೆ. ಕಳೆದ ಶತಮಾನದ ಕೊನೆಯ ದಶಕದಲ್ಲಿ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಒಟ್ಟುಗೂಡಿದ್ದ ಗಣರಾಜ್ಯಗಳು ಪ್ರತ್ಯೇಕಗೊಂಡುವು. ಯೂರೋಪಿನಲ್ಲಿ ಪ್ರತ್ಯೇಕತಾವಾದಿ ಸಮರಗಳು ಪ್ರಾರಂಭಗೊಂಡಿದ್ದೂ ಆಗಲೆ. ಈಗಿನ ರಷ್ಯನ್ ಫೆಡರೇಶನ್ನಿನ ಭಾಗವಾದ ಚೆಚೆನ್ಯಾದಲ್ಲಿ ಪ್ರತ್ಯೇಕತಾವಾದಿ ಚಳವಳಿಗಳು ನಡೆಯುತ್ತಿರುವುದನ್ನು ನೆನಪಿಸಿಕೊಳ್ಳಬೇಕು. ಈ ಭಾಗದ ಇತರ ಕಡೆಗಳಲ್ಲೂ ಅಂಥ ಚಳವಳಿಗಳು ತಲೆ ಎತ್ತುತ್ತಿವೆ. ಪ್ರಪಂಚದ ಇತರ ಭಾಗಗಳಲ್ಲೂ ನಾನಾ ಕಾರಣಗಳಿಗಾಗಿ ಪ್ರತ್ಯೇಕತಾವಾದಿ ಚಳವಳಿಗಳು ನಡೆಯುತ್ತಿರುವುದು ತಿಳಿದಿರುವ ವಿಷಯ. ಪೂರ್ವ ಯೂರೋಪಿನ ಯುಗೋಸ್ಲಾವಿಯದ ಛಿದ್ರೀಕರಣ ಅತ್ಯಂತ ಭೀಕರವಾದ್ದು, ರಕ್ತಪಾತದಿಂದ ಕೂಡಿದುದೂ ಆಗಿದೆ. ಮೊದಲನೇ ಮಹಾಯುದ್ಧದ ನಂತರ ಸೆರ್ಬಿಯ, ಕ್ರೊಯೇಷಿಯ, ಕೊಸೋವೊ, ಬೋಸ್ನಿಯ ಮೊದಲಾದುವು ಒಂದುಗೂಡಿ ಸ್ಥಾಪಿತವಾಗಿದ್ದ ಯುಗೋಸ್ಲಾವಿಯ ರಾಷ್ಟ್ರ ಎರಡನೇ ಮಹಾಯುದ್ಧದ ಕಾಲದಲ್ಲಿ ಜರ್ಮನಿಯ ಆಕ್ರಮಣದಲ್ಲಿತ್ತು, ಫಾಸಿಸ್ಟ್ ವಿರೋಧಿ ಸಮರದಲ್ಲಿ ಮುಂಚೂಣಿಯಲ್ಲಿದ್ದ ಯುಗೋಸ್ಲಾವಿಯ ಯುದ್ಧಾನಂತರ ಪ್ರಬಲ ರಾಷ್ಟ್ರವೆನಿಸಿಕೊಂಡಿತ್ತು. ಶೀತಯುದ್ಧದ ಕಾಲದಲ್ಲಿ ಪೂರ್ವ ಪಶ್ಚಿಮಗಳ ನಡುವೆ ಸೇತುವೆಯಂತಿತ್ತು. ಅಲಿಪ್ತ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ಆದರೆ ದೇಶವನ್ನು ಒಗ್ಗೂಡಿಸಿದ್ದ ನಾಯಕ ಟಿಟೋ ನಿಧನಾನಂತರ (೧೯೮೦) ಅದು ತುಂಡರಿದದ್ದು ಒಂದು ದುರಂತ.

ಸೆರ್ಬಿಯನ್ನರು, ಬೋಸ್ನಿಯನ್ನರು, ಕ್ರೊಯೇಷಿಯನ್ನರ ನಡುವೆ ಪ್ರತ್ಯೇಕತೆಗೆ ಕದನಗಳು ಪ್ರಾರಂಭವಾದುವು. ಇದರಲ್ಲಿ ಯೂರೋಪಿನ ಕೆಲವು ರಾಷ್ಟ್ರಗಳ ಕೈವಾಡವೂ ಇತ್ತು. ನ್ಯಾಟೋ ಕೂಟದ ಮಧ್ಯಪ್ರವೇಶ, ಸಾಕಷ್ಟು ಬಾಂಬು ದಾಳಿ, ಸಹಸ್ರಾರು ಮಂದಿ ನಾಗರಿಕರ ಮಾರಣ ಹೋಮವಾದದ್ದು ಈಗ ಇತಿಹಾಸ. ಮೂರು ಭಾಗಗಳಾಗಿ ಹಂಚಿಹೋದ ಹಿಂದಿನ ಯುಗೋಸ್ಲಾವಿಯದ ದೊಡ್ಡ ಭಾಗ ಸೆರ್ಬಿಯ. ಕೊಸೋವೊ ಅದರ ದಕ್ಷಿಣದಲ್ಲಿರುವ ಒಂದು ಪ್ರಾಂತ. ಆಲ್ಬೇನಿಯನ್ನರೇ ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶ. ವಿಸ್ತೀರ್ಣ ೧೦,೯೦೮ ಚ.ಕಿ.ಮೀ. ಜನಸಂಖ್ಯೆ ೧,೮೦೪,೮೩೮. ರಾಜಧಾನಿ ಪ್ರಿಸ್ಟಿನಾ. ೧೯೯೬ರಲ್ಲಿ ಕೊಸೋವೊದ ಪ್ರತ್ಯೇಕವಾದಿ ಚಳವಳಿ ಪ್ರಾರಂಭವಾಯಿತು. ಕೊಸೋವೊ ವಿಮೋಚನಾ ಸೇನೆ ಸ್ಥಾಪನೆಗೊಂಡು ಗೆರಿಲ್ಲ ಸಮರ ಸಾರಿತು. ಸೆರ್ಬಿಯ ಈ ಪ್ರತ್ಯೇಕವಾದಿ ಚಳವಳಿಯನ್ನು ಹತ್ತಿಕ್ಕಲು ಕ್ರೂರವಾದ ದಬ್ಬಾಳಿಕೆ ನಡೆಸಿತು. ೧೯೯೮-೯೯ರಲ್ಲಿ ಸೆರ್ಬಿಯಾದ ಸೇನೆ ಮತ್ತು ಕೊಸೋವೊ ಪ್ರತ್ಯೇಕವಾದಿಗಳ ನಡುವೆ ಜರಗಿದ ಭೀಕರ ಯುದ್ಧದಲ್ಲಿ ೧೦,೦೦೦ಕ್ಕೂ ಹೆಚ್ಚು ಮಂದಿ ಆಲ್ಬೇನಿಯನ್ನರು ಮಡಿದರು. ೭೮ ದಿನಗಳ ಕಾಲ ನ್ಯಾಟೋ ಮಧ್ಯ ಪ್ರವೇಶಿಸಿ ಸತತವಾಗಿ ಬಾಂಬುದಾಳಿ ನಡೆಸಿತು. ನೂರಾರು ಮಂದಿ ಸೆರ್ಬಿಯನ್ನರೂ ಈ ದಾಳಿಯಲ್ಲಿ ಹತರಾದರು. ೨೦೦೮ರಲ್ಲಿ ಕೊನೆಗೂ ಕೊಸೋವೊ ಸೆರ್ಬಿಯದಿಂದ ಪ್ರತ್ಯೇಕಗೊಂಡಿತು. ವಿಶ್ವಸಂಸ್ಥೆಯ ೬೯ ದೇಶಗಳು ಅದಕ್ಕೆ ಮನ್ನಣೆ ನೀಡಿದುವು. ವಿಶ್ವಸಂಸ್ಥೆಯ ನಿಯಮಾವಳಿಯ ಪ್ರಕಾರ ೧೦೦ಕ್ಕೂ ಹೆಚ್ಚು ದೇಶಗಳು ಮಾನ್ಯತೆ ನೀಡಿದ ಮೇಲೆ ಸದಸ್ಯತ್ವ ಲಭ್ಯವಾಗುತ್ತದೆ. ವಿಶ್ವಸಂಸ್ಥೆ ಕೊಸೋವೊ ಸ್ವಾತಂತ್ರ್ಯದ ಪ್ರಶ್ನೆಯನ್ನು ಅಂತರರಾಷ್ಟ್ರೀಯ ನ್ಯಾಯಾಲಯದ ವಿಚಾರಣೆಗೆ ವಹಿಸಿತ್ತು.

ನ್ಯಾಯಾಲಯದ ತೀರ್ಪು ಪ್ರಪಂಚದಾದ್ಯಂತ ಸಂಚಲನ ಉಂಟುಮಾಡಿದೆ. ತೀರ್ಪು ಎಲ್ಲ ರೀತಿಯಲ್ಲಿಯೂ ಪ್ರತ್ಯೇಕತಾವಾದಕ್ಕೆ ಪೂರ್ಣ ಬೆಂಬಲ ನೀಡಿದಂತಾಗಿದೆ. ಹಾಗಾಗಿ ಇದು ಪ್ರತ್ಯೇಕತಾವಾದಿ ಚಳವಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದಂತಾಗಿದೆ. ಯಾವುದೇ ಪ್ರತ್ಯೇಕತಾವಾದಿ ಚಳವಳಿಯು ತಾನು ಆಕ್ರಮಿಸಿಕೊಂಡಿರುವ ಪ್ರದೇಶವನ್ನು ಸ್ವತಂತ್ರವೆಂದು ಘೋಷಿಸಿಕೊಂಡು, ಅಂತರರಾಷ್ಟ್ರೀಯ ನ್ಯಾಯಾಲಯದ ಮೊರೆಹೋಗಬಹುದಾಗಿದೆ. ಉತ್ತರ ಸೈಪ್ರಸ್, ಸೊಮಾಲಿಲ್ಯಾಂಡ್, ನೊಗೊರ್ನೊ-ಕರಬಾಕ್, ದಕ್ಷಿಣ ಒಸ್ಸೇಷಿಯಾ, ಅಲ್ಕಾಜಿಯ, ಟ್ರಾನ್ಸ್‌ನಿಸ್ಟೀರಿಯ ಮೊದಲಾದ ಕಡೆಗಳಲ್ಲಿ ಪ್ರತ್ಯೇಕತಾವಾದಿ ಚಳವಳಿಗಳು ಈಗಾಗಲೇ ಪ್ರಬಲವಾಗಿವೆ. ಅಂತರರಾಷ್ಟ್ರೀಯ ನ್ಯಾಯಾಲಯದ ಈ ತೀರ್ಪಿನ ಪರಿಣಾಮಗಳನ್ನು ಈಗ ಪರಿಶೀಲಿಸಲಾಗುತ್ತಿದೆ. ಈ ತೀರ್ಪು ಹೊಸ ವಿವಾದಕ್ಕೆಡೆಕೊಟ್ಟಿದೆ.


**ಸೀಯಾರ್ಕೆ**

'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು -೫೬೦ ೦೮೫


## ಇದು ನಿಮಗೆ ತಿಳಿದಿರಲಿ

* **ಪರಮಾಣು ಬಾಂಬು :** ೧೯೪೫ರ ಆಗಸ್ಟ್ ೬ರಂದು ಬೆಳಗ್ಗೆ ೮.೧೫ ಗಂಟೆಗೆ ಜಪಾನಿನ ಹಿರೋಷಿಮಾ ನಗರದ ಮೇಲೆ ಹಾಕಿದ ಪರಮಾಣು ಬಾಂಬ್ ಸ್ಫೋಟ ದಿಂದ ಕ್ಷಣಮಾತ್ರದಲ್ಲಿ ಸತ್ತವರ ಸಂಖ್ಯೆ ೬೦,೦೦೦. ಗಾಯಗೊಂಡವರು ಒಂದು ಲಕ್ಷ. ಇದರಲ್ಲಿ ವಿಕಿರಣಕ್ಕೆ ಬಲಿಯಾಗಿ ಬಳಲಿದವರ ಸಂಖ್ಯೆಯನ್ನು ಸೇರಿಸಿಲ್ಲ. ಅದೇ ದಿನ ಬೆಳಗ್ಗೆ ೧೧ ಗಂಟೆಗೆ ನಾಗಸಾಕಿಯ ಮೇಲೆ ಹಾಕಿದ ಎರಡನೇ ಪರಮಾಣು ಬಾಂಬು ಸ್ಫೋಟಗೊಂಡಾಗ ಸತ್ತವರ ಸಂಖ್ಯೆ ೩೭,೫೦೧. ಗಾಯಗೊಂಡವರು ೧ ಲಕ್ಷ ಜನ. ಎರಡೂ ಬಾಂಬುಗಳನ್ನು ಹಾಕಿದ್ದು ಅಮೆರಿಕಾ, ಎರಡನೇ ಮಹಾಯುದ್ಧದ ಕೊನೆಯ ದಿನಗಳಲ್ಲಿ.
* ಯುದ್ಧದ ಹಲವು ಆಧುನಿಕ ಶಸ್ತ್ರಾಸ್ತ್ರಗಳು ಪಟ್ಟಣಗಳ ಮೇಲೆ ಪರೀಕ್ಷಾರ್ಥವಾಗಿ ಪ್ರಯೋಗವಾಗುತ್ತಿರುತ್ತವೆ. ವಿಯೆಟ್ನಾಮಿನಲ್ಲಿ ಅಮೆರಿಕಾ, ಲೆಬನಾನ್ ಮತ್ತು ಪ್ಯಾಲೆಸ್ಟೈನಿನಲ್ಲಿ ಇಸ್ರೇಲ್ ಇವನ್ನು ಪ್ರಯೋಗಿಸಿವೆ.
* **ಅಂತಃಸ್ಫೋಟಕ ಬಾಂಬ್ ಅಥವಾ ವ್ಯಾಕ್ಯೂಮ್ ಬಾಂಬ್ :** ಇದು ಒಂದೇ ಸಲಕ್ಕೆ ಎಲ್ಲವನ್ನೂ ನಿರ್ನಾಮಗೊಳಿಸುವ ಶಕ್ತಿಯನ್ನು ಪಡೆದಿದೆ. ಕೆಲವೇ ಸೆಕೆಂಡುಗಳಲ್ಲಿ ಹತ್ತು ಅಂತಸ್ತಿನ ಕಟ್ಟಡವನ್ನೂ, ಅದರೊಳಗೆ ವಾಸವಾಗಿರುವ ಜನರನ್ನೂ ನಾಮಾವಶೇಷ ಮಾಡುವಂಥ ಶಕ್ತಿಯನ್ನು ಹೊಂದಿದೆ.
* **ರಂಜಕದ ಬಾಂಬು :** ಇದು ಸಿಡಿದಾಗ ಕೈಕಾಲುಗಳು, ಚರ್ಮ ಸುಟ್ಟು ಶ್ವಾಸಕೋಶದ ಕಾಯಿಲೆಗೆ ಜನ ತುತ್ತಾಗಿ ಬದುಕಿರುವವರೆಗೆ ಸುಡುತ್ತಲೇ ಇರುವ ಯಾತನೆಗೆ ಜನರು ತುತ್ತಾಗುತ್ತಾರೆ. ವಿಜ್ಞಾನ ಕಲಿತಿರುವ ಹೈಸ್ಕೂಲು ವಿದ್ಯಾರ್ಥಿಗಳಿಗೆ ರಂಜಕದ ಗುಣ ತಿಳಿದಿರುತ್ತದೆ. ಈ ರಂಜಕ ನೀರಿನಲ್ಲಿರುವಷ್ಟು ಹೊತ್ತು ಶಾಂತವಾಗಿರುತ್ತದೆ. ಒಮ್ಮೆ ಹೊರ ಬಂದರೆ ಸುಡುತ್ತಲೇ ಇರುತ್ತದೆ. ಈ ಬಾಂಬು ದಾಳಿಗೆ ತುತ್ತಾದ ಜನರ ಶ್ವಾಸಕೋಶಗಳು ಸುಡುತ್ತಾ ಹೋದಂತೆ ನರಳುತ್ತಲೇ ಸತ್ತುಹೋದರೆ ಕೈಗೆ, ಮೈಗೆ ತಗಲಿದವರು ಬದುಕಿನುದ್ದಕ್ಕೂ ಪಡುವ ಹಿಂಸೆ ಯಾವ ಮಟ್ಟದ್ದೆಂದರೆ ಅವರ ಚರ್ಮ ಸುಟ್ಟುಹೋಗು ವುದಲ್ಲದೆ ಕ್ರಮೇಣ ಮಾಂಸಖಂಡಗಳನ್ನು ಸುಟ್ಟು ಎಲುಬುಗಳಿಗೂ ತಗಲುತ್ತದೆ.
* **ಕ್ಲಸ್ಟರ್ ಬಾಂಬು :** ಇದು ಜನರನ್ನು ಸಾಮೂಹಿಕವಾಗಿ ನಾಶಗೊಳಿಸುವ ಅಸ್ತ್ರ ಇದು ಸ್ಫೋಟಗೊಂಡ ಕೂಡಲೇ ಅದರ ಸಣ್ಣಸಣ್ಣ ಚೂರುಗಳು ಬಹಳ ದೂರದವರೆಗೆ ವ್ಯಾಪಕವಾಗಿ ಹರಡುತ್ತವೆ. ಈ ಚೂರುಗಳು ಎಲ್ಲೆಂದರಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತವೆ. ಆಡುತ್ತಿರುವ ಮಕ್ಕಳು ಅಥವಾ ಬೇರೆ ಯಾರಾದರೂ ಕುತೂಹಲದಿಂದ ಕೈಗೆತ್ತಿಕೊಂಡರೆ ಸಾಕು, ಅದು ಸ್ಫೋಟಗೊಂಡು ಲೆಕ್ಕವಿಲ್ಲದಷ್ಟು ಚೂಪಾದ ಲೋಹದ ಚೂರುಗಳಾಗಿ ಪರಿವರ್ತನೆಗೊಂಡು ಅವರನ್ನೂ ಸೇರಿದಂತೆ ಸುತ್ತಲಿರುವ ಜನರ ಮೇಲೆ ಚೂಪಾದ ಲೋಹದ ಚೂರುಗಳು ಸಿಡಿದು ಮುಖ, ಕೈಕಾಲುಗಳು, ಕಣ್ಣುಗಳನ್ನು ಹೊಕ್ಕು, ಅಂಗಾಂಗಗಳನ್ನು ಎಲುಬುಗಳನ್ನು ಕೂಡ ಘಾಸಿಗೊಳಿಸುತ್ತದೆ. ತಡವಾಗಿ ಸ್ಫೋಟಗೊಳ್ಳುವ ತಂತ್ರಜ್ಞಾನವನ್ನು ಒಳಗೊಂಡಿರುವ ಈ ಛಿದ್ರಕಾರಿ ಬಾಂಬುಗಳನ್ನು ದಟ್ಟವಾದ ಜನಸಂಖ್ಯೆಯುಳ್ಳ ಸ್ಥಳಗಳಲ್ಲಿ ಹಾಕಲಾಗುತ್ತದೆ. ನಿರಪರಾಧಿ ನಾಗರಿಕರು, ಮಕ್ಕಳು ಇದಕ್ಕೆ ಬಲಿಯಾಗುತ್ತಾರೆ.



# ಕೊಡವ ಪ್ರತಿಭೆ ಬುಟ್ಟಿಯಂಡ ದೇವಕಿಯಮ್ಮ

**ಬಾ** ಜ್ಯೋತಿ ಮಂಟಪಕ್ ಕಾವೇರಿ ತಾಯೆ...
ಭಾರತ ತಾಯೆ ... ಭಾರತ ತಾಯೆ

– ಎಂದು ೧೯೬೦ರಲ್ಲಿ ಸಾವಿರಾರು ಜನರ ಮುಂದೆ ಹಾಡಿ, ಇಡಿಯ ಸಭೆ ಹುಬ್ಬೇರಿಸುವಂತೆ ಮಾತನಾಡಿದವರು ಬುಟ್ಟಿಯಂಡ ದೇವಕಿಯಮ್ಮನವರು.

'ದೇವಕಿಯಮ್ಮ' ಎಂದೇ ಜನಜನಿತರಾಗಿದ್ದ ಬುಟ್ಟಿಯಂಡ ದೇವಕಿಯವರು ದಕ್ಷಿಣ ಕೊಡಗಿನ ಸುಂದರ ಪ್ರಾಕೃತಿಕ ಪರಿಸರದ ನಡುವಿನ ನಿಸರ್ಗ ರಮಣೀಯ ತಾಣ ಬಿರುನಾಣಿಯಲ್ಲಿ ನೆಲ್ಲೀರ ಕುಟ್ಟಪ್ಪ - ನೀಲಮ್ಮ (ತವರುಮನೆ ಅಜ್ಜೀಕುಟ್ಟೀರ)ನವರಿಗೆ ಮಗಳಾಗಿ ೧೯೧೧ರಲ್ಲಿ ಜನಿಸಿದರು.

ದಟ್ಟಕಾಡುಗಳ ನಡುವಿನ ಪರಿಸರದಲ್ಲಿ ಬದುಕುವ ಕೊಡವ ಹೆಣ್ಣಿನ ಸಹಜ ಧೈರ್ಯ, ಕ್ರಿಯಾಶೀಲತೆ, ಸೌಂದರ್ಯವನ್ನು ಮೈಗೂಡಿಕೊಂಡು, ಹೆತ್ತವರ ಪ್ರೀತಿಯ ಮಗಳಾಗಿ ಬೆಳೆಯತೊಡಗಿದ ದೇವಕಿಯಮ್ಮ ಓದಿದ್ದು ೬ನೆಯ ತರಗತಿಯವರೆಗೆ. ಆರಂಭಿಕ ವಿದ್ಯಾಭ್ಯಾಸವನ್ನು ಬಿರುನಾಣಿಯ ಪ್ರಾಥಮಿಕ ಶಾಲೆಯಲ್ಲಿ ನಡೆಸಿದರು. ಆನಂತರ ಮೂರು ವರ್ಷಗಳ ಕಾಲ ವಿದ್ಯಾಭ್ಯಾಸವನ್ನು ದಕ್ಷಿಣ ಕೊಡಗಿನ ಬೆಸಗೂರಿನಲ್ಲಿರುವ ತನ್ನ ತಾಯಿಯ ತವರು ಅಜ್ಜಿಕುಟ್ಟೀರ ಮನೆಯಲ್ಲಿದ್ದು ಬೆಸಗೂರು ಪ್ರಾಥಮಿಕ ಶಾಲೆಯಲ್ಲಿ ಮುಂದುವರಿಸಿದರು. ಅಲ್ಲಿ ಕೊಡಗಿನ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ಬಿ.ಡಿ. ಗಣಪತಿಯವರನ್ನು ಇವರು ಭೇಟಿಯಾದರು.

ಬಾಲ್ಯದಿಂದಲೇ ಸಂಗೀತ, ಹಾಡು, ನೃತ್ಯಗಳ ಕಡೆಗೆ ಆಕರ್ಷಣೆಯನ್ನು, ಆಸಕ್ತಿಯನ್ನು ಬೆಳೆಸಿಕೊಂಡ ದೇವಕಿಯಮ್ಮ ಹಲವಾರು ದೇವರನಾಮಗಳನ್ನು, ಕಾವೇರಿ ಸ್ತೋತ್ರಗಳನ್ನು ಕಂಠಪಾಠ ಮಾಡಿದ್ದರು. ಹಾಗೆಯೇ ಆ ಕಾಲದಲ್ಲಿ ಕೊಡಗಿನಲ್ಲಿ ಪ್ರದರ್ಶನಗೊಂಡು ಜನರನ್ನು ಆಕರ್ಷಿಸಿದ್ದ ಕೊಡಗಿನ ಖ್ಯಾತ ಪ್ರಾಚೀನ ಕವಿ ಹಾಗೂ ನಾಟಕಕಾರ ಹರದಾಸ ಅಪ್ಪನೆರವಂಡ ಅಪ್ಪಚ್ಚ ಕವಿಯವರ ಯಯಾತಿ ರಾಜ, ಕಾವೇರಿ, ಸುಬ್ರಹ್ಮಣ್ಯ, ಸಾವಿತ್ರಿ ನಾಟಕಗಳ ಹಾಡುಗಳನ್ನು ಕಲಿತಿದ್ದರು.

ಬಾಲ್ಯದಿಂದಲೇ ಸಂಗೀತ, ಹಾಡು, ನೃತ್ಯಗಳ ಕಡೆಗೆ ಆಕರ್ಷಣೆಯನ್ನು, ಆಸಕ್ತಿಯನ್ನು ಬೆಳೆಸಿಕೊಂಡ ದೇವಕಿಯಮ್ಮ ಹಲವಾರು ದೇವರನಾಮಗಳನ್ನು, ಕಾವೇರಿ ಸ್ತೋತ್ರಗಳನ್ನು ಕಂಠಪಾಠ ಮಾಡಿದ್ದರು. ಹಾಗೆಯೇ ಆ ಕಾಲದಲ್ಲಿ ಕೊಡಗಿನಲ್ಲಿ ಪ್ರದರ್ಶನಗೊಂಡು ಜನರನ್ನು ಆಕರ್ಷಿಸಿದ್ದ ಕೊಡಗಿನ ಖ್ಯಾತ ಪ್ರಾಚೀನ ಕವಿ ಹಾಗೂ ನಾಟಕಕಾರ ಹರದಾಸ ಅಪ್ಪನೆರವಂಡ ಅಪ್ಪಚ್ಚ ಕವಿಯವರ ಯಯಾತಿ ರಾಜ, ಕಾವೇರಿ, ಸುಬ್ರಹ್ಮಣ್ಯ, ಸಾವಿತ್ರಿ ನಾಟಕಗಳ ಹಾಡುಗಳನ್ನು ಕಲಿತಿದ್ದರು.

ಇತರ ಹಾಡುಗಳನ್ನು ಕಲಿತು ಸುಶ್ರಾವ್ಯವಾಗಿ ಹಾಡುತ್ತಿದ್ದ ದೇವಕಿಯಮ್ಮ ಅನಂತರದಲ್ಲಿ ಕನ್ನಡ ಹಾಗೂ ಕೊಡವ ಭಾಷೆಯಲ್ಲಿ ಸ್ವತಃ ಕವನಗಳನ್ನು ರಚಿಸಿ ಹಾಡುವ ಹವ್ಯಾಸವನ್ನು ಬೆಳೆಸಿಕೊಂಡರು. ಬಿರುನಾಣಿಯ ಬುಟ್ಟಿಯಂಡ ಶ್ರೀಮತಿ ಶ್ರೀ ದೇವಯ್ಯ ದಂಪತಿಗಳ ಮಗ ಅಪ್ಪಣ್ಣನವರದು ಸುಸಂಸ್ಕೃತ ಕುಟುಂಬ. ಅದರಲ್ಲೂ ಬ್ರಿಟಿಷರೊಂದಿಗೆ ಹೆಚ್ಚಿನ ಒಡನಾಟವಿದ್ದು, ಬ್ರಿಟಿಷ್ ಆಡಳಿತ ವ್ಯವಸ್ಥೆಯಲ್ಲಿ ಕೆಲವು ಪ್ರತಿಷ್ಠಿತ ಹುದ್ದೆಗಳಲ್ಲಿ ಇವರ ಕುಟುಂಬಸ್ಥರು ತೊಡಗಿಕೊಂಡಿದ್ದರು. ಬ್ರಿಟಿಷ್ ಶಿಕ್ಷಣ ವ್ಯವಸ್ಥೆಯಲ್ಲಿ ಶಾಲಾ ಇನ್‌ಸ್ಪೆಕ್ಟರ್ ಆಗಿ ಉದ್ಯೋಗದಲ್ಲಿದ್ದ ತಂದೆ ಬುಟ್ಟಿಯಂಡ ದೇವಯ್ಯನವರು ನಿರರ್ಗಳವಾಗಿ ಇಂಗ್ಲಿಷ್ ಮಾತನಾಡಬಲ್ಲವರಾಗಿದ್ದರು. ೧೯೦೨ರಲ್ಲಿ ಜನಿಸಿ ಆ ಕಾಲದ ಇಂಟರ್‌ಮೀಡಿಯೇಟ್‌ವರೆಗೆ ವಿದ್ಯಾಭ್ಯಾಸ ಮಾಡಿದ್ದ ಅಪ್ಪಣ್ಣನವರು ತಂದೆಯ ಇಂಗ್ಲಿಷ್ ಜ್ಞಾನದಿಂದ ಪ್ರಭಾವಿತಗೊಂಡಿದ್ದರು. ಅಪ್ಪಣ್ಣನವರಿಗೆ ೧೯೨೮ರಲ್ಲಿ ಪುಟ್ಟಿಚಂಡ ಬೋಜಿಯವರೊಂದಿಗೆ ವಿವಾಹವಾಯಿತು. ಇಬ್ಬರು ಗಂಡು ಮಕ್ಕಳಿಗೆ ಜನ್ಮವಿತ್ತ ಮಡದಿ ಶ್ರೀಮತಿ ಬೋಜಿಯವರು ೧೯೩೯ರಲ್ಲಿ ಅನಾರೋಗ್ಯದಿಂದ ವಿಧಿವಶರಾದರು. ಅದೇ ವರ್ಷದಲ್ಲಿ ಅಪ್ಪಣ್ಣನವರಿಗೆ ದೇವಕಿಯಮ್ಮನವರೊಂದಿಗೆ ಮರುಮದುವೆಯಾಯಿತು. ಅಪ್ಪಣ್ಣ-ದೇವಕಿ ದಂಪತಿಗಳಿಗೆ ದೇವಯ್ಯ (ದಿವಂಗತ), ಮೇಜರ್ ಮಂದಣ್ಣ, ಅಚ್ಚಯ್ಯ, (ದಿವಂಗತ) ಕುಟ್ಟಪ್ಪ ಹಾಗೂ ಮುದ್ದಪ್ಪ ಎಂಬ ಐದು ಜನ ಗಂಡುಮಕ್ಕಳು. ಬಿರುನಾಣಿ ಹಾಗೂ ಬಿಟ್ಟಂಗಾಲದಲ್ಲಿ ನೀರಾವರಿ ಜಮೀನು ಮತ್ತು ಕಾಫಿ ತೋಟವನ್ನು ಹೊಂದಿದ್ದ ಅಪ್ಪಣ್ಣನವರ ಸಂಸಾರ ಕೆಲವು ವರ್ಷಗಳ ಕಾಲ ಕೃಷಿ ಚಟುವಟಿಕೆಗಳಲ್ಲಿ ತೊಡಗಿಕೊಂಡಿತು. ಇಂಗ್ಲಿಷ್ ಬಲ್ಲವರಾದ್ದರಿಂದ ಇವರಿಗೆ ಮಡಿಕೇರಿಯ ನಾರ್ತ್ ಕೂರ್ಗ್ ಕ್ಲಬ್‌ನಲ್ಲಿ ಮ್ಯಾನೇಜರ್ ಹುದ್ದೆ ದೊರಕಿತು. ಈ ಸಂದರ್ಭದಲ್ಲಿ ಬ್ರಿಟಿಷ್ ಅಧಿಕಾರಿಯಾಗಿದ್ದ ಇರ್ವಿನ್‌ನವರೊಂದಿಗೆ ಸ್ನೇಹ ಬೆಳೆದು ಅವರ ಆಹ್ವಾನದಂತೆ ಅವರ ನೇತೃತ್ವದಲ್ಲಿದ್ದ ಮಾದಾಪುರದ ಕನ್ಸಾಲಿಡೇಟೆಡ್ ಕಾಫಿ ಎಸ್ಟೇಟಿನ ಜಂಬೂರ್ ಎಸ್ಟೇಟಿಗೆ ಮೇನೇಜರ್ ಆಗಿ ಸುಮಾರು ೧೯೪೬ರವರೆಗೂ ಉದ್ಯೋಗದಲ್ಲಿದ್ದರು. ನಂತರ ಮತ್ತೆ ಉದ್ಯೋಗ ಬಿಟ್ಟು ಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ಜಿಲ್ಲಾ ಕೇಂದ್ರವಾದ ಮಡಿಕೇರಿಗೆ ಆಗಮಿಸಿದರು. ಮಡಿಕೇರಿಯ ಅಪ್ಪನೆರವಂಡ ಮಾದಪ್ಪನವರ ಮಾಲಿಕತ್ವದ 'ಕಾವೇರಿ ಮಹಲ್'ನಲ್ಲಿ ೧೯೪೬ರಿಂದ ೧೯೫೪ರವರೆಗೆ ಮ್ಯಾನೇಜರ್ ಆಗಿದ್ದರು. ಆಗ ಅಪ್ಪನೆರವಂಡ ಬೆಳ್ಯಪ್ಪ, ಎಂ. ಸಿ. ನಾಣಯ್ಯ ಮುಂತಾದ ಪ್ರಮುಖರ ಒಡನಾಟದಲ್ಲಿದ್ದರು. ಮುಂದೆ ೧೯೬೭ರಲ್ಲಿ ಅನಾರೋಗ್ಯದಿಂದ ವಿಧಿವಶರಾದರು.

ದೇವಕಿಯಮ್ಮನವರನ್ನು ಸಾಹಿತ್ಯದತ್ತ ಸೆಳೆದ ಘಟನೆಯೊಂದು ಆಕಸ್ಮಿಕವಾಗಿ ೧೯೨೦ರಲ್ಲಿ ನಡೆಯುತ್ತದೆ. – ೧೯೨೦ರ ದಶಕದಲ್ಲಿ ಕೊಡಗಿನ 'ಆದಿಕವಿ' ಹರದಾಸ ಅಪ್ಪನೆರವಂಡ ಅಪ್ಪಚ್ಚ ಕವಿಯವರ ಮನೆಗೆ ಬೆಂಕಿ ಬಿದ್ದು ಅವರು ನಷ್ಟವನ್ನು

**ಡಾ॥ ಎಂ. ಪಿ. ರೇಖಾ**

ಅನುಭವಿಸುತ್ತಾರೆ. ಈ ಸಂದರ್ಭದಲ್ಲಿ ಬಿರುನಾಣಿಗೆ ಬಂದಿದ್ದ ಅವರು ೯ ವರ್ಷದ ಪುಟ್ಟ ಬಾಲಕಿ ದೇವಕಿಯಮ್ಮನನ್ನು ಮಾತನಾಡಿಸುತ್ತಾರೆ. ದೇವರ ನಾಮಗಳೊಂದಿಗೆ ಅಪ್ಪಚ್ಚ ಕವಿಯವರ ಪ್ರಸಿದ್ಧ ನಾಟಕಗಳಾದ ಯಯಾತಿ ರಾಜ, ಸಾವಿತ್ರಿ, ಸುಬ್ರಹ್ಮಣ್ಯ, ಕಾವೇರಿ ನಾಟಕಗಳ ಹಾಡುಗಳನ್ನು ಕಂಠಪಾಠ ಮಾಡಿದ್ದ ದೇವಕಿಯಮ್ಮ ಕವಿಯ ಮುಂದೆ ಹಾಡುತ್ತಾರೆ. ದೇವಕಿಯಮ್ಮನ ಶಾರೀರವನ್ನು ಹೊಗಳಿ ಅವಳಿಂದ ತಮ್ಮ ನಾಟಕದ ಮತ್ತಷ್ಟು ಹಾಡುಗಳನ್ನು ಹಾಡಿಸಿ ಸಂತೋಷದಿಂದ ಕೇಳಿದ ಅಪ್ಪಚ್ಚ ಕವಿಯವರು ದೇವಕಿಯಮ್ಮನಿಗೆ ಹರಸಿ ಹಾಡನ್ನು ಮುಂದುವರಿಸುವಂತೆಯೂ, ಈ ದಿಸೆಯಲ್ಲಿ ಆಕೆಗೆ ಉಜ್ವಲ ಭವಿಷ್ಯವಿರುವುದಾಗಿಯೂ ಹಾರೈಸಿ ಪ್ರೋತ್ಸಾಹಿಸಿದ್ದರು. ಅಪ್ಪಚ್ಚ ಕವಿಯವರ ಪ್ರೋತ್ಸಾಹ ಮುಂದೆ ದೇವಕಿಯಮ್ಮ ಕವನಗಳ ರಚನೆ, ಹಾಡುಗಾರಿಕೆಯಲ್ಲಿ ತನ್ನನ್ನು ಮತ್ತಷ್ಟು ತೊಡಗಿಸಿಕೊಳ್ಳುವಂತೆ ಮಾಡಿತು.

ಮುಂದೆ ಮದುವೆಯಾಗಿ ಗಂಡ, ಆತನ ಮೊದಲ ಹೆಂಡತಿಯ ಮಕ್ಕಳೊಂದಿಗೆ ಮಾದಾಪುರದ ಕಾಫಿ ತೋಟಕ್ಕೆ ಕಾಲಿಟ್ಟ ದೇವಕಿಯಮ್ಮನವರೊಳಗಿದ್ದ ನಿಜವಾದ ಕವಯತ್ರಿ ಜಾಗೃತಳಾದಳು. ಒಂದೆಡೆ ಗಂಡನ ಕುಡಿತ, ಬಲಮಕ್ಕಳ ಜವಾಬ್ದಾರಿ, ಸಾಂಸಾರಿಕ ಹೊಣೆಗಾರಿಕೆಯಾದರೆ ಮತ್ತೊಂದು ಕಡೆ ಬ್ರಿಟಿಷರ ಆಳ್ವಿಕೆಯ ಅಧಿಕಾರದಲ್ಲಿ ಹಲವು ವಿಭಿನ್ನ ವ್ಯಕ್ತಿತ್ವಗಳ ಕಾರ್ಮಿಕರು, ಕೆಲಸಗಾರರು, ರೈಟರ್‌ಗಳು (ಮೇಲ್ವಿಚಾರಕರು) ಇವರ ನಡವಳಿಕೆ ಸೂಕ್ಷ್ಮ ಮನಸ್ಸಿನ ದೇವಕಿಯಮ್ಮನನ್ನು ವಿಸ್ಮಯಗೊಳಿಸಿದವು.

ಎಸ್ಟೇಟಿನ ನಡುವಿನಲ್ಲಿದ್ದ ಬಂಗಲೆಯಿಂದ ಸುಮಾರು ಒಂದು ಕಿ. ಮೀ. ದೂರದಲ್ಲಿದ್ದ 'ಕಲ್ಲುಬಂಟೆ'ಯ ಮೇಲೆ ಕುಳಿತು ಅಲ್ಲಿ ತಾವು ಕಂಡ, ಕೇಳಿದ ವಿಷಯವನ್ನಾಧರಿಸಿ ಇವರು ಕಾವ್ಯ ಕೃಷಿಯನ್ನಾರಂಭಿಸಿದರು. ಲಾವಣಿಯ ಮಟ್ಟಿನಲ್ಲಿ ಕನ್ನಡ, ಕೊಡವದಲ್ಲಿ ಹಲವು ಕವನಗಳನ್ನು ಬರೆದರು.

ಅವರ ಮಗ ಮೇಜರ್ ಮಂದಣ್ಣನವರ ನೆನಪಿನಂತೆ... ಅವರ ಕವನದ ಕೆಲವು ಸಾಲುಗಳು ಹೀಗಿವೆ –

*ಕೇಳಿರಿ ಕೇಳಿರಿ...*
*ಜಾಂಬೂರು ತೋಟದ ಕಥೆಯನ್ನ*
*...ಮದ್ರಾಸ್ ನೋರ್ಟನ್ ಲಾಯರು*
*ಬಂದರು ಅಂಜುವ ಜನರು ಇವರಲ್ಲ*

ತೆರೆಮರೆಯಲ್ಲಿ ಕವಯತ್ರಿಯಾಗಿದ್ದ ದೇವಕಿಯಮ್ಮನವರಿಗೆ ಜಿಲ್ಲಾ ಕೇಂದ್ರ ಮಡಿಕೇರಿಗೆ ಬಂದ ನಂತರ ತಮ್ಮಲ್ಲಿನ ಪ್ರತಿಭೆಯನ್ನು ಪ್ರದರ್ಶಿಸಲು ಹಲವಾರು ಅವಕಾಶಗಳು ದೊರೆತವು.

ದೈವಭಕ್ತೆಯಾಗಿ ಪೂಜೆ ಪುನಸ್ಕಾರಗಳ ಕುರಿತು ಆಸಕ್ತರಾಗಿದ್ದ ಅವರು ಮಡಿಕೇರಿಯ 'ವೇದಾಂತ ಸಂಘ'ದಲ್ಲಿ ನಡೆಯುತ್ತಿದ್ದ ಸತ್ಸಂಗದಲ್ಲಿ ಭಾಗವಹಿಸುತ್ತಿದ್ದರು. ಇಲ್ಲಿ ತಮ್ಮ ಬೌದ್ಧಿಕ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡರು. ಹಲವು ಉತ್ತಮ ಜನರ ಒಡನಾಟ ದೊರೆಯಿತು. ಶಾಸ್ತ್ರೀಯ ಸಂಗೀತವನ್ನು ಕೂಡ ಈ ಸಮಯದಲ್ಲಿ ಕಲಿತರು. ನಂತರದಲ್ಲಿ ನಿರಂತರವಾಗಿ ಲಾವಣಿಗಳನ್ನು ಬರೆಯಲಾರಂಭಿಸಿದರು.

ಗಾಂಧೀಜಿಯವರು ಮಡಿಕೇರಿಗೆ ಬಂದಿದ್ದಾಗ ದೇವಕಿಯಮ್ಮ ಅವರನ್ನು ಭೇಟಿಮಾಡಿ ಕೊಡವ ಸಾಂಪ್ರದಾಯಿಕ ಪದ್ಧತಿಯಂತೆ ಅವರ ಪಾದಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದಿದ್ದರು. ೧೯೪೮ರಲ್ಲಿ ಗಾಂಧೀಜಿಯವರ ಮರಣದ ಸಂದರ್ಭದಲ್ಲಿ ಮಡಿಕೇರಿಯ ರಾಜಾಸೀಟ್‌ನಲ್ಲಿ ಶೋಕ ಸೂಚನೆಯಾಗಿ ಸಂತಾಪ ಸಭೆಯನ್ನು ಏರ್ಪಡಿಸಿದ್ದಾಗ ಕೊಡವ ಹಾಗೂ ಕನ್ನಡ ಎರಡೂ ಭಾಷೆಗಳಲ್ಲಿ ಗಾಂಧೀಜಿಯವರ ಬಗೆಗೆ ಸ್ವರಚಿತ ಲಾವಣಿ ಹಾಡಿ ಎಲ್ಲರ ಮೆಚ್ಚುಗೆ ಗಳಿಸಿದ್ದರು. ೧೯೩೪ರಿಂದ ೧೯೬೩ರ ಕಾಲಘಟ್ಟದಲ್ಲಿ ಮಹಾತ್ಮಾ ಗಾಂಧೀಜಿ, ರವೀಂದ್ರನಾಥ ಠಾಕೂರ್, ಝಾನ್ಸಿರಾಣಿ ಲಕ್ಷ್ಮೀಬಾಯಿಯವರ ಕುರಿತು ಸುದೀರ್ಘವಾದ ಲಾವಣಿಗಳನ್ನು ರಚಿಸಿ ಹಾಡಿದ್ದರು.

೧೯೬೦ ದೇವಕಿಯಮ್ಮನವರ ಜೀವಿತಾವಧಿಯ ಸುವರ್ಣ ವರ್ಷವೆನ್ನಬಹುದು. ಕೊಡಗಿನ ಪ್ರಮುಖ ಹಾಡುಗಾರ್ತಿಯಾಗಿ, ಭಾಷಣಕಾರ್ತಿಯಾಗಿ ಗುರುತಿಸಿಕೊಂಡ ಇವರನ್ನು ೧೯೬೦ರ ಜನವರಿ ೨೬ರಂದು ದೆಹಲಿಯಲ್ಲಿ ನಡೆದ ಗಣರಾಜ್ಯೋತ್ಸವ ಪಥ ಸಂಚಲನದಲ್ಲಿ ಕೊಡಗನ್ನು ಪ್ರತಿನಿಧಿಸಲು ಆಯ್ಕೆಮಾಡಿ ಕಳುಹಿಸಲಾಯಿತು. ಅಲ್ಲಿಗೆ ತಮ್ಮೊಂದಿಗೆ ಕೊಡವ ಸಾಂಪ್ರದಾಯಿಕ ಜನಪದ ತಂಡಗಳನ್ನು ಕರೆದೊಯ್ದು ಪ್ರದರ್ಶನ ನೀಡಿದ್ದ ಹಿರಿಮೆ ಇವರದು. ಅಲ್ಲಿ ಕೊಡವ, ಕನ್ನಡ ಭಾಷೆಗಳಲ್ಲಿ ಸ್ವರಚಿತ ಲಾವಣಿಗಳನ್ನು ಸುಶ್ರಾವ್ಯ ದನಿಯಲ್ಲಿ ಹಾಡಿ ಪ್ರಧಾನಿಯಾಗಿದ್ದ ಪಂಡಿತ್ ಜವಾಹರಲಾಲ್ ನೆಹರೂರವರಿಂದ ಪ್ರಶಂಸೆಗೆ ಪಾತ್ರರಾಗಿದ್ದರು. ಈ ಘಟನೆಯಿಂದ ದೇವಕಿಯಮ್ಮನವರಿಗೆ ಮತ್ತಷ್ಟು ಪ್ರಚಾರ ಸಿಕ್ಕಿತು. ಬೆಂಗಳೂರು ಆಕಾಶವಾಣಿಯವರು ಇವರನ್ನು ಸಂಪರ್ಕಿಸಿದರು. ಅನಂತರದಲ್ಲಿ ಆಕಾಶವಾಣಿಯಲ್ಲಿ ಹಲವು ವರ್ಷಗಳವರೆಗೆ ನಿರಂತರವಾಗಿ ಕಾರ್ಯಕ್ರಮಗಳನ್ನಿವರು ನೀಡಿದ್ದಾರೆ. ಮತ್ತಷ್ಟು ಸ್ವರಚಿತ ಕವನಗಳನ್ನು ಬರೆದು ವಾಚಿಸಿದ್ದಾರೆ. ಭಾರತತಾಯೆ... ಭಾರತತಾಯೆ... ಎಂಬ ಹಾಡು ಇವರಿಗೆ ಅತ್ಯಂತ ಹೆಸರು ತಂದುಕೊಟ್ಟಿತು.

೧೯೬೦ರಲ್ಲಿ ತಲಕಾವೇರಿಯಲ್ಲಿ ವಿಶೇಷ ಪೂಜೆ ನಡೆದಾಗ ದೇವಕಿಯಮ್ಮನವರನ್ನು ಹಾಡಲು ಅಲ್ಲಿಗೆ ಆಹ್ವಾನಿಸಲಾಗಿತ್ತು. ಆಗ 'ಬಾ ಜ್ಯೋತಿ ಮಂಟಪಕ್ ಕಾವೇರಿ ತಾಯೆ...' ಎಂಬ ಸ್ವರಚಿತ ಹಾಡನ್ನು ಹಾಡಿ ಎಲ್ಲರ ಮನತಣಿಸಿದ್ದರು.

೧೯೬೦ರಲ್ಲಿ ದೇವಕಿಯಮ್ಮನವರ ಅದ್ಭುತ ಪ್ರತಿಭೆಯನ್ನು ಗುರುತಿಸಿದ ಮಂಗಳೂರಿನ ಮಣಿಪಾಲ ಅಕಾಡೆಮಿ ಸಂಸ್ಥೆ ಭಾಷಣಕ್ಕಾಗಿ ಅವರನ್ನು ಆಮಂತ್ರಿಸಿತ್ತು.

೧೯೬೦ರಲ್ಲಿ ಕೊಡವ ತಕ್ಕ್ ಪರಿಷತ್ತಿನ ಮೊದಲ ಸಮಾವೇಶ ಗೋಣಿಕೊಪ್ಪಲಿನಲ್ಲಿ ನಡೆದಾಗ ಮುಖ್ಯ ಭಾಷಣಕಾರ್ತಿಯಾಗಿ ಸಭೆಯಲ್ಲಿ ಹಾಡಿನೊಂದಿಗೆ ಒಂದು ಗಂಟೆಯ ಕಾಲ ನಿರರ್ಗಳವಾಗಿ ಮಾತನಾಡಿದ್ದರು. ಅಂದಿನ ಸಮಾರಂಭದ ಮುಖ್ಯ ಅತಿಥಿಗಳಲ್ಲೊಬ್ಬರಾಗಿದ್ದ ಪ್ರಾಧ್ಯಾಪಕ ಶೇಕ್ ಆಲಿಯವರು ದೇವಕಿಯಮ್ಮನವರ ಪ್ರತಿಭೆಯನ್ನು ಸಭೆಯಲ್ಲೇ ಹೊಗಳಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿ ಸಾಹಿತ್ಯಪರ ಚಟುವಟಿಕೆಗಳಲ್ಲಿ ನಿರತರಾಗಿದ್ದ ದೇವಕಿಯಮ್ಮನವರನ್ನು ೧೯೭೦ರಲ್ಲಿ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಆಯ್ಕೆ ಮಾಡಲಾಗಿತ್ತು.

ಸಾಹಿತ್ಯದೊಂದಿಗೆ ಸಮಾಜಸೇವೆಯಲ್ಲೂ ದೇವಕಿಯಮ್ಮ ಹೆಸರು ಮಾಡಿದ್ದರು. ಸ್ವಾತಂತ್ರ್ಯ ಚಳುವಳಿಯ ಕಾಲಘಟ್ಟದಲ್ಲೇ ಹುಟ್ಟಿಕೊಂಡ ಇತರ ಚಳುವಳಿಗಳಾದ –

(೧) ವಯಸ್ಕರ ಶಿಕ್ಷಣ, (೨) ಪಾನ ನಿರೋಧ, (೩) ಕುಟುಂಬ ಯೋಜನೆ, (೪) ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಮುಂತಾದ ಸಮಾಜಪರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು.

ಸುಂದರವಾಗಿ ಸ್ವಂತಕ್ಕೆ ಕವನಗಳನ್ನು ರಚಿಸಿ ಹಾಡುವುದರ ಜೊತೆಗೆ ನಿರರ್ಗಳವಾಗಿ ಕೊಡವ ಹಾಗೂ ಕನ್ನಡದಲ್ಲಿ ಮಾತನಾಡುವ ಕಲೆಗಾರಿಕೆ ಇವರಿಗೆ ಸಿದ್ಧಿಸಿತ್ತು. ಉತ್ತಮವಾಗ್ಮಿಯಾಗಿ ಗುರುತಿಸಿಕೊಂಡಿದ್ದ ಇವರು ಹಲವಾರು ಸಂಘಟನೆಗಳ ಸಭೆಗಳಲ್ಲಿ ಮುಖ್ಯ ಭಾಷಣಕಾರ್ತಿಯಾಗಿ ಭಾಗವಹಿಸುತ್ತಿದ್ದರು. ದೂರದ ಊರಿಂದ ಸಂಘಟಕರು ಭಾಷಣಕ್ಕಾಗಿ ಇವರನ್ನು ವಾಹನ ಕಳುಹಿಸಿಕೊಟ್ಟು ಆಮಂತ್ರಿಸುತ್ತಿದ್ದುದು ಇವರ ಜನಪ್ರಿಯತೆಗೆ, ಪ್ರಾಮುಖ್ಯತೆಗೆ ಸಾಕ್ಷಿ.

ಮಡಿಕೇರಿಯಲ್ಲಿದ್ದು ಕೊಡಗಿನ ಮಹಿಳೆಯಾಗಿ ಪ್ರಸಿದ್ಧಿಯನ್ನು ಪಡೆದುಕೊಂಡು ಕೊಡಗಿನ ಸಾಹಿತ್ಯ-ಸಮಾಜ ಸೇವಾಕಾರ್ಯಗಳಲ್ಲಿ ಮುಂಚೂಣಿಯಲ್ಲಿ ಗುರುತಿಸಿಕೊಂಡಿದ್ದ ಇವರನ್ನು ಹುಟ್ಟೂರು ಬಿರುನಾಣಿಯ ನಾಗರಿಕರು ಪ್ರಾಥಮಿಕ ಶಾಲೆಯೊಂದನ್ನು ತಮ್ಮೂರಲ್ಲಿ ಸ್ಥಾಪಿಸುವ ಸಲುವಾಗಿ ಸಂಪರ್ಕಿಸಿದ್ದರು. ಆ ಸಂದರ್ಭದಲ್ಲಿ ಮಡಿಕೇರಿಯ ಹಲವಾರು ಗಣ್ಯರಿಂದ, ದಾನಿಗಳಿಂದ ದೇಣಿಗೆಯನ್ನು ಸಂಗ್ರಹಿಸಿಕೊಟ್ಟು ದೇವಕಿಯಮ್ಮ ತಾಯ್ನೆಲದ ಮೇಲಿನ ಪ್ರೀತಿಯನ್ನು ಮೆರೆದರು.

೧೯೪೬ರಿಂದ ೧೯೮೬ರವರೆಗಿನ ನಾಲ್ಕು ದಶಕಗಳ ಕಾಲ ಮಡಿಕೇರಿಯಲ್ಲಿ ವಾಸವಿದ್ದ ದೇವಕಿಯಮ್ಮ ಸಾಹಿತ್ಯ-ಸಂಸ್ಕೃತಿ, ಸಮಾಜಕ್ಕೆ ಅಪರೂಪದ ಕೊಡುಗೆಯನ್ನು ನೀಡಿದ್ದಾರೆ.

ಬೇಸರದ ಸಂಗತಿ ಎಂದರೆ – ದೇವಕಿಯಮ್ಮನವರಲ್ಲಿದ್ದ ದೈತ್ಯ ಪ್ರತಿಭೆ ದಾಖಲಾಗದೆ ಹೋದದ್ದು. ಅವರು ಬರೆದಿದ್ದ ಯಾವುದೆ ಕವನವಾಗಲಿ ಲಾವಣಿಯಾಗಲಿ ಕೃತಿ ರೂಪದಲ್ಲಿ ಪ್ರಕಟವಾಗಿಲ್ಲ. ಹಸ್ತಪ್ರತಿಯೂ ಕೂಡ ದೊರಕುತ್ತಿಲ್ಲ.

(ಮಾಹಿತಿ ಕೃಪೆ : ದೇವಕಿಯಮ್ಮನವರ ಮಗ ಮೇಜರ್ ಮಂದಣ್ಣ, ಶ್ರೀಮತಿ ಜಯಶ್ರೀ ಮಂದಣ್ಣ )

**ಡಾ|| ಎಂ. ಪಿ. ರೇಖಾ**
ಕಾವೇರಿ ಪದವಿ ಕಾಲೇಜು, ಗೋಣಿಕೊಪ್ಪಲ್

# ನವನಿರ್ಮಾಣದತ್ತ ಶಿಕ್ಷಣ

**ವಿ. ಜೆ. ನಾಯಕ**

ಶಿಕ್ಷಣಕ್ಕೆ ಸಂಬಂಧಪಟ್ಟಂತೆ ನಮ್ಮ ಮುಂದಿರುವ ಗುರಿಗಳು ಯಾವುವು ? ವ್ಯಕ್ತಿಯ ವ್ಯಕ್ತಿತ್ವದ ಪೂರ್ಣ ವಿಕಾಸವೇ ಶಿಕ್ಷಣದ ಗುರಿ ಎನ್ನಲಾಗಿದೆ. ಎಳೆಯ ವಿದ್ಯಾರ್ಥಿ ನಾಗರಿಕನಾಗಿ ಬೆಳೆದು ತುಂಬು ಜೀವನವನ್ನು ಬದುಕುವಂತೆ ಸರ್ವ ರೀತಿಯಿಂದ ಸಹಾಯಮಾಡುವುದೇ ಶಿಕ್ಷಣದ ಪರಮೋದ್ದೇಶ. ಆದುದರಿಂದ ಶಾಲೆಗಳ ಕಾರ್ಯಕ್ರಮ ಸಂಯೋಜನೆಯಲ್ಲಿ ಈ ಕೆಳಗಿನ ಸಂಗತಿಗಳನ್ನು ಅವಶ್ಯವಾಗಿ ಗಮನಿಸತಕ್ಕದ್ದು:

* ಪ್ರತಿಯೊಬ್ಬ ವಿದ್ಯಾರ್ಥಿಗೂ ತನ್ನ ವ್ಯಕ್ತಿತ್ವವನ್ನು ಉನ್ನತ ಮಟ್ಟಕ್ಕೆ ಬೆಳೆಸಿಕೊಳ್ಳುವುದಕ್ಕೆ ತಕ್ಕ ಸ್ಫೂರ್ತಿ ಸಿಗಬೇಕು.
* ಅವನವನ/ಳ ಆಸಕ್ತಿ, ಸಾಮರ್ಥ್ಯಕ್ಕೆ ತಕ್ಕಂತಹ ವೃತ್ತಿಯಲ್ಲಿ ಮುಂದೆ ತನ್ನನ್ನು ತೊಡಗಿಸಿಕೊಳ್ಳುವುದಕ್ಕೆ ಅನುಕೂಲವಾದ ಚಾಲನೆ ದೊರಕಬೇಕು.
* ಪ್ರತಿಯೊಬ್ಬನೂ/ಳೂ ಸ್ವತಂತ್ರ ಪ್ರಜ್ಞೆಯುಳ್ಳ, ಸುಸಂಸ್ಕೃತ ಸಮಾಜದ ಜವಾಬ್ದಾರಿಯುತ ಸದಸ್ಯನಾಗುವಂತೆ ತಕ್ಕ ಅರ್ಹತೆ ಪಡೆದುಕೊಳ್ಳಬೇಕು.
* ಜೀವನದ ಸಮಸ್ಯೆಗಳನ್ನು ಸರಿಯಾದ ರೀತಿಯಲ್ಲಿ ಅರ್ಥೈಸಿಕೊಂಡು ಅವುಗಳನ್ನು ಎದುರಿಸುವ ಸಾಮರ್ಥ್ಯವನ್ನು ಪಡೆಯುವಂತೆ ವೈಜ್ಞಾನಿಕ ದೃಷ್ಟಿಕೋನ ಬೆಳೆಸಿಕೊಳ್ಳಬೇಕು.
* ನ್ಯಾಯ-ಅನ್ಯಾಯಗಳ ಪರಿಜ್ಞಾನ, ಸೌಂದರ್ಯಪ್ರಜ್ಞೆ, ಆಶಾವಾದಿತ್ವ ಮೊದಲಾದವು ಸದಾ ಜಾಗೃತವಾಗಿರುವಂತೆ ಸಂಸ್ಕಾರವಾಗಬೇಕು ... ಇತ್ಯಾದಿ.

ಈ ರೀತಿಯಲ್ಲಿ ಒಂದು ಶಿಕ್ಷಣ ಸಂಸ್ಥೆಯು ತನ್ನ ವಿದ್ಯಾರ್ಥಿ ಸಮುದಾಯದ ಮೇಲೆ ಬೀರುವ ಪ್ರಭಾವಗಳ ಸಮಷ್ಟಿ ಪರಿಣಾಮವೇ ನಿಜವಾದ ಶಿಕ್ಷಣವೆನ್ನಿಸುತ್ತದೆ. ನಾವು ಶಾಲೆಗಳಲ್ಲಿ ಬೋಧಿಸುವ ಗಣಿತ, ವಿಜ್ಞಾನ, ಸಾಮಾಜಿಕ ಅಭ್ಯಾಸ, ಸಾಹಿತ್ಯ ಮೊದಲಾದ ಪಠ್ಯ ವಿಷಯಗಳ ಮೂಲಕವೂ, ಪ್ರಯೋಗ-ಪ್ರಾತ್ಯಕ್ಷಿಕೆಗಳ ಮೂಲಕವೂ; ಕ್ರೀಡೆ, ಕಲೆ, ಕಾವ್ಯ, ಕೈ ಕೆಲಸ, ಬರವಣಿಗೆ, ಮನೋರಂಜನೆ, ಸಂಘಟನೆ, ಚುನಾವಣೆ, ಸಂವಾದ, ಸಭೆ-ಸಮಾರಂಭ, ಸಮಾಜಸೇವೆ, ಪ್ರವಾಸ, ಗ್ರಂಥಾಲಯ, ವಸ್ತುಪ್ರದರ್ಶನ ಇತ್ಯಾದಿ ಹಲವು ಹತ್ತು ಪಠ್ಯೇತರ ಕಾರ್ಯಚಟುವಟಿಕೆಗಳ ಮೂಲಕವೂ ಹಾಗೂ ನಮ್ಮ ನಮ್ಮ ವೈಯಕ್ತಿಕ ಒಡನಾಟ, ನಡವಳಿಕೆಗಳ ಪ್ರಭಾವಗಳ ಮೂಲಕವೂ, ವಿದ್ಯಾರ್ಥಿಗಳ ಮೇಲೆ ಈ ಪರಿಣಾಮವನ್ನು ಉಂಟುಮಾಡಲು ಪ್ರಯತ್ನಿಸುತ್ತಿರುತ್ತೇವೆ. ಆದರೆ ನಮ್ಮ ಈ ಪ್ರಯತ್ನ ಎಷ್ಟರ ಮಟ್ಟಿಗೆ ಸಫಲವಾಗಿದೆ ಎಂದು ಗೊತ್ತುಮಾಡುವುದು ಹೇಗೆ? ಅದು ಸುಲಭಸಾಧ್ಯವಲ್ಲ. ತುರ್ತಾಗಿ ಅಳೆದು ನೋಡಬಹುದಾದ ಮಾನದಂಡಗಳೂ ಇಲ್ಲ.

ಮುಖ್ಯವಾಗಿ ನಾವು ಸ್ವೀಕರಿಸಿರುವ ಪರೀಕ್ಷಾ ಪದ್ಧತಿಯು ನಮ್ಮ ವಿದ್ಯಾರ್ಥಿಗಳನ್ನು, ಪಾಲಕರನ್ನು, ಸರಕಾರವನ್ನು, ಆಡಳಿತವರ್ಗವನ್ನು ಹಾಗೂ ಶಿಕ್ಷಕರನ್ನು ತಪ್ಪುದಾರಿಗೆ ಎಳೆಯುತ್ತಿದೆ ಎಂದು ಖಂಡಿತವಾಗಿಯೂ ಹೇಳಬಹುದು. ಇಂದಿನ ನಮ್ಮ ಶಾಲಾ ಪರೀಕ್ಷೆಗಳು ನಿಜವಾದ ಶಿಕ್ಷಣ ಕ್ರಿಯೆಗೆ ಪೋಷಕವಾಗಿಯೂ ಇಲ್ಲ, ಪ್ರೇರಕ ಶಕ್ತಿಯಾಗಿಯೂ ಇಲ್ಲ.

ಸಾಮಾಜಿಕ ಹೊಣೆಯನ್ನರಿತ ಯಾವ ಶಿಕ್ಷಕನೂ ಇಂದಿನ ಪರೀಕ್ಷೆಗಳ ಶೈಕ್ಷಣಿಕ ಅಪಚಾರಗಳನ್ನು ಗುರುತಿಸದೇ ಇರಲಾರ. ಶಿಕ್ಷಣದ ಧ್ಯೇಯೋದ್ದೇಶಗಳ ಕಡೆಗೆ ಆದ್ಯ ಗಮನ ಹರಿಸಬಯಸುವ ಶಿಕ್ಷಕರಾಗಲಿ, ಮುಖ್ಯಸ್ಥರಾಗಲಿ ಇಂದಿನ ಪರಿಸ್ಥಿತಿಯಲ್ಲಿ ಜನಪ್ರಿಯತೆಯನ್ನು ಕಾದುಕೊಳ್ಳುವುದು ದುಸ್ತರವಾದೀತು ಎಂದೆನಿಸುತ್ತದೆ. ಪರೀಕ್ಷೆ ಫಲಿತಾಂಶಗಳನ್ನು ಉತ್ತಮಪಡಿಸಿಕೊಳ್ಳಲು ಪ್ರಾಮಾಣಿಕ ಪ್ರಯತ್ನ ನಡೆಸುವುದು ಎಲ್ಲ ಶಿಕ್ಷಣ ಸಂಸ್ಥೆಗಳ ಕರ್ತವ್ಯವೇ ಆಗಿದೆ ಎನ್ನುವುದನ್ನು ಯಾರೂ ಅಲ್ಲಗಳೆಯಲಾರರು, ನಿಜ. ಆದರೆ ಅನೇಕ ವೇಳೆ ಶಿಕ್ಷಕರು ಎಷ್ಟೇ ಪ್ರಾಮಾಣಿಕ ಪ್ರಯತ್ನ ಮಾಡಿದ್ದರೂ, ಇತರೆ ಕೆಲವಾರು ಕಾರಣಗಳಿಂದ ಪರೀಕ್ಷೆ ಫಲಿತಾಂಶಗಳನ್ನು ಕಡಿಮೆ ಯಾಗಿರಬಹುದಾದ ಸಂದರ್ಭಗಳು ಇದ್ದೇ ಇರುತ್ತವೆ. ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ತಾಳ್ಮೆಯಾಗಲಿ, ವಿವೇಕವಾಗಲಿ ಪಾಲಕರಿಗೆ ಅಥವಾ ಸಮುದಾಯಕ್ಕೆ ಇರುವುದು ಕಡಿಮೆ. ಆದುದರಿಂದ ನಿಜವಾದ ಶೈಕ್ಷಣಿಕ ವಾತಾವರಣವನ್ನು ಕಲ್ಪಿಸುವುದರಲ್ಲಿ ಒಂದು ಸಂಸ್ಥೆ ಎಷ್ಟೇ ಮಹತ್ವದ ಪಾತ್ರ ವಹಿಸುತ್ತಿರಲಿ, ಆ ಬಗ್ಗೆ ಸಮಾಜದ ಗಮನ ಹರಿಯದೆ ಕೇವಲ ಪರೀಕ್ಷೆ ಫಲಿತಾಂಶದ ಪ್ರತಿಶತ ಪರಿಣಾಮವೊಂದರಿಂದಲೇ ಅದರ ಸಾಮಾಜಿಕ ಪ್ರತಿಷ್ಠೆ ಹೆಚ್ಚುವ ಅಥವಾ ಕಡಿಮೆಯಾಗುವ ರೀತಿಯಲ್ಲಿ ಜನಾಭಿಪ್ರಾಯ ರೂಪುಗೊಳ್ಳುವುದನ್ನು ಕಾಣುತ್ತೇವೆ.

ಯಾವುದೊಂದು ಪರಿಸರದಲ್ಲಿ ಕೇವಲ ಪರೀಕ್ಷೆಗಳ ಫಲಿತಾಂಶದವೊಂದೇ ಅಲ್ಲಿಯ ಶಿಕ್ಷಣ ಸಂಸ್ಥೆಗಳ ಯೋಗ್ಯತೆಯನ್ನು ಅಳೆಯುವ ಏಕೈಕ ಮಾನದಂಡ ವಾಗಿರುತ್ತದೆಯೋ, ಅಂಥಲ್ಲಿ ಶಿಕ್ಷಣದ ನಿಜವಾದ ಉದ್ದೇಶಗಳು ಮೂಲೆಗುಂಪಾಗಿ, ಕ್ರಮೇಣ ಜೀವನದ ಮೌಲ್ಯಗಳು ಕುಸಿಯತೊಡಗುತ್ತವೆ. ಪರೀಕ್ಷೆ ಫಲಿತಾಂಶಗಳನ್ನು ಹೆಚ್ಚಿಸುವುದಕ್ಕೋಸ್ಕರ ಶಿಕ್ಷಕರು ಶಿಕ್ಷಣ ವಿರೋಧಿ ವಿಧಾನಗಳನ್ನು ಬಳಸತೊಡಗುತ್ತಾರೆ. ಸಂಭಾವ್ಯ ಪ್ರಶ್ನೆಗಳ ಉತ್ತರಗಳನ್ನು ಹೇಳಿ ಬರೆಯಿಸಿ ಬಾಯಿಪಾಠ ಮಾಡಿಸುವುದು, ಪರೀಕ್ಷಾ ಕೇಂದ್ರಗಳಲ್ಲಿ ತಮ್ಮ ತಮ್ಮ ವಿದ್ಯಾರ್ಥಿಗಳಿಗೆ ಉತ್ತರ ಬರೆಯಲು ಸಹಾಯಮಾಡುವುದು ಇತ್ಯಾದಿ ದುಷ್ಟ ಪದ್ಧತಿಗಳು ಜಾರಿಗೆ ಬರುತ್ತಿವೆ. ನೂರಕ್ಕೆ ನೂರು ಫಲಿತಾಂಶ ಪಡೆದಿದ್ದೇವೆ ಎಂದು ಜಂಭಕೊಚ್ಚಿಕೊಳ್ಳುವ ಶಿಕ್ಷಣ ಸಂಸ್ಥೆಗಳು ಆತ್ಮಾವಲೋಕನ ಮಾಡಿಕೊಳ್ಳಬೇಕು. ನೀವು ವಿವಿಧ ತಂತ್ರಗಳನ್ನು ಬಳಸಿ ಪರೀಕ್ಷೆ ಪರಿಣಾಮಗಳ ಪ್ರತಿಶತ ಪ್ರಮಾಣವನ್ನು ಹೆಚ್ಚಿಸುವುದರಲ್ಲಿಯೇ ನಿಮ್ಮ ವೃತ್ತಿಯ ಸಾರ್ಥಕ್ಯವನ್ನು ಕಾಣುತ್ತೀರಾ ? ಅಥವಾ ನಿಮಗೆ ಹೆಚ್ಚಿನ ಶೈಕ್ಷಣಿಕ ಹಾಗೂ ಸಾಮಾಜಿಕ ಹೊಣೆಗಾರಿಕೆ ಇದೆ ಎಂದು ಭಾವಿಸುತ್ತೀರಾ ? ಕಾಲಮಾನದ ನೀತಿಯನ್ನು ಅನುಸರಿಸಿಕೊಂಡು ತಪ್ಪು ಹೆಜ್ಜೆ ಇಡುವುದು ಸಮಾಜಘಾತುಕ ಕ್ರಮವಾಗುತ್ತದೆ. ಸಮಾಜದಲ್ಲಿ ಬೇರೂರಿರುವ ಭ್ರಷ್ಟಾಚಾರವೆಂಬ ವಿಷವೃಕ್ಷಕ್ಕೆ ನೀರೆರೆಯುವುದನ್ನು ಶಿಕ್ಷಣ ಸಂಸ್ಥೆಗಳು ಇನ್ನಾದರೂ ಬಿಡಬೇಕು. ಸಮಾಜದ ಶುದ್ಧೀಕರಣ ಕಾರ್ಯ ಆರಂಭವಾಗಬೇಕೆಂದಾದರೆ ಅದು ಶಾಲೆಗಳಿಂದಲೇ ಆರಂಭವಾಗಬೇಕಿದೆ. 'ಉತ್ತಮ ಶಾಲೆಗಳು ಉತ್ತಮ ಸಮಾಜವನ್ನು ನಿರ್ಮಾಣ ಮಾಡುತ್ತವೆ' ಎಂಬ ಧ್ಯೇಯವಾಕ್ಯದಲ್ಲಿ ನಮಗೆ ನಂಬುಗೆ ಬೇಕು.

ಪ್ರಜಾಪ್ರಭುತ್ವದಲ್ಲಿ ಶಿಕ್ಷಣದ ಸಮಸ್ಯೆ ಬಲು ಸಂಕೀರ್ಣವಾದ್ದು. ಅದರಲ್ಲಿಯೂ ಭಾರತದಂತಹ ಬಹುಭಾಷೆಯ, ಅಪಾರ ಜನಸಂಖ್ಯೆಯ ನಿರಕ್ಷರಿಗಳಿಂದೊಡ ಗೂಡಿದ, ಜಾತಿಮೂಲ ಸಮಾಜ ವ್ಯವಸ್ಥೆಯುಳ್ಳ, ಅತ್ಯಂತ ಹಿಂದುಳಿದ ದೇಶದಲ್ಲಿ ಸಾರ್ವತ್ರಿಕವಾಗಿ ಸಮಾನ ಅವಕಾಶವುಳ್ಳಂಥ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿ, ಯಶಸ್ವಿ ಯಾಗಿ ಅನುಷ್ಠಾನಗೊಳಿಸುವುದು ಬಲು ಕಷ್ಟದ ಕೆಲಸ. ಈ ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಒಂದು ಸಮಾಜವು ಇನ್ನೊಂದು ಸಮಾಜಕ್ಕಿಂತ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ನೂರಾರು ವರ್ಷ ಹಿಂದೆಮುಂದೆ ಇವೆ. ಕೆಲ ಸಮುದಾಯಗಳಂತೂ ತಲೆತಲಾಂತರಗಳಿಂದ ಉಳಿದೆಲ್ಲ ಸಮಾಜಗಳ ತುಳಿತಕ್ಕೆ ಸಿಲುಕಿ ಅಕ್ಷರಾಭ್ಯಾಸದಿಂದ ವಂಚಿತರಾಗಿ, ತಮ್ಮ ಜೀವಮಾನವನ್ನೆಲ್ಲ ಅನ್ಯರ ಸೇವೆಯಲ್ಲಿಯೇ ಕಾಲ ಕಳೆಯುತ್ತಿದ್ದ ದೀನ, ದಲಿತ, ಅಸ್ಪೃಶ್ಯ ವರ್ಗಕ್ಕೆ ಸೇರಿದವುಗಳಾಗಿವೆ.

ಈ ಅಸಮಾನತೆಯನ್ನು ಹೋಗಲಾಡಿಸಲು ಶಿಕ್ಷಣವು ಒಂದು ಮಹತ್ವದ ಸಾಧನವಾಗಬೇಕಾಗಿದೆ. ಆದರೆ ಮುಕ್ತ ಹಾಗೂ ಸ್ಪರ್ಧಾತ್ಮಕವಾದ ಪ್ರಜಾಪ್ರಭುತ್ವದ ಸಮಾಜ ವ್ಯವಸ್ಥೆಯಲ್ಲಿ ಹೆಚ್ಚು ಅನುಕೂಲ ಉಳ್ಳವರು ಮಾತ್ರ ಹೆಚ್ಚುಹೆಚ್ಚು ಮುಂದ ಹೋಗಲು ಅವಕಾಶವಾಗಿಬಿಟ್ಟಿದೆ. ನಮ್ಮ ಶಿಕ್ಷಣ ಧೋರಣೆಗಳು ಕೂಡ ಮುಂದುವರಿದ ಜನಾಂಗಗಳ ಬೇಡಿಕೆಯನ್ನು ಅನುಲಕ್ಷಿಸಿಯೇ ರೂಪುಗೊಳ್ಳುತ್ತಿವೆ. ಇವತ್ತಿನ ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯನ್ನು ಲಕ್ಷಿಸಿ ನಮ್ಮ ಶಿಕ್ಷಣ ಕ್ರಮದಲ್ಲಿ ಅತ್ಯಂತ ಉನ್ನತಮಟ್ಟದ ಪಠ್ಯಕ್ರಮವನ್ನು ಜಾರಿಗೆ ತರುವುದು ಅನಿವಾರ್ಯ ವೆನಿಸಿದೆ. ಇದು ಶೈಕ್ಷಣಿಕವಾಗಿ, ಆರ್ಥಿಕವಾಗಿ ಮುಂದುವರಿದ ಜನಾಂಗಗಳಿಗೆ ವರವಾದರೆ, ದುರ್ಬಲ ಹಾಗೂ ಹಿಂದುಳಿದ ಜನಾಂಗಗಳಿಗೆ ಶಾಪವಾಗಿದೆ. ಮೇಲಾಗಿ ಮುಂದುವರಿದ ಜನಾಂಗಗಳು ತಮ್ಮದೇ ಆದ ಖಾಸಗಿ ಶಿಕ್ಷಣ



ಸಂಸ್ಥೆಗಳನ್ನು ಹುಡುಕಿಕೊಂಡು ತಮ್ಮ ಮಕ್ಕಳಿಗೆ ವಿಶೇಷವಾದ ತರಬೇತಿ ನೀಡುವುದು ಸಾಧ್ಯವಾಗಿರುವಾಗ ದುರ್ಬಲ ಜನಾಂಗಗಳು ಸರಕಾರ ಒದಗಿಸಿದ ಸಾಮಾನ್ಯ ಶಿಕ್ಷಣ ಪಡೆದು ಮೇಲ್ವರ್ಗದವರೊಡನೆ ಪೈಪೋಟಿ ನಡೆಸುವುದು ದುಸ್ತರದ ಮಾತಾಗಿದೆ.

ಶಿಕ್ಷಣವನ್ನು ಸಾರ್ವತ್ರಿಕವಾಗಿ ಅರ್ಥಪೂರ್ಣಗೊಳಿಸಬೇಕಾದರೆ ಪ್ರಾಥಮಿಕ ಹಂತದಲ್ಲಿ ವಿಶೇಷ ಪಠ್ಯಭಾರವನ್ನು ಕಡಿಮೆಮಾಡಿ ಒಂದೇ ಒಂದು ಭಾಷೆ, ಹಾಗೂ ಗಣಿತ, ವಿಜ್ಞಾನ, ಸಮಾಜ ಪರಿಚಯದ ಕೆಲವು ಪ್ರಾರಂಭಿಕ ಪಾಠಗಳನ್ನು ಹೊರಗಿನ ಆಟ-ಚಟುವಟಿಕೆಗಳ ಮೂಲಕ ಚೆನ್ನಾಗಿ ಕಲಿಸುವ ವ್ಯವಸ್ಥೆಯಾಗಬೇಕು. ಪ್ರಾಥಮಿಕ ಪೂರ್ವ ಶಿಕ್ಷಣ ಕೂಡ ಸರಕಾರದ ಹತೋಟಿಯಲ್ಲಿ ಇರಬೇಕು. ರೈತ-ಕೂಲಿಕಾರನ ಮಗನೂ, ಮಂತ್ರಿಯ ಮಗನೂ ಒಂದೇ ರೀತಿಯ ಪ್ರಾಥಮಿಕ ಶಾಲೆಯಲ್ಲಿ ಕಲಿಯುವಂತಾಗಬೇಕು. ಪ್ರಾಥಮಿಕ ಮತ್ತು ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಹಣಕಾಸು ಒದಗಿಸಿ ಸರಕಾರಿ ಶಾಲೆಗಳಲ್ಲಿ ಉತ್ತಮ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಬೇಕು. ಈ ಹಂತದಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಅವಕಾಶ ಇರಕೂಡದು. ರಾಜ್ಯ ಸರಕಾರದ ಪಠ್ಯಕ್ರಮ, ಕೇಂದ್ರದ ರಾಷ್ಟ್ರೀಯ ಪಠ್ಯಕ್ರಮ ಇತ್ಯಾದಿ ಪ್ರತ್ಯೇಕತೆ ಇರಕೂಡದು. ಕೋಟಿಗಟ್ಟಲೆ ಹಣ ಸುರಿದು ಜಿಲ್ಲೆಗೊಂದರಂತೆ ನವೋದಯ ವಿದ್ಯಾಲಯಗಳನ್ನು ನಡೆಸುವ ಬದಲು ಆ ಹಣವನ್ನು ಜಿಲ್ಲೆಯ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳ ಸುಧಾರಣೆಗೆ ವಿನಿಯೋಗಿಸುವುದರಿಂದ ಹೆಚ್ಚಿನ ಪ್ರಯೋಜನವಾದೀತು.

ಶಿಕ್ಷಣವು ಮಗುವಿನ ದೈಹಿಕ, ಮಾನಸಿಕ, ನೈತಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ನೆರವಾಗಬೇಕು ಎನ್ನುವುದಾದರೆ ಪಠ್ಯಕ್ರಮದ ಜೊತೆಯಲ್ಲಿ ಮುಂದೆ ಅವನ ಅಥವಾ ಅವಳ ಉಪಜೀವನಕ್ಕಾಗಿ ನೆರವಾಗಬಲ್ಲಂಥ ಉದ್ಯೋಗವೊಂದರಲ್ಲಿ ಪರಿಣತಿಯನ್ನು ಪಡೆಯುವಂತಾಗಬೇಕು. ನಮ್ಮ ಇಡಿಯ ಶಿಕ್ಷಣ ವ್ಯವಸ್ಥೆಯೇ ನಾವು ಮುಂದೆ ಕಲ್ಪಿಸಲಿರುವ ವಿವಿಧ ಉದ್ಯೋಗ ಅವಕಾಶಗಳನ್ನು ಹೊಂದಿಕೊಂಡಿರಬೇಕು. ನಮ್ಮ ಉದ್ಯೋಗವ್ಯವಸ್ಥೆಯಲ್ಲಿ ದೊಡ್ಡ ದೋಷವಿದೆ. ಅದನ್ನು ತಿದ್ದದ ಹೊರತು ಶಿಕ್ಷಣ ಅರ್ಥಪೂರ್ಣವಾಗುವುದು ಸಾಧ್ಯವಿಲ್ಲ. ಉದ್ಯೋಗ ವಿಸ್ತರಣೆ, ಶಿಕ್ಷಣಯೋಜನೆ ಎರಡೂ ಜೊತೆಜೊತೆಯಲ್ಲಿ ಸಾಗಬೇಕು. ಉಪಜೀವನಕ್ಕೆ ಒದಗದ ಶಿಕ್ಷಣವು ಸಂಪೂರ್ಣ ಜೀವನ ಉದ್ದೇಶವನ್ನೆಂದೂ ಸಾಧಿಸಲಾರದು. ಶಾಲೆಯಲ್ಲಿ ಹೇಳಿಕೊಟ್ಟ ಸಂಸ್ಕೃತಿ, ನೀತಿಪಾಠಗಳು, ಆರೋಗ್ಯ ಸೂತ್ರಗಳು, ವೈಜ್ಞಾನಿಕ ಯುಗದ ಮಹತ್ವಾಕಾಂಕ್ಷೆಯ ಸಾಹಸೀ ಪ್ರೇರಣೆ, ಪ್ರವೃತ್ತಿಗಳು ವಿದ್ಯಾರ್ಥಿಯು ನಿಜಜೀವನದಲ್ಲಿ ಕಾಲಿಟ್ಟಾಗ ಮಣ್ಣುಪಾಲಾಗುತ್ತವೆ. ಎಳೆಯರಲ್ಲಿ ಹುದುಗಿದ ಆದರ್ಶ-ಕನಸುಗಳು ಭಗ್ನವಾಗಿ ಸಾಮಾಜಿಕ ಜೀವನದಲ್ಲಿ ನಿರಾಶೆ, ದುಃಖ, ವಂಚನೆ, ಮೋಸ ಮುಂತಾದುವು ತುಂಬುತ್ತವೆ. ಆದುದರಿಂದ ಶಿಕ್ಷಣದಲ್ಲಿ ಸಾರ್ವತ್ರಿಕ ಆಸಕ್ತಿ ಹುಟ್ಟಬೇಕಾದರೆ ಅದು ಪ್ರಯೋಜನಕಾರಿಯಾಗಿರಬೇಕು. ಮುಂದಿನ ಬದುಕು ನಡೆಸುವುದಕ್ಕೆ ಸಹಾಯಕಾರಿಯಾಗಬೇಕು. ಅಂದರೆ, ಶಿಕ್ಷಣ ಪಡೆದವರಿಗೆ ಉದ್ಯೋಗದ ಭರವಸೆ ದೊರೆಯಬೇಕು. ಉದ್ಯೋಗದ ಅವಕಾಶಗಳು ಹೆಚ್ಚಬೇಕು.

ನಮ್ಮ ಜನಸಂಖ್ಯೆಯ ಮುಕ್ಕಾಲು ಭಾಗ ಜನ ಕೇವಲ ಬೇಸಾಯವನ್ನು ಅವಲಂಬಿಸಿಯೇ ಬದುಕುತ್ತಿದ್ದಾರೆ. ಈ ಒತ್ತಡ ಕಡಿಮೆಯಾಗಬೇಕೆಂದಾದರೆ ಬೇಸಾಯಗಾರರ ಮಕ್ಕಳಿಗೆ ಬೇಸಾಯದ ವಿಷಯದಲ್ಲಿ ವೈಜ್ಞಾನಿಕ ತರಬೇತಿಯನ್ನು ಕೊಡುವುದಷ್ಟೇ ಅಲ್ಲದೆ ಅವರಿಗೆ ಬೇರೆ ಉದ್ಯೋಗಗಳಲ್ಲಿಯೂ ತರಬೇತಿಯನ್ನು ನೀಡಬೇಕಾಗುತ್ತದೆ. ಇಂಥ ತರಬೇತಿಯು ಪ್ರಯೋಜನ ಆಗಬೇಕೆಂದಾದರೆ ಬೇಸಾಯೇತರ ಕ್ಷೇತ್ರಗಳಲ್ಲಿ ಉದ್ಯೋಗ ಅವಕಾಶಗಳನ್ನು ಹೆಚ್ಚಿಸಬೇಕಾಗುತ್ತದೆ. ಆಡಳಿತ, ಆರೋಗ್ಯ,





ಶಿಕ್ಷಣ, ಸಂಶೋಧನೆ, ಸಾರಿಗೆ-ಸಂಪರ್ಕ, ರಕ್ಷಣೆ, ಸಾಹಿತ್ಯ, ಕಲೆ ಮೊದಲಾದ ಸೇವಾಕ್ಷೇತ್ರಗಳಲ್ಲಿ ದುಡಿಯುವವರ ಸಂಖ್ಯೆ ದಿನದಿನಕ್ಕೆ ಜಾಸ್ತಿಯಾಗುತ್ತಾ ಹೋಗಬೇಕಾದರೆ ಈ ಕ್ಷೇತ್ರವಿಸ್ತರಣೆಗೆ ಅನುಕೂಲವಾದ ಸಾಮಗ್ರಿಗಳ ಹಾಗೂ ಅನ್ನ, ಬಟ್ಟೆ, ವಸತಿ, ವಿದ್ಯುತ್ ಮತ್ತು ಇತರ ದಿನಬಳಕೆಯ ವಸ್ತುಗಳ ಉತ್ಪಾದನೆಗೆ ಬೇಕಾದ ತಾಂತ್ರಿಕ ಜ್ಞಾನ ಮತ್ತು ಕೌಶಲದ ಶಿಕ್ಷಣ ನಮ್ಮ ವಿದ್ಯಾರ್ಥಿಗಳಿಗೆ ಸಿಗುವುದರ ಜೊತೆಗೆ ಈ ಉತ್ಪಾದನಾ ಕ್ಷೇತ್ರಗಳಲ್ಲಿ ಹೆಚ್ಚುಹೆಚ್ಚು ಉದ್ಯೋಗಾವಕಾಶಗಳು ಒದಗುವಂತಾಗ ಬೇಕಾಗಿದೆ. ಆದರೆ ಎಲ್ಲ ಬಗೆಯ ಬಳಕೆ ಸಾಮಗ್ರಿಗಳ ಉತ್ಪಾದನಾ ಸಾಧನಗಳು ದೊಡ್ಡದೊಡ್ಡ ಜಮೀನುದಾರರ ಹಾಗೂ ಬಂಡವಾಳಗಾರರ ಹಿಡಿತದಲ್ಲಿ ಸಿಲುಕಿರುವುದರಿಂದ ಸಣ್ಣ ಉದ್ದಿಮೆಗಳ ಬೆಳವಣಿಗೆ ಇಲ್ಲದಂತಾಗಿ ಸಾಮಾನ್ಯ ಉದ್ಯೋಗಾವಕಾಶಗಳ ವಿಸ್ತರಣೆಯಾಗುತ್ತಿಲ್ಲ. ಅತಿ ಕಡಿಮೆ ಜನರನ್ನು ವಿರಾಮವಿಲ್ಲದೆ ದುಡಿಸಿಕೊಂಡು ಅತಿ ಹೆಚ್ಚು ಲಾಭ ಪಡೆಯುವುದೇ ಬಂಡವಾಳಗಾರರ ಉದ್ದೇಶ. ಈ ಬಂಡವಾಳಗಾರರು ಯಂತ್ರಗಳ ಸಹಾಯದಿಂದ ಅತ್ಯಂತ ಕಡಿಮೆ ಜನರ ಶ್ರಮದಿಂದ ರಾಶಿರಾಶಿ ವಸ್ತುಗಳನ್ನು ಉತ್ಪಾದಿಸಿ ಕೆಡವಬಲ್ಲರು. ಆದರೆ ಅವುಗಳನ್ನು ಕೊಂಡು ಕೊಳ್ಳುವಷ್ಟು ಗಳಿಕೆ ಬಹುಸಂಖ್ಯೆಯ ಜನರಿಗೆ ಇಲ್ಲದಿರುವುದರಿಂದ ಜನೋಪಯೋಗಿ ಸಾಮಾನ್ಯ ಉದ್ಯಮಗಳು ಬೆಳೆಯುವುದಿಲ್ಲ. ಬಹಳಷ್ಟು ಜನರಿಗೆ ವಸ್ತುಗಳು ಅವಶ್ಯವಿದ್ದರೂ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವ ಶಕ್ತಿ ಇಲ್ಲದಿರುವುದರಿಂದ ಸಾಮಾನ್ಯ ವಸ್ತುಗಳ ಬೇಡಿಕೆ ಕುಂಠಿತವಾಗುತ್ತದೆ. ಆದುದರಿಂದ ಸಮಾಜದ ಶ್ರೀಮಂತ ಮತ್ತು ಮಧ್ಯಮವರ್ಗದವರು ಖರೀದಿಸಬಹುದಾದಷ್ಟು ಸಾಮಗ್ರಿಗಳನ್ನು ಮಾತ್ರ ಉತ್ಪಾದಿಸಲು ಬಂಡವಾಳಗಾರ ಮುಂದಾಗುತ್ತಾನೆ. ಅಲ್ಲದೆ ಆ ಜನವರ್ಗದ ಭೋಗಜೀವನಕ್ಕೆ ಹೆಚ್ಚುಹೆಚ್ಚು ಒದಗಬಹುದಾದಂಥ ವಿಲಾಸಿ ವಸ್ತುಗಳನ್ನು ಉತ್ಪಾದಿಸಿ ತನ್ನ ಲಾಭಬಡುಕತನವನ್ನು ಮುಂದುವರಿಸುತ್ತಾನೆ. ಹಾಗಾಗಿ ಜನಸಾಮಾನ್ಯರಿಗೆ ಸುಲಭ ಬೆಲೆಯಲ್ಲಿ ಸಿಗಬಹುದಾದ ನಿತ್ಯಬಳಕೆಯ ವಸ್ತುಗಳ ವಿಸ್ತರಣೆ ಸ್ಥಗಿತಗೊಳ್ಳುತ್ತದೆ. ಇದರಿಂದ ಜನಸಾಮಾನ್ಯರಿಗೆ ಉದ್ಯೋಗಾವಕಾಶಗಳು ದೊರೆಯದೆ ಹೋಗಿ ಅವರ ಪಾಡಿಗೆ ಇಂದಿನ ಶಿಕ್ಷಣವು ಅರ್ಥಹೀನವೆನಿಸಿಬಿಟ್ಟಿದೆ. ಹೊಟ್ಟೆಪಾಡಿಗಾಗಿ ಕೂಲಿನಾಲಿ ಹುಡುಕಿಕೊಂಡು ಅಲೆಮಾರಿ ಜೀವನ ನಡೆಸುತ್ತಿರುವವರ ಸಂಖ್ಯೆ ಜಾಸ್ತಿಯಾಗಿ ಅವರ ಮಕ್ಕಳು ಶಾಲೆಗಳಿಂದ ದೂರ ಉಳಿಯುವಂತಾಗಿರುವುದು ಸಾಮಾನ್ಯವಾಗಿಬಿಟ್ಟಿದೆ. ಶಾಲೆಗಳಿಗೆ ಹೋಗಬೇಕಾದ ಮಕ್ಕಳು ಬಾಲಕಾರ್ಮಿಕರಾಗಿ ಬದುಕುವಂತಹ ದುಃಸ್ಥಿತಿ ಉಂಟಾಗಿದೆ.

ಆದುದರಿಂದ ಶಿಕ್ಷಣದಲ್ಲಿ ಅರ್ಥಪೂರ್ಣ ಬದಲಾವಣೆಗಳು ಆಗಬೇಕು ಎನ್ನುವುದಾದರೆ ಔದ್ಯೋಗಿಕ ವಿಕೇಂದ್ರೀಕರಣವನ್ನು ಇನ್ನಾದರೂ ಆರಂಭಿಸಬೇಕು. ಪ್ರತಿಯೊಂದು ಕುಟುಂಬಕ್ಕೂ ಕನಿಷ್ಠ ಪ್ರಮಾಣದಲ್ಲಾದರೂ ಭೂಮಿಯ ಒಡೆತನ ಲಭ್ಯವಾಗುವಂತಾಗಬೇಕು ಹಾಗೂ ಪ್ರಾಥಮಿಕ ಅವಶ್ಯಕತೆಗಳಾದ ಅನ್ನ, ನೀರು, ವಸತಿ, ಬಟ್ಟೆಗಳಿಗಾಗಿ ಜನ ಪರದಾಡದಂಥ ಸ್ಥಿತಿ ನಿರ್ಮಾಣವಾಗುವಂತೆ ಲಾಭಬಡುಕ ಉದ್ದಿಮೆದಾರರ ಮೇಲೆ ಸರಕಾರಗಳು ನಿಯಂತ್ರಣ ಸಾಧಿಸಬೇಕು.

ಎ. ಜಿ. ನಾಯಕ
ನಿವೃತ್ತ ಶಿಕ್ಷಕ, ಅಂಚೆ-ವಂದಿಗೆ. ೫೮೧ ೩೫೭, ಉತ್ತರ ಕನ್ನಡ ಜಿಲ್ಲೆ

# ಉತ್ಖನನ

**ಉತ್ಖನನದಲ್ಲಿ ಹೊರಬಂದ ಬೌದ್ಧ ವಿಹಾರದ ಗೋಡೆಗೆ ಒರಗಿಸಿ ಇಟ್ಟ, ಒಂಬತ್ತು ಹೆಡೆಯ ಮಹಾಸರ್ಪ ಚಿತ್ತಾಕರ್ಷಕವಾಗಿತ್ತು. ಬುದ್ಧನಿಗೂ ಈ ಸರ್ಪಕ್ಕೂ ಏನು ಸಂಬಂಧವೆಂದು ಯೋಚಿಸುತ್ತೇನೆ. ಅದು ಯಾರೋ ಹೇಳುತ್ತಿದ್ದರು : ಬುದ್ಧನ ಜಾತಕ ಕಥೆಗಳ ಪ್ರಕಾರ ಬುದ್ಧ ಕೂಡ ಒಂದು ಜನ್ಮದಲ್ಲಿ ಪಾಪ ಮಾಡಿದ್ದಕ್ಕೆ ಮಹಾಸರ್ಪದ ರೂಪದಲ್ಲಿ ಹುಟ್ಟಿದ. ಅಂತಿಂತಹ ಸರ್ಪವಲ್ಲ, ಭಾರಿ ದೊಡ್ಡ ಸರ್ಪ. ಆ ಜನ್ಮ ಕಳೆದು ಮರು ಜನ್ಮದಲ್ಲಿ ಬೋಧಿಸತ್ವನಾಗಿ ಬಂದ. ಮತ್ತೊಂದು ಜನ್ಮದಲ್ಲಿ ಸಿದ್ಧಾರ್ಥನಾಗಿ ಹುಟ್ಟಿದ. ಆಮೇಲೆ ಬುದ್ಧನಾಗಿ ನಿರ್ವಾಣ ಹೊಂದಿದ. ನಾನು ಒಂದೇ ಒಂದು ಜನ್ಮದಲ್ಲಿ ಪಾಪ ಪುಣ್ಯ ಕಳೆದು ಅಳದು ■ ನಿರ್ವಾಣಕ್ಕೆ ಸಲ್ಲಲು ಸಾಧ್ಯವಿಲ್ಲವೆ ?**

**ಜ್ಯೋತಿ ಬಿ. ಕುಲಕರ್ಣಿ**

ಸರಕಾರಕ್ಕೆ ಬಯ್ಯುವುದೆಂದರೆ ಆಕಾಶಕ್ಕೆ ಮುಖ ಮಾಡಿ ಉಗಿದಂತೆಯೇ ಸರಿ !! ತಿರುಗಿ ಬಂದು ಅದು ನಮ್ಮ ಮುಖಕ್ಕೆ ತಾನೆ ಬೀಳಬೇಕು. ಅಮೂರ್ತವಾದ, ಅಗೋಚರವಾದ ಈ ವ್ಯವಸ್ಥೆಯ ಮೇಲೆ ನನಗೆ ಭಾರಿ ಸಿಟ್ಟು ಬಂದಿತು. ಇಲ್ಲಿಯ ವ್ಯವಸ್ಥೆಯ ಅವಸ್ಥೆಯನ್ನು ಅರಿತಾಗ ಪ್ರಗತಿ ಹೆಳವನಂತಾಗಿದೆ ಎಂದು ಭಾಸವಾಗುತ್ತದೆ.

ಹಾರೈಸಿ, ಹಾರೈಸಿ ಈ ಕೆಲಸಕ್ಕೆ ಬಂದೆ. ಹಾರೈಸಿ, ಹಾರೈಸಿ ಮಣ್ಣು ಜೀವವಾಗುತ್ತದಂತೆ. ನನ್ನ ಈ ಜೀವ ಏನಾಗಲಿದೆಯೊ ಗೊತ್ತಿಲ್ಲ. ಭೂಗರ್ಭಶಾಸ್ತ್ರವನ್ನು ತೆಗೆದುಕೊಂಡು ಓದುವುದೆ ? ಇದು ಹೆಂಗಸರ ಕೆಲಸವಲ್ಲ ಎಂದು ಅಲಿಖಿತ ಶಾಸನ ಎಂಬಂತೆ ಸಾರುತ್ತಿದ್ದವರೇ ಓದಿ ಮುಗಿಸಿದಾಗ ಸೈ ಎಂದರು. ಕೆಲಸದ ಬೇಟೆಗೆ ನಿಂತಾಗ, ''ಯಾವುದಾದರೊಂದು ವಸ್ತು ಸಂಗ್ರಹಾಲಯಕ್ಕೆ ಹಾಕುತ್ತೇವೆ. ಅಲ್ಲಿಯ ಪ್ರಾಚ್ಯವಸ್ತುವಿನ ನಿಗಾವಹಿಸಿಕೊಂಡು ಹಾಯಾಗಿ ಇದ್ದುಬಿಡ್ರಿ'' – ಎಂದು ಅಧಿಕಾರಿಗಳು ಸರಳಮಾರ್ಗ ಹೇಳಿಕೊಟ್ಟರು. ಆ ಮಲೆತ ನೀರಿನಲ್ಲಿ ಮುಳುಗಿಕೊಂಡು ಕಪ್ಪೆಯಂತೆ ಬದುಕಿರಲು ಇಷ್ಟವಿಲ್ಲದೆ ಈ ಸಾಹಸಕ್ಕೆ ಒಲಿದು ಬಂದೆ.

ಆಕಾಶದ ಕೆಳಗೆ ಬಟಾಬಯಲಿನಲ್ಲಿ ಬಿಸಿಲು, ಗಾಳಿ, ಮಳೆಗಳಲ್ಲಿ ನಿತ್ಯ ಅಗೆಯುವ ಮಣ್ಣಿನಲ್ಲಿ ಏನಾದರೂ ಹೊಸತು ಸಿಕ್ಕೀತೇ ಎಂದು ಹುಡುಕುವ, ಉತ್ಕಟ ಆನಂದ ಕೊಡುವ ಕೆಲಸ ಉತ್ಖನನದ ಕೆಲಸ ಅಂದುಕೊಂಡಿದ್ದೆ. ಈಗಿರುವ ವಾಸ್ತವತೆ ಎಂದರೆ ಈ ಹಿಂದೆ ಉತ್ಖನನ ನಡೆದ ಸ್ಥಳದ ಪಕ್ಕದಲ್ಲಿ ಒಂದು ಸಣ್ಣ ಟಿನ್ ಶೆಡ್ ಹಾಕಿಕೊಟ್ಟಿದ್ದಾರೆ. ಇದು ನಮ್ಮ ಕ್ಷೇತ್ರ ಕಾರ್ಯಾಲಯ. ಸ್ಥಳ ಗುರುತು ಹಾಕಿ ದಶಕಗಳು ಕಳೆದ ಮೇಲೆ ಅಗೆತ ಪ್ರಾರಂಭವಾಗಿತ್ತಂತೆ. ಅಗೆತದಲ್ಲಿ ಅನೇಕ ಮೂರ್ತಿಗಳು; ಉಬ್ಬು ಶಿಲ್ಪಗಳು ದೊರೆತಿವೆ. ಶಾಸನಗಳು ಸಿಕ್ಕಿವೆ. ಪಕ್ಕದ ಹಳ್ಳಿ ಜನ ಹೇಳುವಂತೆ, ''ಹೊರತೆಗೆದಾಗ ಮೂರ್ತಿಗಳು ತುಂಬ ಚೆಲುವಾಗಿದ್ದವು. ಆಮೇಲೆ ಯಾರ ದೃಷ್ಟಿ ತಾಕಿತೊ ಅಮೂರ್ತಿಗಳು ಸೀಳಿ ರುಂಡ ಮುಂಡ ಬೇರೆಯಾಗಿ, ಕೆಲವು ರುಂಡಗಳು ಏನಾದವೋ ಗೊತ್ತಿಲ್ಲ. ಅವನ್ನು ಯಾರು ತೆಗೆದುಕೊಂಡು ಏನು ಮಾಡುವರು ? ಅವೇನು ಕೆಲಸಕ್ಕೆ ಬರುತ್ತವಾ ? ಬಿದ್ದು ಒಡೆದುಹೋದವು'' ಎಂದು ಹಳ್ಳಿಗರ ಅಂಬೋಣ.



ಈಗ ಇಲ್ಲಿ ಯಾವುದೇ ಅಗೆತದ ಕೆಲಸ ನಡೆಯುತ್ತಿಲ್ಲ. ಈ ಹಿಂದೆ ಅಲ್ಲಿ ಇಲ್ಲಿ ಸಸಿಗಳನ್ನು ನೆಟ್ಟಿದ್ದುದಕ್ಕೆ ಇಲ್ಲಿ ಸ್ವಲ್ಪ ನೆರಳೂ ಇದೆ. ಸುತ್ತಲಿನ ಸ್ಥಳವನ್ನು ಖರೀದಿಸಿ ಬೇಲಿ ಹಾಕಿದ್ದಾರೆ. ಇನ್ನೂ ಹೆಚ್ಚಿನ ಸ್ಥಳ ಖರೀದಿಸಿ ಉದ್ಯಾನ ಮಾಡುತ್ತಾರಂತೆ. ಪಕ್ಕದಲ್ಲಿ ಹರಿವ ಭೀಮೆಯಿಂದ ಪೈಪ್ ಹಾಕಿಸಿ ಕಾರಂಜಿಗಳನ್ನು ಮಾಡುತ್ತಾರಂತೆ. – ಹೀಗೆ ಅಂತೆಕಂತೆಗಳ ಪುರಾಣಗಳನ್ನು ಕೇಳಲು ಎರಡು ಕಿವಿ ಸಾಲುವುದಿಲ್ಲ. ಆದ್ರೆ ಈ ಗುಂಯ್‌ಗುಂಯ್ ಗುಡುವ ಜನರಿಲ್ಲದ ನೀರವ 'ಜಾಗ'ದಲ್ಲಿ ಬಂದು ಕೆಲಸ ಮಾಡುತ್ತ ವರ್ಷ ಕಳೆಯಿತು. ಬಿದ್ದ ಕಲ್ಲುಗಳೊಂದೂ ಅಲುಗಾಡಿಲ್ಲ. ಮೇಲಿನಿಂದ ಆರ್ಡರ್ ಬರದೆ ಏನೂ ಮಾಡುವಹಾಗಿಲ್ಲ. ಆಮೆಯ ಬೆನ್ನೇರಿ ಬರುವ ಆರ್ಡರ್‌ಗಳಿಗಾಗಿ ಈ ಟಿನ್ನಿನ ಶೆಡ್‌ನಲ್ಲಿ ಕಾಯುತ್ತಿದ್ದೇನೆ. ನಾನು ಬಂದಾಗಿನಿಂದ ಇಲ್ಲಿ ಕೆಲಸ 'ಟಫ್' ಆಗಿದೆ.

ಮಳೆಗಾಲದಲ್ಲಿ ಸೊಕ್ಕಿನಿಂದ ಉಕ್ಕಿ ಹರಿಯುತ್ತ ಸುತ್ತಲಿನ ಹಳ್ಳಿಗಳನ್ನೆ ಆಪೋಶಣೆ ತೆಗೆದುಕೊಳ್ಳುವ ಭೀಮೆ ಈ ಬಿರುಬೇಸಿಗೆಯಲ್ಲಿ ಬತ್ತಿ ಸೊರಗಿ ಹೊಂಡಗುಂಡಿಗಳಲ್ಲಿ ನಿಂತಿರುತ್ತಾಳೆ. ಮಳೆಗಾಲದಲ್ಲಿ ಆ ಕಡೆಯ ಹಳ್ಳಿಯವರು ಅತ್ತಲೆ ಇರುತ್ತಾರೆ, ಈ ಕಡೆಯ ಹಳ್ಳಿಯವರು ಇತ್ತಲೆ ಇರುತ್ತಾರೆ. ಎರಡು ದಂಡೆಗಳ ಮನೆತನಗಳಲ್ಲಿ ನೆಂಟಸ್ತಿಕೆಯಾಗಿದ್ದರೆ ಬೇಸಿಗೆಯಲ್ಲಿಯೇ ಭೇಟಿ. ಸುತ್ತಿ ಬಳಸಿ ನೂರಾರು ರೂಪಾಯಿ ಖರ್ಚು ಮಾಡಿ, ದುಡಿಮೆ ಬಿಟ್ಟು ಯಾರು ಯಾರನ್ನು ಭೇಟಿಯಾಗುತ್ತಾರೆ ? ಅದೂ ರಟ್ಟೆಯ ಮೇಲೆ ಬದುಕುವ ಬಡ ರೈತರು !

ನನಗಿಂತ ಕೆಲವು ವರ್ಷ ಮುಂಚೆಯೆ ಇಲ್ಲಿ ಕೆಲಸಕ್ಕೆ ಬಂದು ಸೇರಿದ ನನ್ನ ಮೇಲಧಿಕಾರಿ ರಾಜೇಶ ಎಂದರೆ ಸುತ್ತಲಿನ ಹಳ್ಳಿಪಳ್ಳಿಯ ಜನರಿಗೆಲ್ಲ ಪರಿಚಯ. ಈತ ಬಹಳ ಹುಮ್ಮಸ್ಸಿನ ಆಸಾಮಿ ಬೇರೆ. ಸುತ್ತಲಿನ ಸ್ಥಳಗಳಿಗೂ ಭೇಟಿ ಕೊಡುವ ಜವಾಬ್ದಾರಿ ಅವನಿಗೆ ಇರುವುದರಿಂದ ಕಛೇರಿಯ ಜೀಪ್ ಅವನ ಸುಪರ್ದಿನಲ್ಲಿದೆ. ಈ ನಿರ್ಜನ ಅರಣ್ಯದಲ್ಲಿ ಈ ರಾಜೇಶನಂತಹ ಮೇಲಧಿಕಾರಿ ಇಲ್ಲದೆ ಇದ್ರೆ ಇನ್ನೂ ಧೈರ್ಯದಿಂದ ಈ ಕೆಲಸ ಮಾಡುತ್ತಿದ್ದೇನೋ ? ''ಬಸ್ಸಿಗ್ಯಾಕ ಹೋಗತೀರಿ ? ನನ್ನ ಗಾಡಿ ಈಗ ವಾಪಸ್ ಬರತದ. ನಾ ಬರೋ ತನಕ ಫೀಲ್ಡನಾಗ ಇರ್ರಿ. ಫೋನ್ ಬಂದ್ರ... ಈ ಇಲ್ಲೇ... ಹೋಗ್ಯಾರಂತ ಹೇಳ್ರಿ. ಈಗ ಬರತೀನಿ'' ಎಂದು ಕೆಲಸ ವಹಿಸಿ ಹೋದವನು ಬರುವುದು ಎರಡು ಮೂರು ಗಂಟೆ ತಡವಾಗಿ, ಸಂಜೆಯ ಕೊನೆಯ ಬಸ್ಸು ಹೋದ ಮೇಲೆಯೆ. ಇವನ ಕೈಕೆಳಗೆ ನಾನು ಪ್ರೊಬೇಶನರಿಯಾಗಿ ದುಡಿದು ಪ್ರಾಣಸಂಕಟ ಅನುಭವಿಸುತ್ತಿದ್ದೇನೆ.

ಈ ಭೀಮೆಗೆ ಅಡ್ಡವಾಗಿ ಡ್ಯಾಮ್-ಕಂ-ಬ್ಯಾರೇಜ್ ಕಟ್ಟಲಾಗುತ್ತಿದೆ. ದೈತ್ಯಾಕಾರದಲ್ಲಿ ಅದು ತಲೆಯೆತ್ತಿ ನಿಂತಿದೆ.

ಬೇಸಿಗೆಯಲ್ಲಿ ನೀರೆಲ್ಲ ಬತ್ತಿ, ನದಿಯ ಒಳಮೈ ತೆಗೆದುಬಿದ್ದಿರುತ್ತದೆ. ಆಳೆತ್ತರ ಉದ್ದ ಅಗಲಗಳ ಅದ್ಭುತ ಆಕಾರದ ಬಂಡೆಗಳು ಬಿದ್ದುಕೊಂಡಿವೆ. ಇವುಗಳ ನಡುವಿನಿಂದ ಬಂಡಿದಾರಿಯೊಂದು ಹಾದುಹೋಗುತ್ತದೆ.

ದೂರ ಕಡಿಮೆಯಾಗಲಿ ಎಂದು ಈ ಕಲ್ಲುದಾರಿಯಲ್ಲಿ ನಮ್ಮ ಕಛೇರಿಯ ವಾಹನದ ಪ್ರಯಾಣ. ಈ ಕಲ್ಲುಗಳಿಗೆ ಬಾಯಿ ಇಲ್ಲವೆಂದು ನನ್ನ ಈ ಸಾಹಸದ ಪ್ರಯಾಣವನ್ನು ಈ ನಕ್ಷತ್ರ ತುಂಬಿದ ಬಾನಿನಡಿಯಲ್ಲಿ, ಕತ್ತಲ ರಾತ್ರಿಯಲ್ಲಿ ನೋಡಿದ್ದರೂ ಯಾರಿಗೂ ಹೇಳಿಲ್ಲ. ಇವಕ್ಕೆ ಜೀವವೇನಾದರೂ ಇದ್ದಿದ್ದರೆ, ಈ ಹೊಲಸು ಭಾವನೆಗಳ ಮನುಷ್ಯರಂತೆ ಕತ್ತಲ ರಾತ್ರಿಯಲ್ಲಿ ಮುಳ್ಳು ಬೇಲಿಗಳ ಪೊದೆಯಲ್ಲಿ, ಮೂಕ ಪಶುಗಳು ಮಾತ್ರ ತಿರುಗುವ ಜಾಗಗಳಿಂದ, ಅದು ಗಂಡಸು ಮೇಲಧಿಕಾರಿಯೊಂದಿಗೆ ಒಂಟಿಯಾಗಿ ಗಾಡಿಯಲ್ಲಿ ತಿರುಗುವ ತೆವಲು... ಎಂದು ಏನೇನು ಬೊಗಳುತ್ತಿದ್ದವೊ ಯಾರಿಗೆ ಗೊತ್ತು! ದೇವರೆ, ಈ ಕಲ್ಲುಗಳಿಗೆ ಹೃದಯವಿದೆ. ಇವು ನನ್ನ ಪ್ರಾಮಾಣಿಕತೆಗೆ ಸಾಕ್ಷಿಯಾಗಿವೆ. ಇವುಗಳನ್ನು ನೀನು ಮಾತ್ರ ನುಡಿಸಿ ಕೇಳಬಲ್ಲೆ! ಆದರೆ ಆ ಧೂರ್ತ, ''ಮೇಡಂ, ವ್ಯಾಕ್ಸ್ ಗೊಂಬೆ ಹಾಗೆ ಕೂತೇ ಇರ್ತೀರಿ. ಒಂದು ಮಾತೂ ಆಡೋದಿಲ್ಲ'' ಎನ್ನಬೇಕೆ? ಎಲಾ ಇವನ! ಈ ಅಧಿಕಾರಿ ಎಂಬ ವರಾಹ! ನದಿಯ ಬ್ಯಾರೇಜ್ ದಾಟಲಿ ಉತ್ತರಿಸುತ್ತೇನೆ. ತನ್ನನ್ನು ತಾನು ಯಕ್ಷ, ಗಂಧರ್ವ, ಕಿನ್ನರ, ಕಿಂಪುರುಷ... ಹೀಗೆ ಏನೆಂದುಕೊಳ್ಳುತ್ತಾನೊ? ಯಾವಾಗಲೂ ದ್ವಂದ್ವಾರ್ಥ ಭಾಸವಾಗುವ ಭಾಷೆಯಲ್ಲಿ ಮಾತನಾಡುತ್ತಾನೆ. ಅದು ಮನಸ್ಸಿಗೆ ರೇಜಿಗೆ ಹುಟ್ಟಿಸುತ್ತದೆ. ''ನಾವು ಮನುಷ್ಯ-ಮನುಷ್ಯರು, ಸಹಸಿಬ್ಬಂದಿಗಳು ಎಂಬ ಯಾವ ಭೇದ-ಭಾವಗಳಿಲ್ಲದೆ, ಪ್ರೀತಿಯಿಂದ, ಪ್ರೇಮದಿಂದ ಒಬ್ಬರಿಗೊಬ್ಬರು ಹತ್ತಿರ ಇರಬೇಕು...'' ಎಂಥ ಮೂರ್ಖತನ! ''ಸರ್, ಯಾವ ಪ್ರೀತಿ? ಯಾವ ಸೀಮೆಯ ಪ್ರೀತಿ? ಇಲ್ಲಿ ಪ್ರೀತಿ ಮಾಡಲು, ಪ್ರೀತಿ ಕೊಡಲು, ಪ್ರೀತಿ ಬೇಡಲು, ಪ್ರೀತಿ ಸಿಕ್ಕಲು... ಪ್ರೀತಿ ಸುರಿಸಲು ಬಂದಿದ್ದೀರಾ ಅಥವಾ ಕೆಲಸಕ್ಕಾ? ನೀವು ಹೀಗೆ ಮಾತಾಡಿದ್ದೀರಿ, ಅದೂ ಕೆಲಸದ ಸಂದರ್ಭದಲ್ಲಿ! ಇದಕ್ಕೆ ಈ ಚಾಲಕನೆ ಸಾಕ್ಷಿ. ನಾನು ಈ ರೋಡಿಗೆ ಇಳಿದು, ಇಲ್ಲಿಂದ ಸಿಕ್ಕಿದ ವಾಹನದಲ್ಲಿ ಹೋಗ್ತೀನಿ'' ಎಂದು ಹರಿಹಾಯ್ದಾಗ, ಜೀಪಿನಿಂದ ಹಾರಿಕೊಳ್ಳಲು ನೋಡಿದಾಗ, ''ಓ! ನೀವು ತಪ್ಪು ತಿಳಿದಿರುವಿರಿ. ನಾನು ಹೇಳಿದ್ದು ಹಾಗಲ್ಲಮ್ಮ! ಅರವಿಂದರು, ಟ್ಯಾಗೋರರು; ಅಷ್ಟೇಕೆ ನಮ್ಮ ಕುವೆಂಪು ಅವರು ಹೇಳುವಂತೆ ನಾವೆಲ್ಲ ಮನುಷ್ಯರು, ನಾವೆಲ್ಲರೂ ಒಂದೇ ಜಾತಿ ಎಂದು ವಿಶ್ವಮಾನವತೆಯ ಬಗ್ಗೆ ಹೇಳಿದ್ದು; ವಿಶ್ವಪ್ರೇಮದ ಬಗ್ಗೆ ಹೇಳಿದ್ದು'', ಓ! ಇವರ ವಿಶ್ವಪ್ರೇಮದ ಬುದ್ಧಿಗೆ ಭಲೇ ಎನ್ನಲೇಬೇಕು – ಹೀಗೆ ಸ್ಪಷ್ಟೀಕರಣ ಪ್ರಾರಂಭವಾಗುತ್ತದೆ. ನಾನು 'ರೌಬ್' ತೋರಿಸಿದ್ದಕ್ಕೆ ಬೆದರಿಕೊಂಡಿದ್ದ; ಸರಕಾರಿ ಕೆಲಸದ ಮೇಲಿನ ಮೋಹಕ್ಕೆ. ಹೀಗೆ ಮಾತನಾಡುವ ವನಿಗೆ ಆಗಲೇ ಇಬ್ಬರು ಹೆಂಡಿರಂತೆ! ನಾನು ಎಲ್ಲ ಮಾಹಿತಿ ಸಂಗ್ರಹಿಸಿದ್ದೆ.

ಈ ಗಂಡಸರ ಪ್ರೀತಿಯ ಪದದ ಚೌಕಟ್ಟಿನ ಕಾಮಕ್ಕೆ ಅದೆಷ್ಟು ಹೆಂಗಸರು ಹಾತೊರೆದು ಹೋಗಿ ಬಲಿಯಾಗುತ್ತಾರೆ? ನನ್ನ ಕರ್ಮಕ್ಕೆ! ನನ್ನ ತಂದೆತಾಯಿಗಳು ಪರಸ್ಪರ ಪ್ರೀತಿಸಿಕೊಂಡದ್ದು ಸಾಕಾಗಲಿಲ್ಲವೆ? ಪ್ರೀತಿ ಯಾವತ್ತಾದರೂ ಅನೈತಿಕವಾಗಿರುತ್ತದೆಯೆ? ನ್ಯಾಯಬಾಹಿರವಾಗಿರುತ್ತದೆಯೆ? ಮತ್ತೆ ನಾನೇಕೆ ನ್ಯಾಯಬಾಹಿರ ಅನೈತಿಕ ಸಂಬಂಧದ ಮಗುವಾಗಿ...? ಈಗ ಮತ್ತೆ ಈ ವ್ಯಕ್ತಿ ಇತಿಹಾಸವನ್ನು ಪುನರಾವರ್ತಿಸಲು ಪ್ರಯತ್ನಿಸುತ್ತಿರುವನೆ? ಅನಾಥಾಶ್ರಮದ ಅಡಿಗೆಯವಳು ಕಾಂಪೌಂಡಿನ ಹೊರಗೆ ಮಳೆಗಾಲದ ಆ ತುಂತುರು ಮಳೆಯಲ್ಲಿಯೂ ಹೆಣ್ಣು ಮಗಳೊಬ್ಬಳು ಎದೆಗವಚಿಕೊಂಡು ತಂದ ಮಗುವನ್ನು ಮಲಗಿಸುವುದನ್ನು ನೋಡುವಾಗ ಅವಳ ಚಹರೆ ಗುರುತು ಸಿಕ್ಕಿ, ಏಯ್ ಎನ್ನುವಷ್ಟರಲ್ಲಿ ಆಟೋರಿಕ್ಷಾ ಹತ್ತಿ ಕಣ್ಮೊರೆಸಿಕೊಳ್ಳುತ್ತಾ ಮರೆಯಾದ ಆ ಗತ ಇತಿಹಾಸ ಕಾಲಗರ್ಭದಲ್ಲಿ ಹೂತು ಹೋಗಿರುವುದರಿಂದ ಅದನ್ನು ಕೆದಕಿ ತೆಗೆದು ಅರಿತುಕೊಳ್ಳುವುದು ಬಹಳ ಅವಶ್ಯವಾಗಿದೆ. ಅದನ್ನು ಅರಿತುಕೊಳ್ಳುವವರಿಗೆ ಉಂಡ ಊಟಕ್ಕೆ ಯಾವ ರುಚಿ ಎಂದು ಹೇಳಲಿಕ್ಕಾಗುತ್ತಿಲ್ಲ. ಗಾಢ ನಿದ್ದೆಯಲ್ಲಿದ್ದಾಗ ಕತ್ತಲ ಕಾಡಿನಲ್ಲಿ ಏಕಾಂಗಿಯಾಗಿ ನಿಂತ ಅನುಭವ; ಯಾವುದೋ ಒಂದು ಹಿಂಸ್ರ ಪಶು ಬಂದು, ಬಹುಶಃ ಕರಡಿ ಇರಬೇಕು, ಎರಡು ಕಾಲುಗಳ ಮೇಲೆ ನಿಂತು ಇನ್ನೆರಡರಿಂದ ತಬ್ಬಿ ಪರಚಿ, ಅಬ್ಬಾ, ಎಚ್ಚರ! ನಾನು ಎಲ್ಲರಂತಲ್ಲ, ನಾನು ಯಾಕೆ ಇಷ್ಟು ಏಕಾಂಗಿಯಾಗಿ ಹುಟ್ಟಿ ಹೇಗೋ ಪರಿಸ್ಥಿತಿಗೆ ಅನುಗುಣವಾಗಿ ಅವರವರ ಅನುಕಂಪಕ್ಕೆ ಒಳಗಾಗಿ ತುಸು ತುಸುವೆ ಬೆಳೆಯುತ್ತಿದ್ದೇನೆ. ನನ್ನನ್ನು ಬೆಳೆಸುವುದು ತಮ್ಮ ಕರ್ತವ್ಯ, ಜವಾಬ್ದಾರಿ ಎಂದು ಯಾರೂ ಭಾವಿಸಿ ಬೆಳೆಸಿದವರಲ್ಲ. ನಾನೇ ಅಡ್ಡಾದಿಡ್ಡಿಯಾಗಿ ಬೆಳೆದು ಬಿಟ್ಟೆ. ಬಿತ್ತು ಬಿತ್ತಿ ಬೆಳೆವಾಗ ಅದರೊಂದಿಗೆ ಕಸವೂ ಬೆಳೆದರೆ ರೈತ ತಾನೆ ಏನು ಮಾಡಿಯಾನು? ಕೆಲವು ಕಾಲ ಸಹಿಸಿ ಸಮಯ ಬಂದಾಗ ಚಿವುಟಿಹಾಕುತ್ತಾನೆ. ಚಿವುಟಲು ನಿಂತವರ ಕೈಗೆ ಸಿಗದೆ ಬೆಳೆದೆ! ಈಗ ನನ್ನವರನ್ನು ಹುಡುಕಲೇಬೇಕು. ಎಲ್ಲಿದ್ದಾರೆ...? ಹೀಗೆ ನಿಮಗೆ ನನ್ನ ಕಥೆ ಹೇಳುತ್ತ ಹೇಳುತ್ತ ನನ್ನವರನ್ನು ಹುಡುಕುವ ಕನಸಿಗಿಳಿಯುತ್ತೇನೆ.

* * *

ಅಂದು ಚಾರುಲತಾ ಮೇಡಂ ನಮ್ಮ ಅನಾಥಾಲಯದ ಯಾವುದೊ ಮೀಟಿಂಗಿಗೆ ಬಂದಿದ್ದರಂತೆ. ಇನ್ನೂ ಮೀಟಿಂಗ್ ಶುರುವಾಗಲಾರದುದಕ್ಕೆ ಮೇಲಿನ ಕೋಣೆಯ ಮುಚ್ಚಿದ ಕಿಟಕಿಯ ಒಡೆದ ಗಾಜಿನ ಕಿಟಕಿಯ ಮೂಲಕ ಇಣಿಕಿದರು. ಕಿಟಕಿಯಲ್ಲಿ ಹಾಗೆಯೆ ಅನಿಮಿಷ ಕಣ್ಣುಗಳಿಂದ ನೋಡುತ್ತಲೇ ಇದ್ದರು. ಬೆಟ್ಟದ ನೆಲ್ಲಿಕಾಯಿಯನ್ನು ನೆನಪಿಸುವ ಹರೆಯದ ಹುಡುಗಿಯರು ಅಂಗಳದ ನಲ್ಲಿಯ ಕೆಳಗಡೆ ಮೈ ಒಡ್ಡಿಕೊಂಡು ಸ್ನಾನ ಮಾಡುತ್ತಲಿದ್ದರು. ಅರೆಬೆತ್ತಲೆಯ ಆ ದೃಶ್ಯ ಅವರನ್ನು ಕೆಂಗೆಡಿಸಿತ್ತು. ಹರಿದ ಲಂಗ ಜಾಕೆಟ್‌ಗಳನ್ನು ಅಡ್ಡ ಹಚ್ಚಿಕೊಂಡೆ ಹುಡುಗಿಯರು ಸ್ನಾನಕ್ಕಿಳಿಯುತ್ತಿದ್ದರು. ಪಾಪ ಅವರದೇನು ತಪ್ಪು? ಅದೇನು ತಿಂದರೂ ಯೌವನ ಮಾತ್ರ ಬರುವ ಕಾಲಕ್ಕೆ ಒತ್ತರಿಸಿ ಬಂದಿರುತ್ತದೆ, ಋತುಮಾನಕ್ಕೆ ತಕ್ಕಂತೆ ಹೂಬನ ಕುಸುಮಿಸುವಂತೆ; ಈ ಸೊಬಗನ್ನು ಬೇಕಾದವರು ಬೇಕಾದ ಹಾಗೆ ನೋಡುವ ಚಪಲಕ್ಕೆ ಅನಾಥಾಲಯದಲ್ಲಿ ಸ್ನಾನದ ಮನೆಗಳನ್ನು ಕಟ್ಟದೆಯೆ ಬಿಟ್ಟಿದ್ದರು. ಅಲ್ಲಿ ಸ್ನಾನ ಮಾಡುವ ಹುಡುಗಿಯರಿಗೆ ಸುತ್ತಲೂ ದೆವ್ವದಂತಹ ಗೋಡೆಗಳಿರುವುದು ಗೊತ್ತಿತ್ತು. ಅಲ್ಲಿ ಕಛೇರಿಯ ಕೆಲವು ಕಿಟಕಿಗಳಿದ್ದು ಅವು ಸದಾ ಮುಚ್ಚಿರುತ್ತವೆಂದು ಊಹಿಸಿದ ಕಾರಣ ಹುಡುಗಿಯರು ಮೈಮರೆತು ಸ್ನಾನ ಮಾಡುತ್ತಿದ್ದರು.

ಬೇಸಿಗೆಯ ಸೆಕೆ, ಆಹಾ ನೀರು! ಎನ್ನುವ ಕಾಲದ ಚೆಲ್ಲಾಟ ನಡೆದಿತ್ತು. ಬೇಸಿಗೆಯಲ್ಲಿ ಕಛೇರಿಯ ಸಮಯ ಬೆಳಿಗಿನದು. ಚಾರುಲತಾ ಮೌನವಾಗಿ ಅಧಿಕಾರಿಯ ಎದುರಿಗೆ ಹೋಗಿ ಕುಳಿತರು. ''ಮೇಡಂ ಸುಮ್ಮನೆ ಕುಳಿತಿದ್ದೀರ. ಏನೊ ಯೋಚನೆ ಮಾಡುತ್ತಿರುವ ಹಾಗಿದೆ.'' ಆಕೆ ಮನದಲ್ಲಿಯೆ ಹಲ್ಲು ಕಡಿಯುತ್ತ, ಮುಖದಲ್ಲಿ ಯಾವ ಬದಲಾವಣೆಯನ್ನೂ ತೋರದೆ ಸೌಮ್ಯವಾಗಿ ಪ್ರಶ್ನಿಸಿದರು, ''ಈ ಹುಡುಗಿಯರ ಅನಾಥಾಶ್ರಮದಲ್ಲಿ ಸ್ನಾನದ ಮನೆಗಳು ಯಾಕಿಲ್ಲ?'' ''ಓ... ಅದಾ ನಾವು ಇಂಜನಿಯರ್‌ಗೆ ಈ ಕೆಲಸ ಕೊಟ್ಟಿದ್ದೀವಿ. ಆತ ಹಣ ತೆಗೆದುಕೊಂಡು ಅತ್ತಲೇ ಹೋಗಿದ್ದಾನರಿ. ಇನ್ನೂ ಕೆಲಸ ಪೂರ್ಣ ಮಾಡಿಕೊಟ್ಟಿಲ್ಲ''. ''ನೀವು ಕೆಲಸ ನೋಡದೆ ಮೊದಲೆ ಹೇಗೆ ಹಣ ಪಾವತಿಸಿದ್ದೀರಿ? ನನ್ನ ಪ್ರಶ್ನೆ ನಿಮ್ಮ ಆಡಳಿತದ ಬಗ್ಗೆ ಖಂಡಿತ ಇಲ್ಲ. ಕನಿಷ್ಠ ಪಕ್ಷ ಹೆಣ್ಣುಮಕ್ಕಳಿಗೆ ಸ್ನಾನಕ್ಕೆ ಮುಚ್ಚುಮರೆ ಬೇಕಲ್ಲವೆ? ನಿಮ್ಮ ಈ ಮೀಟಿಂಗ್ ಹಾಲಿನಲ್ಲಿ ಹೆಚ್ಚು ಜನ ಹೊರಗಿನವರು ಕಾಲಿರಿಸಲಿಕ್ಕಿಲ್ಲ ಎಂಬ ಧೈರ್ಯ ನಮಗಿದೆ. ಪಾಪ! ನೀವೊಬ್ಬರೆ ಹೆಚ್ಚಾಗಿ... ಬಹಳ ಅಂದ್ರೆ ನಿಮ್ಮ ಸೆಕ್ರೆಟರಿ, ಜವಾನರು... ಮಾತ್ರ ಬಂದು ಹೋಗಬಹುದು!'' – ಹೀಗೆ ಆರೋಪ ಸೂಕ್ಷ್ಮವಾಗಿ, ಎದುರಿಗಿದ್ದ ವ್ಯಕ್ತಿಯ ಮಿದುಳನ್ನು ಸ್ಕ್ರೂಡ್ರೈವರಿನಂತೆ ಕೊರೆಯತೊಡಗಿತು. ''ನಾವು ಈ ಕೋಣೆಯನ್ನು ಪ್ರತಿದಿನ ತೆಗೆಯುವುದಿಲ್ಲ. ಇದು ಒಂದು ರೀತಿ ನಮ್ಮ ಗೋಡೌನ! ಬೇರೆ ಜಾಗ ಇಲ್ಲದ ಕಾರಣ ಇಲ್ಲಿ



ಮೀಟಿಂಗ್ ಇಟ್ಟಿದ್ದೀನಿ. ಇವತ್ತು ಉಳಿದ ಎಲ್ಲ ಸದಸ್ಯರು ಬರದಿದ್ದ ಕಾರಣ ಮೀಟಿಂಗ್ ಪೋಸ್ಟ್‌ಪೋನ್ ಆಗಬಹುದು.'' ''ಹೌದೆ, ಮೀಟಿಂಗ್ ಪೋಸ್ಟ್‌ಪೋನ್ ಆದ್ರೆ ನಾನು ಅನಾಥಾಲಯದ ಮಕ್ಕಳ ಹತ್ತಿರ ಮಾತನಾಡಬೇಕು.'' ''ಧಾರಾಳವಾಗಿ ಮಾತಾಡ್ರಿ. ಇಲ್ಲಿಗೆ ಅವರಿಗೆ ಬರಲು ಹೇಳಿಕಳಿಸುತ್ತೇನೆ.'' ''ಬೇಡ, ನಾನೇ ಅಲ್ಲಿಗೆ ಹೋಗುತ್ತೇನೆ'' ಎಂದು ಹೇಳಿ ಚಾರುಲತಾ ಮೇಡಂ ಅಂದು ನಮ್ಮ ಹತ್ತಿರ ಮಾತನಾಡಲು ಬಂದಿದ್ದರು.

ಅಲ್ಲಿರುವವರೆಲ್ಲ ಹದಿನಾಲ್ಕು, ಹದಿನಾರು ವರ್ಷದ ಹುಡುಗಿಯರೆ. ''ಏನು ಮಾಡುತ್ತೀರಿ ನೀವೆಲ್ಲ?'' ಎಂದು ಅವರು ಕೇಳಿದಾಗ ಕೆಲವರು ಓದು ತಲೆಗೆ ಹತ್ತದೆ ನಿಲಯದಲ್ಲಿಯೆ ಇದ್ದು ಹೊಲಿಗೆ ಕಲಿಯುವವರು ತಮ್ಮ ಹೊಲಿಗೆ ಕಸೂತಿ ಬಗ್ಗೆ ಹೇಳಿಕೊಂಡರು. ಆದ್ರೆ ಹೊಲಿಗೆ ಮಷೀನುಗಳು ಅಲ್ಲಿ ನಾಮಮಾತ್ರಕ್ಕೆ ಇರುವುದು ಅವರ ಗಮನಕ್ಕೆ ಬರದೆ ಇರಲಿಲ್ಲ. ಹುಡುಗಿಯರಿಗೆ ಭಯಂಕರ ಭಯ, ಹಿಂಜರಿಕೆ ಇತ್ತು. ಅಲ್ಲಿಯ ಅವ್ಯವಸ್ಥೆ, ಹಾಗೂ ಸಿಬ್ಬಂದಿಗಳೂ ಎಳೆ ಸವತೆಕಾಯಿಯಂತಹ ಆ ಬಾಲಕಿಯರನ್ನು ತಮ್ಮ ಚೇಷ್ಟೆ, ಚಟಗಳಿಂದ ಹಿಂಸಿಸುವ ವಿಷಯವನ್ನು ಬಿಚ್ಚಿ ಹೇಳಿದರೆ, ತಿನ್ನುವ ಎರಡು ಹೊತ್ತಿನ ಊಟಕ್ಕೂ ಎಲ್ಲಿ ಸಂಚಕಾರ ಬರುವುದೋ ಎಂದು ಹುಡುಗಿಯರು ಶಿಕ್ಷಣ ಮುಂದುವರಿಸಿದ್ದರ ಬಗ್ಗೆಯೇ ಹೇಳಿಕೊಂಡರು. ''ಮುಂದೇನು ಮಾಡುತ್ತೀರಿ?'' ಎಂಬ ಪ್ರಶ್ನೆಯಿಂದ ಎಲ್ಲರ ಮುಖದಲ್ಲೂ ಭವಿಷ್ಯದ ಚಿಂತೆ ಮನೆಮಾಡಿತ್ತು. ವರ್ತಮಾನ ಎಲ್ಲರನ್ನು ಕಂಗೆಡಿಸಿದ್ದು ಸ್ಪಷ್ಟವಾಗಿತ್ತು. ಕೆಲಸ ಕೊಡಿಸಿ ಎಂದು ಕೇಳಿದರು. ''ಯಾವುದೇ ಕೆಲಸ ಕೊಟ್ಟರೂ ಮಾಡುತ್ತೇವೆ'' ಎಂಬ ಸಾಮೂಹಿಕ ಬೇಡಿಕೆ ಬೇರೆ, ಅದಕ್ಕೆ ನೋಡೋಣ ಎಂಬ ಪ್ರತಿಕ್ರಿಯೆ ಬಂದಿತಷ್ಟೆ.

ಆಗ ನಾನು, ''ಬಿ.ಎ. ಕೊನೆಯ ವರ್ಷದಲ್ಲಿದ್ದೆ. ಮೊದಲಿನಿಂದಲೂ ಒಳ್ಳೆ ಫಸ್ಟ್‌ಕ್ಲಾಸ್ ಮಾರ್ಕ್ಸ್ ಇದೆ. ಮುಂದೆ ಓದಬೇಕು. ಇಲ್ಲಿಂದ ಹೊರಗೆ ಬರಲು ನಮಗೆ ಯಾರಾದರೂ ಪೋಷಕರು ಸಿಗಬೇಕು. ಅದಕ್ಕೆ ನೀವು ಸಹಿ ಹಾಕಿದರೆ ನಾನು ಸ್ಕಾಲರ್‌ಶಿಪ್ ಪಡೆದು ಓದುತ್ತೇನೆ'' ಎಂದು ಬಿಡೆ ಬಿಟ್ಟು ಬೇಡಿಕೊಂಡೆ. ''ಫಲಿತಾಂಶ ಬಂದ ಮೇಲೆ ಬಂದು ಭೇಟಿಯಾಗು'' ಎಂದು ನಿರುದ್ವಿಗ್ನರಾಗಿ ಯಾವ ಏರಿಳಿತವಿಲ್ಲದೆ ಹೇಳಿದ್ದರಷ್ಟೆ; ಆ ಮಾತು ನನ್ನ ಮನದಲ್ಲಿ ಮನೆಮಾಡಿತು. ನನ್ನ ಬದುಕಿನ ಭರವಸೆಯ ಬೀಜಕ್ಕೆ ಅವರ ಒಂದು ಮಾತಿನ ಸಿಂಚನವಾದುದರಿಂದ ನಾನು ನನ್ನ ಕನಸನ್ನು ನನಸಾಗಿಸಲು ಒದತೊಡಗಿದೆ. ಅವರ ಟೆಲಿಫೋನ್ ನಂಬರ್‌ಅನ್ನು ದಿನಕ್ಕೊಂದು ಸಲ ದೇವರನಾಮವನ್ನು ಜಪಿಸುವಂತೆ ಜಪಿಸುತ್ತಿದ್ದೆ.

ಫಲಿತಾಂಶ ಬಂದ ದಿವಸ ಅವರಿಗೆ ಫೋನಾಯಿಸಿ; ಅನುಮತಿ ಪಡೆದು ಅವರ ಮನೆಗೆ ಹೋಗಿ ದೈನ್ಯದಿಂದ ನಿಂತುಕೊಂಡೆ. ಅವರ ಮನೆ, ಕಛೇರಿ ಒಂದೆಡೆ ಇತ್ತು. ಚಾರುಲತಾ ಮೇಡಂ ನನ್ನನ್ನು ಬಹಳ ಪ್ರೀತಿಯಿಂದ ಬರಮಾಡಿಕೊಂಡರು ಎಂದು ಹೇಳಿದರೆ ಕೇಳುತ್ತಿರುವ ನಿಮಗೂ ಹೊಟ್ಟೆಉರಿ ಆಗಬಹುದು. ಅನಾಥಾಲಯಕ್ಕೆ ತಾವೇ ಸ್ವತಃ ಹೋಗಿ ನನಗೆ ಇನ್ನು ಮುಂದೆ ಗಾರ್ಡಿಯನ್ ಆಗುವುದಾಗಿ ತಿಳಿಸಿ ಅನಾಥಾಲಯದಿಂದ ಬಿಡುಗಡೆ ಗೊಳಿಸಿದರು. ನನ್ನನ್ನು ಭೂಗರ್ಭಶಾಸ್ತ್ರದ ಅಧ್ಯಯನಕ್ಕೆ

ಸರ್ಕಾರದಿಂದ
ಭ್ರಷ್ಟರ ರಕ್ಷಣೆ
- ಆರೋಪ.




ಪಾಪ... ಅವರಲ್ಲಿ ಹೇಳಿ ಯಾವ ಪ್ರಯೋಜನವಿಲ್ಲ, ಅವರಿಗೆ ಸರ್ಕಾರದ ರಕ್ಷಣೆಯೊಂದೇ ಮುಖ್ಯವಾಗಿದೆಯಂತೆ...?!

ವಿಶ್ವವಿದ್ಯಾನಿಲಯಕ್ಕೆ ಸೇರಿಸಿದ್ದಲ್ಲದೆ ವಿಶ್ವವಿದ್ಯಾಲಯದ ವಸತಿ ನಿಲಯದ ಎಲ್ಲ ಖರ್ಚುವೆಚ್ಚವನ್ನು ತಾವೆ ಭರಿಸುತ್ತಿದ್ದರು. ಈಗಲಂತೂ ಇರುವ ಊರಿನಲ್ಲಿಯೆ ಕೆಲಸ ಸಿಕ್ಕು ನಾನು ಚಾರುಲತಾರ ಮನೆಯ ಅವಿಭಾಜ್ಯ ಅಂಗವಾಗಿಬಿಟ್ಟಿರುವೆ. ಈಗ ನನ್ನ ಜೀವನದ ರೀತಿ ಬಹಳ ಬದಲಾಗಿದೆ ಎಂದು ಬೇರೆ ಹೇಳಬೇಕೆ? ನಾನೊಂದು ಮದುವೆ ಮಾಡಿಕೊಂಡರೆ 'ಕಟ್ಟಿಯ ಕಲ್ಲು ಕಟ್ಟಿಗೆ ಕುಳಿತಂತೆ' ಎಂದು ಅವರ ಭಾವನೆ. ನಾನು ನನ್ನನ್ನು ಅನಾಥಗೊಳಿಸಿದ ಸಂಬಂಧಗಳ ಉತ್ಖನನಕ್ಕೆ ತೊಡಗಿದ್ದೇನೆಂದು ನಿಮಗೆ ಈ ಮೊದಲೆ ತಿಳಿಸಿರುವೆ. ನನ್ನ ಹಳೆಯ ಕಥೆ ಹೇಳುತ್ತ ಮೈಮರೆತೆ. ಪಾರ್ಥಸಾರಥಿಯ ಆಗಮನದ ಬಗ್ಗೆ ಇನ್ನೂ ಹೇಳಲಿಕ್ಕಿದೆ. ಅವನ ಬಗ್ಗೆ ಹೇಳುವಾಗ ಬರಿ ಸಾರಥಿ ಎಂದು ಇನ್ನು ಮುಂದೆ ಅವನನ್ನು ಕರೆಯುತ್ತೇನೆ. ''ನಾನು ಪಾರ್ಥಸಾರಥಿಯಲ್ಲ ಕೇವಲ ಸಾರಥಿ. ಏಕೆಂದರೆ, ಯಾವ ಪಾರ್ಥನಿಗೂ ಸಾರಥಿಯಾದವನಲ್ಲ ನಾನು, ಆದ್ದರಿಂದ, ''ಸರಳವಾಗಿ, ಸಣ್ಣದಾಗಿ ನೀವು ಫ್ರೆಂಡ್ಸ್ ಎಲ್ಲ ಸಾರಥಿ ಅನ್ನಿ ಸಾಕು'' ಅನ್ನುತ್ತಿದ್ದ. ಈತ ತಾನು ಮೇಲಧಿಕಾರಿಯಾಗಿ ಬಂದಾಗ ರಾಜೇಶನಿಗೆ ಈತನ ಬರುವಿಕೆ ಇರಸುಮುರಸಾಯಿತು. ಹೌದು ಸಾರಥಿ ಭಾರಿ ಶಿಸ್ತಿನ ವ್ಯಕ್ತಿ. ತುಂಬ ಗಂಭೀರ ಸ್ವಭಾವದವನು. ಅನುಭವಿ ಕೂಡ. ಮಹಾಬಲಿಪುರದ ಸಾಗರದ ದಡದಲ್ಲಿರುವ ದೇವಾಲಯದ ಮುಂದೆ ಇನ್ನೂ ಹಲವು ಕಲ್ಲಿನ ದೇವಾಲಯಗಳು ಇರಬೇಕೆಂದೂ ಅವು ಕಾಲಕ್ರಮೇಣ ಮುಳುಗಿರಬೇಕೆಂದು ಪ್ರತಿಪಾದಿಸಿದವರಲ್ಲಿ ಇವನೂ ಒಬ್ಬನಂತೆ. ಜ್ಞಾನ, ಅನುಭವಗಳೊಂದಿಗೆ, ಮೌನವಾಗಿರುವ ಸಾರಥಿಯ ಒಳಗೇನಿದೆ ಎಂದು ಅರ್ಥವೇ ಆಗುವುದಿಲ್ಲ. ತಲೆ ಒಡೆದುಕೊಂಡರೂ ಅರ್ಥ ವಾಗದ ಶಿಲಾಶಾಸನದಂತೆ ಪಿಳಿಪಿಳಿ ಕಣ್ಣುಗಳಿಂದಲೇ ಇದು ಮೂರ್ತಿ ಅಲ್ಲ, ಮನುಷ್ಯ ಎಂದು ತಿಳಿದುಕೊಳ್ಳಬೇಕು.

ಇವನು ವರ್ಗವಾಗಿ ಬಂದು ಕೆಲಸಕ್ಕೆ ಹಾಜರಾದ ದಿನ ಖುದ್ದಾಗಿದ್ದು ಹೋಗಿ ಪರಿಚಯಿಸಿಕೊಂಡು ಕುಳಿತೆ. ''ನೈಸ್ ಟು ಸೀ ಯು'' ಎಂದಷ್ಟೆ ಹೇಳಿ, ತಣ್ಣಗೆ ಫೋನಿನಲ್ಲಿ ತನ್ನಷ್ಟಕ್ಕೆ ತಾನು ಯಾರೊಂದಿಗೊ ಮಾತನಾಡುತ್ತಿದ್ದ. ದೀರ್ಘ ಉಪೇಕ್ಷೆಯಿಂದೆಂಬಂತೆ. ''ಸರಿ, ಕೆಲಸದ ಬಗ್ಗೆ ತಿಳಿಸಿ'' ಎಂದೆ. ''ನನಗಿಂತ ನೀವೆ ಇಲ್ಲಿ ಹಳಬರು. ಈ ಸ್ಥಳಕ್ಕೆ ನಾನು ಹೊಸಬ. ನೀವೇ ಮಾರ್ಗದರ್ಶಿ'' ಎಂದ, ನೆಟ್ಟ ದೃಷ್ಟಿಯಿಂದ ಕಣ್ಣಲ್ಲಿ ಕಣ್ಣ ನೆಟ್ಟು ನನ್ನ ಆತ್ಮವಿಶ್ವಾಸವನ್ನು ಪರೀಕ್ಷಿಸಲೆಂಬಂತೆ. ನಕ್ಕು ಹೊರಬಂದೆ. ನಾನು ಅವನ ಕೆಳಗಿನ ಕೆಲಸಗಾರ್ತಿ; ಹೋಗಿ ಪರಿಚಯಿಸಿಕೊಳ್ಳುವ ಕರ್ತವ್ಯ ಪಾಲಿಸಿದೆ, ಅಷ್ಟೆ. ಮಾರ್ಗದರ್ಶನದ ಮಾತು ದೂರ ಉಳಿಯಿತು. ಮಾತಿಗೂ ಬರವಿದ್ದ ವ್ಯಕ್ತಿ. ಇವನನ್ನೂ ದಿನೇದಿನೇ ಸ್ವಲ್ಪಸ್ವಲ್ಪ ಉತ್ಖನನ ಮಾಡಿ ತಿಳಿಯಬೇಕು. ಇವನು ನೇರವಾಗಿ ಅರ್ಥವಾಗುವ ಮನುಷ್ಯನಲ್ಲ ಎಂದುಕೊಂಡೆ. ಆತನೂ ಮಾತಿಗೆ ಮಹತ್ವ ನೀಡದ ಉತ್ಖನನದ ಮೇಲೆ ಚರಿತ್ರೆ, ಚಾರಿತ್ರ್ಯ ಅರಿವ, ಬರೆವ ನುರಿತ ವ್ಯಕ್ತಿ ಎಂದುಕೊಂಡೆ.

ವೈಶಾಖದ ಶಾಖ. ಕೇಳಬೇಕೆ! ಹಗಲೆಲ್ಲ ಬಿರುಬಿಸಿಲು, ಸಂಜೆಯಾಗುತ್ತಲಿತ್ತು. ಒಮ್ಮೆಲೆ ಅಡ್ಡಮಳೆ ಪ್ರಾರಂಭ. ಟಪಟಪ ಎಂದು ನಮ್ಮ ಆ ಟಿನ್ನಿನ ಕಛೇರಿಯ ತಾರಸಿಯ ಮೇಲೆ ಹನಿಗಳು ಬೀಳತೊಡಗಿದವು. ಸಂಜೆಯ ಸಮಯ ಸಾರಥಿ ಪಕ್ಕದ ಕೋಣೆಯಲ್ಲಿ ಯಾವುದೂ ವರದಿ ಗಮನಿಸುತ್ತಿದ್ದರು. ದೂರದ ಬಸ್ಸು ನನ್ನನ್ನು ಶಬ್ದ ಮಾಡಿ ಕರೆಯಿತು. ಆದರೆ ಈ ಹೊಸ ಅಧಿ ಕಾರಿ ಆಮೇಲೆ ಬೇಗ ಹೋದುದಕ್ಕೆ ಕೆಂಡ ಕಾರಿದರೆ? ಮೇಲಧಿಕಾರಿಯ ಇರುವಿಕೆಯನ್ನು ಗೌರವಿಸಲೇ ಬೇಕಾಗಿತ್ತು. ಸರ್ಕೀಟಿಗೆ ಹೋದ ಜೀಪು ಬ್ಯಾರೇಜಿನ ದಾರಿಯಲ್ಲಿ ಹಾಯ್ದು ಕುಂಟುತ್ತಾ ಬರುವುದು ಯಾವಾಗ ಎಂದು ಯೋಚನೆ ಮಾಡುತ್ತ, ಕೆಲಸವಿಲ್ಲದ್ದಕ್ಕೆ ಕುರ್ಚಿಯಲ್ಲಿ ಸುಸ್ತುಬಡಿದು ಕುಳಿತಿದ್ದೆ. ಅಪ್ಪ-ಅಮ್ಮ ಯಾಕೆ ಅನಾಥಾಶ್ರಮಕ್ಕೆ ದೂಡಿದರು? ಅಥವಾ ಬೀದಿಗೆ? ನಾನು ಅವರಿಗೆ ಏಕೆ ಬೇಡವಾದೆ? ಅವರು ಹೇಗಿದ್ದರು? ನಾನು ಅವರ ಮದುವೆಯ ಹೊರಗಿನ ಸಂಬಂಧದಿಂದ ಹುಟ್ಟಿ ಬಂದ ಪಿಂಡವೆ? ಅದೇ ಧ್ಯಾನದಲ್ಲಿ ನಿದ್ದೆಯ ಗುಂಗು... ಮಂಪರು.

ಉತ್ಖನನದಲ್ಲಿ ಹೊರಬಂದ ಬೌದ್ಧ ವಿಹಾರದ ಗೋಡೆಗೆ ಒರಗಿಸಿ ಇಟ್ಟ, ಒಂಬತ್ತು ಹೆಡೆಯ ಮಹಾಸರ್ಪ ಚಿತ್ತಾಕರ್ಷಕವಾಗಿತ್ತು. ಬುದ್ಧನಿಗೂ ಈ ಸರ್ಪಕ್ಕೂ ಏನು ಸಂಬಂಧವೆಂದು ಯೋಚಿಸುತ್ತೇನೆ. ಅದು ಯಾರೋ ಹೇಳುತ್ತಿದ್ದರು: ಬುದ್ಧನ ಜಾತಕ ಕಥೆಗಳ ಪ್ರಕಾರ ಬುದ್ಧ ಕೂಡ ಒಂದು ಜನ್ಮದಲ್ಲಿ ಪಾಪ ಮಾಡಿದ್ದಕ್ಕೆ ಮಹಾಸರ್ಪದ ರೂಪದಲ್ಲಿ ಹುಟ್ಟಿದ. ಅಂತಿಂತಹ ಸರ್ಪವಲ್ಲ, ಭಾರಿ ದೊಡ್ಡ ಸರ್ಪ. ಆ ಜನ್ಮ ಕಳೆದು ಮರುಜನ್ಮದಲ್ಲಿ ಬೋಧಿಸತ್ವನಾಗಿ ಬಂದ. ಮತ್ತೊಂದು ಜನ್ಮದಲ್ಲಿ ಸಿದ್ಧಾರ್ಥನಾಗಿ ಹುಟ್ಟಿದ. ಆಮೇಲೆ ಬುದ್ಧನಾಗಿ ನಿರ್ವಾಣ ಹೊಂದಿದ. ನಾನು ಒಂದೆ ಒಂದು ಜನ್ಮದಲ್ಲಿ ಪಾಪ ಪುಣ್ಯ ಕಳೆದು ಅಳಿದು ಆ ನಿರ್ವಾಣಕ್ಕೆ ಸಲ್ಲಲು ಸಾಧ್ಯವಿಲ್ಲವೆ? ಇಲ್ಲ! ಆ ಒಂಬತ್ತು ಹೆಡೆಯ ಸರ್ಪ ಇತ್ತಲೆ ಬರುತ್ತಿದೆ. ಪಾಪ ಮಾಡುವುದೊಂದೆ ತಪ್ಪಲ್ಲ, ಪಾಪ ಮಾಡಲು ಬಿಡುವುದು ಮಹಾ ಪಾಪ. ಮೌನ ಸಮ್ಮತಿ ಇತ್ತಂತೆ. ಅಯ್ಯೋ ಬುದ್ಧನೆ, ನಿನ್ನ ಮುಂದಿನ ಲೀಲೆಗಳನ್ನು ತೋರಿಸು ಈ ಮಹಾ ಘಟ ಸರ್ಪ ನಿನ್ನ ತಲೆಗೆ ಸಂಚಕಾರ...

''ಅಯ್ಯೋ... ಅಯ್ಯೋ ಮೇಡಂ, ಹಾವು! ಹಾವು

ತಣ್ಣಗೆ ಕುಳಿತಿದ್ದೀರಲ್ಲ?'' ''ಎಲ್ಲಿ? ಎಲ್ಲಿ?'' ''...ನಿಮ್ಮ ಕಾಲ ಹತ್ತಿರ.'' ಮಳೆಬಿದ್ದು ಭೂಮಿಯು ಉಗಿ ಏಳುತ್ತಿದೆ. ''ಹೊಡೆಯಿರಿ.'' ''ಬೇಡ, ಏನಾದ್ರೂ ಮಾಡಿದ್ರೆ ಮಾತ್ರ ಹೊಡಿಬೇಕು''? ...ಹೀಗೆ ಕೋಲಾಹಲ ನಡೆದಿತ್ತು.

ಪಕ್ಕದ ಕೋಣೆಯಿಂದ ಸಾರಥಿ ಎದ್ದು ಬಂದು, ''ಓ ಮೇಡಂ, ಕಾಲು ಮೇಲೇ ಇರಲಿ. ನಿಮ್ಮ ಕುರ್ಚಿ ಕೆಳಗೆ ಹಾವು. ನೀವು ಹಾಗೆಯೆ ಕುಳಿತಿದ್ದು ಸಹಕರಿಸಿದ್ರೆ ಸಾಕು. ನಾವು ಹೊಡಿತೇವೆ'' ಎಂದ. ''ಗೋಧಿ ಬಣ್ಣದ ಹಾವು. ವಿಷದ ಹಾವು'' ಎಂದು ಒಂದು ಸ್ವರದ ಉದ್ಗಾರ. ''ಅಯ್ಯೋ ಸಾಯಿಸಬ್ಯಾಡ್ರಿ'' ಎಂಬ ಮತ್ತೊಂದು ಸ್ವರದ ಬೇಡಿಕೆ. ''ಈಗ ಬಿಟ್ರ ಮತ್ತ ಬರತದ'' ಎಂಬ ಉತ್ತರದೊಂದಿಗೆ ಇಂತಹ ಗದ್ದಲದ ನಡುವೆಯೂ ಹಾವಿನ ತಲೆಗೆ ಏಟು ಬಿತ್ತು.

''ಮೇಡಂ, ನೀವು ಗಮನಿಸದೇ ಹಾಗೆ ಕುಳಿತಿದ್ರಿ.'' ''ಇಲ್ಲ ಸರ್, ನನ್ನ ಮನಸ್ಸಿನಲ್ಲೆಲ್ಲೋ ಒಂದು ಕಡೆ ಹಾವಿನ ಸುಳಿವು, ಗೊತ್ತಾಗುತ್ತಿತ್ತು'' ...''ಆದ್ರೆ... ಕುರ್ಚಿ ಮ್ಯಾಗ ಕುಂತಲ್ಲೆ ಸ್ವಲ್ಪ ಜೊಂಪು ಹತ್ತಿತ್ರಿ ಅವರಿಗಿ'' ಎಂದು ನಡುವೆಯೆ ಜವಾನ ಬಂದು ಮಾತು ಸೇರಿಸಿದ. ''ಅಬ್ಬಾ ಕತ್ತಲಾಯ್ತು ಜೀಪ್ ಎಲ್ಲಿ''? ''ನಿತ್ಯದಂತೆ ಈಗ ಬರಬಹುದು,'' ಜವಾನನ ಉತ್ತರ. ಅಷ್ಟರಲ್ಲಿ ಜೀಪ್ ಬಂದಿತು. ಹಾವಿನ ಪೋಸ್ಟ್ ಮಾರ್ಟಂನಲ್ಲಿ ಭಾಗವಹಿಸಿದವರೆಲ್ಲ ಕೈಕಾಲು ತೊಳೆದು ಬಹಳ ದಣಿದವರಂತೆ, ಕಾಕಾನ ಗುಡಿಸಲಿನ ಹೋಟೆಲಿನಲ್ಲಿ ಹಾಲಿಲ್ಲದಿದ್ದರೂ ಕರಿ ಚಹಾ ಮಾಡಿಸಿ ಕುಡಿದು ನನಗೆ ಮತ್ತೂ ಮನೆ ಸೇರಲು ತಡಮಾಡಿದರು.

ಜೀಪ್ ಹೊರಟಿತು. ಬ್ಯಾರೇಜಿನ ದೊಡ್ಡ ದೊಡ್ಡ ದೈತ್ಯ ಕಂಬಗಳನ್ನು ಆ ಕತ್ತಲಿನಲ್ಲಿ ನೋಡಲು ಆಹಾ!... ಏನು ಖುಷಿ! ನಿಗೂಢವಾಗಿ ದೈತ್ಯವಾಗಿ ಅವು ಆ ಕತ್ತಲಿನಲ್ಲಿ ಪ್ರತ್ಯಕ್ಷವಾಗುತ್ತಿದ್ದವು. ಇನ್ನೊಂದು ಕಡೆಗೆ ನಿರ್ಲಕ್ಷ್ಯದಿಂದ ಬಿದ್ದುಕೊಂಡಿದ್ದ ಬಂಡೆಗಲ್ಲುಗಳು. ನಮ್ಮ ಪಾರ್ಲಿಮೆಂಟ್ ಒಂದು ಕಡೆ, ನಿಶ್ಚೇಷ್ಟಿತ ಪ್ರಜೆಗಳು ಇನ್ನೊಂದು ಕಡೆ ಎನ್ನುವಂತೆ ಆ ಇಕ್ಕೆಲದ ದೃಶ್ಯವಿತ್ತು. ಈ ದಾರಿಯ ಬಗ್ಗೆ ನನ್ನ ನಿತ್ಯದ ಕಲ್ಪನೆಗಳು ಬೇರೆಬೇರೆಯಾಗಿರುತ್ತವೆ.

ಮಧ್ಯಾಹ್ನ ಸಾರಥಿ ಉತ್ಖನನ ನಡೆವ ಸ್ಥಳದಿಂದ ಕೂಗಳತೆಯಲ್ಲಿರುವ ಸನ್ನತಿ ದೇವಸ್ಥಾನಕ್ಕೆ ಊಟಕ್ಕೆ ಹೋಗಿ ಬಂದ ಹಾಗಿತ್ತು. ಅವನ ಹಣೆಯ ಮೇಲಿನ ನಾಮದಿಂದ ಆತ ಅಲ್ಲಿ ಪೊಗದಸ್ತಾಗಿ ಉಂಡುಬಂದಿದ್ದರಲ್ಲಿ ಸಂದೇಹವೇ ಇರಲಿಲ್ಲ. ಅದಕ್ಕೆ ಹೊಟ್ಟೆ ಈಗಲೂ ಭಾರವಿರಬೇಕು. ತೂಕಡಿಸಲು ಪ್ರಾರಂಭಿಸಿದ್ದಾನೆ. ಈತ ಎಲ್ಲಿದ್ದರೂ ನಿರ್ಲಿಪ್ತನಾಗಿ ಆರಾಮಾಗಿ ಇರಬಲ್ಲ. ಈ ರಾಜೇಶನಿಗೆ ಉಣ್ಣಲಿಕ್ಕೆ ಸುತ್ತಲಿನ ಹತ್ತು ಹಲವು ಹಳ್ಳಿಗಳ ಪರಿಚಯವಿದೆ. ನನ್ನ ಹೊಟ್ಟೆ ಹಸಿದು ಹಪ್ಪಳ ಆಗಿದೆ. ಉಂಡುವರೇನು ಬಲ್ಲರು ಹಸಿದವರ ಬೇನೆಯನ್ನು?

ಈ ಸ್ಥಳ ಹಿಂದೆ ಬಹುದೊಡ್ಡ ವಿದ್ಯಾಕೇಂದ್ರವಾಗಿತ್ತಂತೆ. ಪಕ್ಕದಲ್ಲಿ ಅಗ್ರಹಾರವೂ ಬೆಳೆದಿತ್ತಂತೆ. ಹಿಂದೆ ಹತ್ತು ಹಲವು ಜಾತಿಗಳಿರುವ ಊರು ಹಾಗೂ ಅಗ್ರಹಾರ ಒಂದಾಗಿ ಬಾಳಿದ್ದರೆ ಈ ಬೌದ್ಧ ವಿಹಾರ ಯಾಕೆ ಪ್ರತ್ಯೇಕವಾಗಿ ಎದುರಿಗೆ ಹುಟ್ಟಿಕೊಳ್ಳುತ್ತಿತ್ತು? ಇವೆರಡು ಭಿನ್ನವಾಗಿ ಇದ್ದದ್ದು ಇತಿಹಾಸ. ಈಗ ಅವು ಒಂದಾಗಲು ಹವಣಿಸುವಂತಿದೆ. ವಿಹಾರದಲ್ಲಿ ಕಂಡುಬಂದ ಅವಶೇಷಗಳಿಗೆ ದೇವಸ್ಥಾನದಲ್ಲಿ ಆಶ್ರಯ ನೀಡಲಾಗಿದೆ.

ಜೀಪ್ ಗಕ್ಕನೆ ನಿಂತಿತು. ಕಾದ ನೆಲದಲ್ಲಿ 'ಫಟ್' ಎಂದು ಟಾಯರ್ ನೆಲಕ್ಕೆ ನೆಗ್ಗಿ ಒಳಗಿದ್ದ ಸಾರಥಿಗೆ ಎಚ್ಚರವಾಯ್ತು. ನಾನು ಕೆಳಗಿಳಿದು ಒಂದು ಬಂಡೆಗೆ ಆತುನಿಂತಿದ್ದೆ. ರಾಜೇಶ ಡ್ರೈವರ್‌ನೊಂದಿಗೆ ಸ್ಟೆಪ್ನಿ ತೆಗೆದು ಕೂಡಿಸಲು ಸಹಾಯ ಮಾಡುತ್ತಿದ್ದ. ಹೀಗೆ ಸಂದರ್ಭಕ್ಕನುಸಾರವಾಗಿ, ಜರೂರಿಲ್ಲದಿದ್ದರೂ ಎಲ್ಲ ಕೆಲಸಕ್ಕೂ ತಾನೂ ಕೈ ಹಚ್ಚಿ ಭಾಳ ಖಟಿಪಿಟಿ ಮನುಷ್ಯ ಅಂತ ಹೊಗಳಿಸಿಕೊಳ್ಳುವ ಉಮೇದುವಾರಿಕೆ. ಈ ವಿವರಣೆ ಕೇಳಿ

## ಸಾದರ ಸ್ವೀಕಾರ

**ನಾವು ಮತ್ತು ನಮ್ಮ ಪರಿಸರ ಭಾಗ - ೨**
ಸಂ. : ಡಾ|| ಸಬಿಹಾ ಭೂಮೀಗೌಡ
ಪುಟ: ೧೩೬ ಬೆಲೆ: ರೂ. ೬೦
**ವಿಜಯಾ ಬ್ಯಾಂಕ್ ಪರಿಸರ ಅಧ್ಯಯನ ಪೀಠ,** ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ - ೫೭೪ ೧೯೯

**ಮರುಚಿಂತನ** (ವೈಚಾರಿಕ ಲೇಖನಗಳ ಸಂಕಲನ)
ಡಾ|| ಬಸವರಾಜ ಸಬರದ
ಪುಟ: ೧೨೦ ಬೆಲೆ: ರೂ. ೯೦

**ವ್ಯವಹಾರಿಕ ಕನ್ನಡ** (ರಸಾಯನ ವಿಜ್ಞಾನ)
ಡಾ|| ಬಸವರಾಜ ಸಬರದ
ಪುಟ: ೯೪ ಬೆಲೆ: ರೂ. ೬೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪಲ್ಲವಿ ಪ್ರಕಾಶನ,** ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

**ಶ್ರೀಧರ ಪ್ರಶಸ್ತಿ** ಸಂ. : ರಾಜಶೇಖರ ಹೆಬ್ಬಾರ, ಡಾ|| ಶ್ರೀಪಾದ ಭಟ್
ಪುಟ: ೧೨೮ ಬೆಲೆ: ರೂ. ೫೫
**ಬಂಡಾಯ ಪ್ರಕಾಶನ,** 'ಸಹಯಾನ', ಕೆರೆಕೋಣ, ಅರೆಅಂಗಡಿ, ಹೊನ್ನಾವರ, ಉ.ಕ. - ೫೮೧ ೪೩೦

**ಮಹಾಬೆಳಕು** (ಬುದ್ಧ ಕಥನ) ಪ್ರೊ|| ಎಚ್. ಲಿಂಗಪ್ಪ
ಪುಟ: ೧೪೦ ಬೆಲೆ: ರೂ. ೧೨೦
**ರಶ್ಮಿ ಪ್ರಕಾಶನ,** ೬ನೇ ಮುಖ್ಯರಸ್ತೆ, ೨ನೇ ಹಂತ, ಐಯುಡಿಪಿ ಬಡಾವಣೆ, ಪೂನಾ - ಬೆಂಗಳೂರು ರಸ್ತೆ, ಚಿತ್ರದುರ್ಗ - ೫೭೭ ೫೦೧

**ನಿರ್ವಚನ** ಡಾ|| ಎಂ. ಎಂ. ಕಲಬುರ್ಗಿ
ಪುಟ: ೫೬ ಬೆಲೆ: ರೂ. ೨೫
**ಬಸವ ಧರ್ಮ ಪ್ರಸಾರ ಸಂಸ್ಥೆ,** ಹಿರೇಮಠ ಸಂಸ್ಥಾನ, ಭಾಲ್ಕಿ - ೫೮೫೩೨೮, ಬೀದರ ಜಿಲ್ಲೆ

**ವಿಚಾರವಾದಿ ಪೆರಿಯಾರ್**(ಜೀವನ ಚರಿತ್ರೆ) ಡಾ|| ದೇಜಗೌ
ಪುಟ: ೧೨೮ ಬೆಲೆ: ರೂ. ೬೦
**ಪೆರಿಯಾರ್ ಮಿಷನ್ ಆಫ್ ಇಂಡಿಯಾ,** ೨೫, ಗಾಂಧಿಬಜಾರ್, ಬೆಂಗಳೂರು - ೫೬೦ ೦೦೪

**ಹೀಗೆ ಸುಮ್ಮನೇ...** (ಕಥಾ ಸಂಕಲನ) ಡಾ|| ಮೀರಾ ಎಸ್.
ಪುಟ: ೧೦೨ ಬೆಲೆ: ರೂ. ೬೨

**ಅರ್ಥಲೋಕ** ಅರವಿಂದ ಚೊಕ್ಕಾಡಿ
ಪುಟ: ೧೪೯ ಬೆಲೆ: ರೂ. ೯೦

**ಒಳಾಂಗಣ ವಿನ್ಯಾಸ** ಮಂಜುಳಾ ರಾಜ್
ಪುಟ: ೧೨೮ ಬೆಲೆ: ರೂ. ೮೦
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ದಾಮಿನಿ ಸಾಹಿತ್ಯ,** ನಂ. ೫೫೯, ೯ನೇ ಮೇನ್, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - ೪೦

**ವ್ಯಾ-ಸಾ-ನು-ಭಾ-ವ** ಡಾ|| ಬಿ. ಬಿ. ರಾಜಪುರೋಹಿತ
ಪುಟ: ೧೯೭ ಬೆಲೆ: ರೂ. ೧೬೦

**ಧ್ವನಿಯ ಶ್ರಾವಣ ಮತ್ತು ಚಾಕ್ಷುಷ ರೂಪ**
ಡಾ|| ಬಿ. ಬಿ. ರಾಜಪುರೋಹಿತ
ಪುಟ: ೧೮೦ ಬೆಲೆ: ರೂ. ೧೫೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಬಂಡಾರ ಪ್ರಕಾಶನ,** ಮಸ್ಕಿ, ರಾಯಚೂರು - ೫೮೪೧೨೪

**ಕೊಡವ ರಂಗಭೂಮಿ** ತೀತೀರ ರೇಖಾ ವಸಂತ
ಪುಟ: ೧೦೦ ಬೆಲೆ: ರೂ. ೬೦
**ಪ್ರಸಾರಾಂಗ,** ಮಂಗಳೂರು ವಿಶ್ವವಿದ್ಯಾನಿಲಯ ಮಂಗಳಗಂಗೋತ್ರಿ - ೫೭೪೧೯೯

**ವಾರದ ಮಲ್ಲಪ್ಪನವರು**
ಡಾ|| ವಿ. ಶಿವಾನಂದ, ಅಂದಾನೆಪ್ಪ ವಿಭೂತಿ
ಪುಟ: ೯೭ ಬೆಲೆ: ರೂ. ೨೦

**ಬಿ. ಜಿ. ಅಣ್ಣಿಗೇರಿ** ಅಂದಾನೆಪ್ಪ ವಿಭೂತಿ
ಪುಟ: ೯೨ ಬೆಲೆ: ರೂ. ೧೦

**ಸ. ಜ. ನಾಗಲೋಟಿಮಠ** ಜಯವಂತ ಕಾಂಡದೇವರ
ಪುಟ: ೧೩೪ ಬೆಲೆ: ರೂ. ೨೦
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ,** ಎಡೆಯೂರು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ - ಗದಗ

**ಗುಡ್ಡದ ಮೇಲಿನ ಏಕವ್ಯಕ್ತಿ ಸೈನ್ಯ!** ಶ್ರೀ ಪಡ್ರೆ
ಪುಟ: ೨೮ ಬೆಲೆ: ರೂ. ೧೫
**ಕೃಷಿ ಮಾಧ್ಯಮ ಕೇಂದ್ರ,** ೧೧೯, ೧ನೇ ಮುಖ್ಯ ರಸ್ತೆ, ೪ನೇ ಅಡ್ಡ ರಸ್ತೆ, ನಾರಾಯಣಪುರ, ಧಾರವಾಡ - ೫೮೦೦೦೮

**ಮನದ ಮಾಮರದ ಕೋಗಿಲೆ** (ಸಿಗ್ಮಂಡ್ ಫ್ರಾಯ್ಡ್‌ನ ಜೀವನ ಕಥನ) ಡಾ|| ಮಹಾಬಲೇಶ್ವರ ರಾವ್
ಪುಟ: ೬೪ ಬೆಲೆ: ರೂ. ೩೫

**ಫ್ಲೂ ಎಂದು ಹೆದರುವಿರೇಕೆ ?**
ಡಾ|| ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ
ಪುಟ: ೭೨ ಬೆಲೆ: ರೂ. ೪೦

**ಶಕ್ತಿಯ ಬಳಕೆಯಲ್ಲಿ ಯುಕ್ತಿ** ಡಾ|| ಬಿ. ಎಸ್. ಸಿದ್ಧರಾಮಯ್ಯ
ಡಾ|| ಕೆ. ವೆಂಕಟರಂಗ ನಾಯಕ
ಪುಟ: ೬೪ ಬೆಲೆ: ರೂ. ೩೫
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧



# ನಾರಾಯಣ್ ಸುರ್ವೆ

ಮುಂಬೈನ ಕಸದ ತೊಟ್ಟಿಯೊಂದರಲ್ಲಿ ಬಿದ್ದಿದ್ದ ಅನಾಥ ಶಿಶುವೊಂದನ್ನು ಗಂಗಾರಾಮ್ ಸುರ್ವೆ ಎಂಬ ಸಾಮಾನ್ಯ ಮಿಲ್ ಕಾರ್ಮಿಕರೊಬ್ಬರು ಸಾಕಿಕೊಂಡು ತಮ್ಮದೇ ಮಗುವಿನಂತೆ ಬೆಳೆಸಿದರು. ಕುಟುಂಬದ ಕಡುಬಡತನದ ಭಾಗವಾಗಿ ಬೆಳೆದ ಈ ಮಗು ನಂತರದ ದಿನಗಳಲ್ಲಿ ಸಮಾಜಿಕ ಕಾರ್ಯಕರ್ತನಾಗಿ ದುಡಿಯುತ್ತ ಅಂದಿನ ದಿನಗಳಲ್ಲಿ ನಡೆಯುತ್ತಿದ್ದ ಕಾರ್ಮಿಕವರ್ಗದ ಶೋಷಣೆಯ ವಿರುದ್ಧ ಸೆಟೆದು ನಿಂತರು. ಆ ಮೂಲಕ ಸುರ್ವೆ ಅವರು ಸೃಷ್ಟಿಸಿರುವ ಕವನಗಳು ಮರಾಠಿ ಪ್ರಗತಿಶೀಲ ಸಾಹಿತ್ಯವನ್ನು ಶ್ರೀಮಂತಗೊಳಿಸಿ ಇಂದಿಗೂ ಜನಮನದ ಭಾಗವಾಗಿವೆ. ಕೇಂದ್ರ ಸರ್ಕಾರ ಸುರ್ವೆ ಅವರಿಗೆ 'ಪದ್ಮಶ್ರೀ' ಪ್ರಶಸ್ತಿ ನೀಡಿ ಗೌರವಿಸಿದೆ.

'ಹೊಸತು' ದಿ। ನಾರಾಯಣ್ ಸುರ್ವೆ ಅವರ ನೆನಪಿಗೆ ಗೌರವ ಸಲ್ಲಿಸುತ್ತದೆ.

ನನಗೆ ಸಹ ಸಿಬ್ಬಂದಿಯ ಮೇಲಿನ ದ್ವೇಷ, ಅಸಹನೆ ಇದೆ ಎನ್ನಿಸುತ್ತಿದೆಯೆ? ನನ್ನ ಅನುಮಾನ ಸುಳ್ಳಾಗಿದ್ದರೆ ಹಾಗೆನ್ನೋಣ ಬಿಡಿ ಎಂದೆ.

''ಮ್ಯಾಡಂ, ಜೋಪಾನ. ಹಾವು ಗೀವು ಇಲ್ಲಿ ಜಾಸ್ತಿ. ಬಂಡೆ ಏರಿ ಕುಳಿತುಬಿಡಿ''. ''ಬರಿ ನನಗೆ ಮಾತ್ರ ಭಯ ಹಾಕುತ್ತೀರಿ. ನೀವು ಎಚ್ಚರವಾಗಿರಬೇಕಲ್ಲವೆ?'' ಎಂದು ನಾನು ಪಾಟಿಯಾಗಿ ಅವರಿಗೆ ಎಚ್ಚರಿಕೆ ಹೇಳಿದೆ. ''ಹೂ... ನೀವು ಹೇಳುವುದು ಸರಿ. ನಾನು ಭಾಳ ಎಚ್ಚರಿಕೆಯಿಂದಲೇ ಇರಬೇಕು.'' ಹಿಂದಿರುಗಿ ನೋಡಿದರು, ರಾಜೇಶ ತುಂಬ ತಲ್ಲೀನನಾಗಿ ಜೀಪಿನ ಟಾಯರ್ ಬದಲಾಯಿಸುತ್ತಿದ್ದ. ನಾವು ನೀರಿನತ್ತ ಕಾಲುಹಾಕಿದೆವು. ಹಳ್ಳಿಯ ಹುಡುಗರು ಅಲ್ಲಿ ನಿರ್ಭೀತರಾಗಿ ನೀರಾಟ ಆಡುತ್ತಿದ್ದರು. ನೀರು ಬಹಳ ಕಡಿಮೆ ಇತ್ತು. ಆ ಕತ್ತಲಲ್ಲಿ ಬ್ಯಾರೇಜಿನ ವಾಚಮನ್ ಉಸುಕಿನಲ್ಲಿ ಬೀಡಿ ಸೇದುತ್ತಾ ಕುಳಿತಿದ್ದ. ಪಕ್ಕದಲ್ಲೊಂದು ಬಾಟ್ಲಿ ಇತ್ತು. ಊಟದ ಬುತ್ತಿ ಇತ್ತು. ಎಂತಹ ಪ್ರಶಾಂತ ಜೀವನ, ಎಂತಹ ನಿರ್ಭೀತ ಜೀವನ ಈತನದು? ನಾವೆಲ್ಲ ಭಯಪಟ್ಟು ಓಟ ಕಿತ್ತುವ ಜಾಗದಲ್ಲಿ ಸುಡುಗಾಡು ಕಾಯುವ ಹರಿಶ್ಚಂದ್ರನಂತೆ ಈತ ಈ ದೊಡ್ಡ ಬ್ಯಾರೇಜನ್ನೆ ಏಕಾಂಗಿ ವೀರನಾಗಿ ಕಾಯುತ್ತಿದ್ದಾನೆ. ಈತ ಇಲ್ಲಿ ಕಾವಲಿರುವುದರಿಂದ ಕಳ್ಳತನ ಆಗಲಾರದೆ? ಟನ್ನುಗಳಲ್ಲಿ ತಿನ್ನುವವರ ಹೆಸರು ಹೇಳಬಲ್ಲನೆ ಈತ? ಈ ಸಾವಿರ ರೂಪಾಯಿ ಸಂಬಳದ ಕುಡುಕ ಜವಾನ! ಎಂತಹ ನಾಟಕ! ಈ ನಾಟಕಕ್ಕೆ ನಾವು ಮಾರುಹೋಗುತ್ತೇವೆ. ಇಂಥವರೆ ಅಲ್ಲಿ ಬುದ್ಧವಿಹಾರದ ಅವಶೇಷಗಳನ್ನು ಕಾಯಲು ಕುಳಿತಿದ್ದಾರೆ!

''ಏನೊ ಎಚ್ಚರಿಸುತ್ತಿದ್ದೀರಿ. ಏನದು ಮೇಡಂ? ಅಟ್ಟ ಅಡವಿ, ಹೊಳೆದಂಡೆ ಅದಕ್ಕೆ ಎಚ್ಚರಿಸಿದೆ! ಇಲ್ಲಿ ಬಂದಾಗಿನಿಂದ ಒಗಟಿನಂತೆ ಇದ್ದೀರಿ. ಏನೊ ಹೇಳಬೇಕಿದೆ. ಹೇಳಲಾರದೆ ಸುಮ್ಮನೆ ಇರುವಂತಿದೆ ಹೇಳಿ.''

''ಸರ್, ನನಗೆ ರಜೆ ಬೇಕು!'' ''ಕೊಡೋಣವಂತೆ; ಹೇಳಿ, ನಿಮಗೆ ಏನೋ ಹೇಳಲಿಕ್ಕಿದೆ! ಈ ಗ್ರಾಮಸ್ಥರು ಹೇಳುವಂತೆ ಮೂರ್ತಿಗಳು ಹೊರಬಂದಾಗ ಸುಂದರವಾಗಿಯೆ ಇರುತ್ತವೆ. ಆಮೇಲೆ ದೃಷ್ಟಿಯಾಗಿ ಭಿನ್ನವಾಗಿ ಮುಂಡಗಳು ಮಾತ್ರ ಉಳಿದು ರುಂಡಗಳು ನಾಪತ್ತೆಯಾಗುತ್ತವೆ. ಅದಕ್ಕೆ ಅನುಮಾನವಿದೆ; ನೀವೂ ಪರೀಕ್ಷಿಸಿ.'' ''ಹೌದು, ನನಗೂ ಅನುಮಾನವಿದೆ. ಆದರೂ ಈಗ ಎಲ್ಲ ಸ್ವಲ್ಪ ಶಿಸ್ತಿನಿಂದ ಕೆಲಸ ನಡೆದಿದೆ ಎಂದುಕೊಳ್ಳುತ್ತೇನೆ.'' ''ಹೌದು! ಬುದ್ಧನ ಬಳಿಗೆ ಬಂದ ಮದ್ದಾನೆ ಪಳಗಿಹೋಯ್ತಂತೆ. ಕಾಡುಮಂಗಗಳು ಆತನಿಗೆ ಕುಡಿಯಲು ಜೇನನ್ನು ಕೊಟ್ಟವಂತೆ'' ''ಓ ನೀವು ನನ್ನನ್ನು ಬುದ್ಧನನ್ನಾಗಿಸಿಬಿಟ್ಟರಿ. ನನಗಿನ್ನು ಯಶೋಧರೆಯ ದರ್ಶನವೂ ಆಗಿಲ್ಲ!'' ಎಂದು ಸಾರಥಿ ಹೇಳಿದಾದ ಇಬ್ಬರೂ ನಕ್ಕೆವು.

* * *

ನಮ್ಮ ಈ ಉತ್ಖನನ ಆ ದಶಕದ ಪ್ರಮುಖ ಉತ್ಖನನವಾಗಿತ್ತು. ಕರ್ನಾಟಕದ ಹಾಗೂ ಭಾರತದ ಇತಿಹಾಸದ ಮೈಲಿಗಲ್ಲಾಗಿತ್ತು. ಕ್ರಿ.ಪೂ. ಬೌದ್ಧ ಧರ್ಮ ಸಾಹಿತ್ಯದ ಮೇಲೆ, ಇತಿಹಾಸದ ಮೇಲೆ ವಿಶೇಷ ಬೆಳಕು ಬೀರಲಿತ್ತು. ಆದರೆ ಒಬ್ಬ ಇತಿಹಾಸ ತಜ್ಞ ಮತ್ತು ಭೂಗರ್ಭಶಾಸ್ತ್ರಜ್ಞನಾಗಿ ರಾಜೇಶ ಪ್ರಾಚ್ಯವಸ್ತುಗಳಿಗೆ ಮಹತ್ವ ಕೊಡದೆ ಅವುಗಳನ್ನು ಸಾಗಾಣಿಕೆ ಮಾಡಿದ ಗುಮಾನಿ ಬರತೊಡಗಿತ್ತು.

ಪ್ರಾರಂಭದಲ್ಲಿ ಉತ್ಖನನ ನಡೆಯುವಾಗ ಮೂರ್ತಿಗಳು ಹೊರಬಂದ ಅವಸ್ಥೆಯನ್ನು ಸಿ.ಡಿ. ರೂಪದಲ್ಲಿ ಸೆರೆಹಿಡಿದು ಇಡಲಾಗಿತ್ತು. ಅವುಗಳು ದೊರೆತ ಸ್ಥಳದ, ಜೊತೆಗೆ ಮೂರ್ತಿಗಳ ವಿಶೇಷತೆಯನ್ನು ಚಿತ್ರೀಕರಿಸಲಾಗಿತ್ತು. ಈ ಸಿ.ಡಿ.ಗಳನ್ನು ರಾಜೇಶ ತನ್ನ ಛೇಂಬರಿನಲ್ಲಿ ಗುಪ್ತವಾಗಿ ಇರಿಸಿಕೊಂಡಿದ್ದ. ಪ್ರೀತಿಯ ಭ್ರಮೆಯಲ್ಲಿ ನನ್ನನ್ನು ನಂಬಿದ್ದ. ಒಂದು ಬಾರಿ ಇತರ ಸಿ.ಡಿ.ಗಳನ್ನು ಪರೀಕ್ಷೆ ಮಾಡುವಾಗ ಆ ಸಿ.ಡಿ. ದೊರಕಿತು. ಅದನ್ನು ಕಾಪಿ ಮಾಡಿಕೊಂಡು ಅದನ್ನು ಯಥಾಸ್ಥಿತಿಯಲ್ಲಿ ಇಟ್ಟಿದ್ದೆ. ನನಗೆ ಆ ಸಿ.ಡಿ. ದೊರೆತ ಬಗ್ಗೆ ಆತನಿಗೆ ಮಾಹಿತಿ ಇರಲಿಲ್ಲ.

ಆ ಸಿ.ಡಿ.ಗಳನ್ನು ಮುಂದಿನ ತನಿಖೆಗಾಗಿ ನಾನು ಸಾರಥಿಗೆ ಒಪ್ಪಿಸಿ ರಜೆಯಲ್ಲಿ ತೆರಳಿದೆ. ನಾನು ಬಂದಾಗ ಮಳೆ ಪ್ರಾರಂಭವಾಗಿ ಭೀಮೆ ತುಂಬಿ ಹರಿಯುತ್ತಿದ್ದಳು. ಎಲ್ಲೆಡೆ ಹಸಿರು ಚಿಗಿತು ಮನಸ್ಸಿಗೆ ಉಲ್ಲಾಸ ಕೊಡುತ್ತಿತ್ತು. ರಾಜೇಶನ ಸುಳಿವಿರಲಿಲ್ಲ. ಸಸ್ಪೆಂಡ್ ಆಗಿದ್ದ. ಅದಕ್ಕೆ ಅವನ ಅಜಾಗೃತಿಯೆ ಕಾರಣವೆಂದು ಸಿದ್ಧಗೊಂಡಿತ್ತು. ಮೂರ್ತಿಗಳು ಭಗ್ನವಾದುದಕ್ಕೆ ಅವುಗಳ ರುಂಡಗಳು ಕಾಣೆಯಾಗಿದ್ದಕ್ಕೆ ಪೊಲೀಸ್ ಕಂಪ್ಲೇಂಟ್ ಕೊಟ್ಟ ಮೇಲೆ ತನಿಖೆ ಪ್ರಾರಂಭವಾಗಿತ್ತು.

ಸಾರಥಿ ಕೆಲವು ದಿನಗಳ ಮಟ್ಟಿಗೆ ರಜೆಯಲ್ಲಿ ಹೋಗಿದ್ದ. ನನ್ನನ್ನ ಅಲ್ಲಿನ ಇನ್‌ಚಾರ್ಜ್ ಮಾಡಬೇಕೆಂದು ಪತ್ರ ಬರೆದಿಟ್ಟಿದ್ದ. ಮರದ ಕೆಳಗೆ ಅಲ್ಲಿ ಇಲ್ಲಿ ಬಿದ್ದು ಮಣ್ಣು ಮುಸುಕಿದ ಬುದ್ಧನ ಧ್ಯಾನಮುದ್ರೆಯ ಮೂರ್ತಿಗಳು ಗುರುತು ಸಿಕ್ಕದ ಹಾಗೆ ಮರು ಜೋಡಣೆಗೊಂಡಿದ್ದವು. ಆ ನಿಂತ ನಿಲುವಿನ ಬುದ್ಧನ ಮುಖದಲ್ಲಿ ಜಗತ್ತಿನ ದಯೆಯೆ ಮನೆಮಾಡಿತ್ತು. ಅಶೋಕ ಚಕ್ರವರ್ತಿ ಬುದ್ಧ ವಿಹಾರದ ಬಾಗಿಲ ಬಂಟನಾಗಿ ನಿಂತಿದ್ದ. ಈ ಸಂದರ್ಭದಲ್ಲಿ ಓಲಾಡುವ ಆ ಅಶೋಕ ವಿಹಾರವನ್ನು ಪ್ರವೇಶಿಸಿ, ದಯೆ ಧರ್ಮಗಳನ್ನು ಅರಿತನೇನೊ.

ಎಲ್ಲ ಮೂರ್ತಿಗಳು ಈಗ ಗಾಜಿನ ಫ್ರೇಮುಗಳಲ್ಲಿ ಜೋಡಿಸಲ್ಪಟ್ಟಿದ್ದವು. ಅಪೂರ್ವವಾದ ಉಬ್ಬುಚಿತ್ರಗಳು. ಮೂರ್ತಿಗಳು ಗಾಜಿನ ಪೆಟ್ಟಿಗೆಯಲ್ಲಿದ್ದು, ಅವುಗಳ ಅಡಿಯ ಪಾರಿವಾಳಗಳು ಶಾಂತಿ ಸಂದೇಶ ಸಾರುತ್ತಿದ್ದವು. ಅಶೋಕನ ಧರ್ಮಚಕ್ರವೂ ಒಂದು ಸ್ಥಳ ಪಡೆದಿತ್ತು. ನನಗೆ ಏನಾದರೂ ಮಾಡಲು ಕೆಲಸ ಉಳಿಸಿದ್ದಾನೆಯೆ ಎಂದು ನೋಡಿದೆ. ಏನೂ ಇರಲಿಲ್ಲ. ಇಲ್ಲೇ ಇದ್ದು ನಿಂತ ನೀರಾಗುವುದು ಬೇಡ, ಬೇರೆಲ್ಲಿ ನನಗೆ ಕೆಲಸವಿದೆ ಎಂದು ಶೋಧಿಸತೊಡಗಿದೆ.

ಅನೇಕ ಬಾರಿ ಅನಾಥಾಲಯದ ಅಡಿಗೆಯವಳನ್ನು ಕರೆದುಕೊಂಡು, ಅವಳು ನೋಡಿದಳು ಎನ್ನುವ 'ನನ್ನವರ' ಚಹರೆಗಳಿಗಾಗಿ ಹುಡುಕಿದೆ. ಆದರೆ ಆ ಚಹರೆಗಳ ಸುಳಿವು ಸಿಕ್ಕಿತು ಎನ್ನುವಾಗ ಇವರಲ್ಲ, ಇವರೂ ಅಲ್ಲ, ಇವರಾರೂ ಅಲ್ಲ. ಅವರು ಬೇರೊಬ್ಬರೆ ಎಂದು ನನ್ನಂತೆಯೆ ಆಕೆಯೂ ಗೊಂದಲಕ್ಕೆ ಬಿದ್ದಾಗ ಆಕೆಯನ್ನೆ ಬಿಗಿಯಾಗಿ ಒಂದು ಸಲ ಅಪ್ಪಿಕೊಂಡು ಗಳಗಳನೆ ಮುನ್ನಿನಂತೆ ಅತ್ತುಬಿಟ್ಟ ಮೇಲೆ ನಿರುಮ್ಮಳವಾದೆ.

ಮಹಾಬಲಿಪುರಂ, ದ್ವಾರಕಾ...ಗಳ ಸಮುದ್ರದ ಆಳದಲ್ಲಿ ಹುದುಗಿದ್ದ ಪ್ರಾಚೀನ ಪುರಾತನ ಶಿಲ್ಪ... ನಗರ... ನಾಗರಿಕತೆ ಬದುಕಿದ ಅಪರೂಪದ ಕುರುಹುಗಳನ್ನು ಹುಡುಕಲು ನನ್ನ ಮಸೂರಗಳನ್ನು ಎತ್ತಿಕೊಂಡು ಹೊರಡಲು ಅಣಿಯಾದೆ.

ಜ್ಯೋತಿ ಪಿ. ಕುಲಕರ್ಣಿ
ಕೇರಾಫ್: ಸತೀಶ ಬಿ. ದೇಶ್‌ಮುಖ್, ನಂ. ೧-೧೭೩/೧ಎ, ಮೇಲಿನ ಕೇರಿ, ಬ್ರಹ್ಮಪೂರ, ಗುಲಬರ್ಗಾ - ೫೮೫ ೧೦೧



# ಮನಕಲಕುವ ಅಮಾನುಷ ಕ್ರೌರ್ಯಗಳ ಸತ್ಯಕತೆ

**(ಪೆಲಸ್ತೀನಿ ನಿರಾಶ್ರಿತರ ಮೇಲೆ ನಡೆದ ದೌರ್ಜನ್ಯದ ಪ್ರತ್ಯಕ್ಷದರ್ಶಿಯ ಅನುಭವ ಕಥನ)**




ಲೇಖಕಿ : **ಡಾ|| ಅಂಗ್ ಸ್ವಿ ಚಾಯ್**
ಅನುವಾದ : **ಫಕೀರ್ ಮುಹಮ್ಮದ್ ಕಟ್ಪಾಡಿ**
ಪ್ರಕಾಶಕರು : **ಅದರ್‌ಬುಕ್ಸ್, ಕೊಝಿಕೋಡ್, ಕೇರಳ**
ಪುಟಗಳು : ೩೦೬+೨೮, ಬೆಲೆ : ರೂ. ೨೦೦. ೨೦೧೦

**ಪ್ರ**ಭುತ್ವವೊಂದು ಎಷ್ಟು ಕ್ರೂರಿಯಾಗಿರಬಲ್ಲದು, ಎಷ್ಟು ನಿರ್ದಯಿಯಾಗಿರಬಲ್ಲದು, ಅಮಾನುಷವಾಗಿರಬಲ್ಲದು ಎನ್ನುವುದಕ್ಕೆ ಈ ಅನುಭವ ಕಥನ ಸಾಕ್ಷಿ. ಸುಮಾರು ಆರು ದಶಕಗಳ ಹಿಂದೆ ಜರ್ಮನಿಯಲ್ಲಿ ಹಿಟ್ಲರನ ನಾಝೀ ಪಡೆಗಳಿಂದ ಸ್ವತಃ ಅಮಾನುಷ ಕೃತ್ಯಗಳಿಗೆ ಬಲಿಯಾದ ಯೆಹೂದ್ಯ ಜನಾಂಗವೇ ಮೂರು ದಶಕಗಳ ಹಿಂದೆ ಅದಕ್ಕಿಂತಲೂ ಹೆಚ್ಚು ಕ್ರೌರ್ಯವನ್ನು ಇನ್ನೊಂದು ಜನಾಂಗ (ಪೆಲಸ್ತೀನಿಯನ್ನರು)ದ ಮೇಲೆ ಎಸಗಿತು ಎನ್ನುವುದನ್ನು ಕಲ್ಪಿಸಿಕೊಳ್ಳಲೂ ಆಗದು. ಆದರೆ ಅದು ಸತ್ಯ. ಲೆಬನಾನಿನಲ್ಲಿ (ಪಶ್ಚಿಮ ಏಶಿಯ) ಇಸ್ರೇಲಿ ಸೈನಿಕರು ೧೯೮೨ರಲ್ಲಿ, ೧೯೮೫ರಲ್ಲಿ ಪೆಲಸ್ತೀನ್ ನಿರಾಶ್ರಿತರ ಶಿಬಿರಗಳ ಮೇಲೆ, ಆಸ್ಪತ್ರೆಗಳ ಮೇಲೆ, ಶಾಲೆಗಳ ಮೇಲೆ ನಡೆಸಿದ ದೌರ್ಜನ್ಯದ ಸತ್ಯಕತೆ ಇದು. ಎರಡನೇ ಮಹಾಯುದ್ಧದ ಕಾಲದಲ್ಲಿ ಹಿಟ್ಲರನ ಫ್ಯಾಸಿಸ್ಟ್‌ಶಾಹಿ ಶಕ್ತಿಗಳು ಕೂಡುದೊಡ್ಡಿಗಳಲ್ಲಿ ಅಮಾಯಕರ ಮೇಲೆ ನಡೆಸಿದ ಹತ್ಯಾಕಾಂಡವನ್ನು ಮರಳಿ ನೆನಪಿಗೆ ತರುತ್ತದೆ ಈ ಪ್ರತ್ಯಕ್ಷದರ್ಶಿಯ ಕಥನ. ಪೆಲಸ್ತೀನಿಯನ್ನರ ಮೇಲೆ ನಡೆದಿರುವ ದೌರ್ಜನ್ಯ ಎಲ್ಲವನ್ನೂ ಮೀರಿಸಿದೆ ಎನ್ನಬಹುದು.



ಲೇಖಕಿ
**ಡಾ|| ಅಂಗ್ ಸ್ವಿ ಚಾಯ್**

ಸಿಂಗಾಪೂರ ಮೂಲದ ಲೇಖಕಿ ಅಂಗ್ ಸ್ವಿ ಚಾಯ್ ಲಂಡನ್ನಿನಲ್ಲಿ ವೈದ್ಯ ವೃತ್ತಿಯಲ್ಲಿ ನಿರತವಾಗಿದ್ದಾಕೆ. ಮೂಳೆರೋಗ ತಜ್ಞೆ. ಲೆಬನಾನ್‌ನ ರಾಜಧಾನಿ ಬೇರೂತಿನಲ್ಲಿ ಯುದ್ಧದ ಗಾಯಾಳುಗಳಿಗೆ ಚಿಕಿತ್ಸೆ ನೀಡಲು ವೈದ್ಯರ ಅಗತ್ಯವಿದೆ ಎಂದು ತಿಳಿದು ಬಂದಾಗ ಸ್ವಯಂಸೇವಕಿಯಾಗಿ ಸೇವೆ ಸಲ್ಲಿಸಲು ಮುಂದಾದರು. ಅಲ್ಲಿಗೆ ಹೋಗುವಾಗ ಆಕೆಗೆ ಪೆಲಸ್ತೀನಿಯನ್ನರ ಬಗ್ಗೆಯಾಗಲಿ, ಅವರ ಹೋರಾಟದ ಸಂಸ್ಥೆ ಪೆಲಸ್ತೀನ್ ವಿಮೋಚನಾ ಸಂಘಟನೆಯ ಬಗ್ಗೆಯಾಗಲಿ ಅನುಕಂಪವೇನಿರಲಿಲ್ಲ. ವಸ್ತುಸ್ಥಿತಿಯನ್ನು ಕಂಡು, ಇಸ್ರೇಲಿಗಳ ದುರ್ವರ್ತನೆಯನ್ನು ಸ್ವತಃ ಅನುಭವಿಸಿ ಬದಲಾದ ವ್ಯಕ್ತಿ ಈಕೆ. ತಾನು ಕಂಡದ್ದನ್ನು ಕಂಡಹಾಗೆ ದಾಖಲಿಸಿ ಸತ್ಯಕಥೆಯೊಂದನ್ನು ಲೇಖಕಿ ಡಾ|| ಸ್ವೀ ಮನುಷ್ಯನ ಕ್ರೌರ್ಯ ಯಾವ ಮಟ್ಟದಲ್ಲಿರಬಲ್ಲದು ಎಂಬುದನ್ನು ಪರಿಚಯಿಸಿದ್ದಾರೆ. ಇದನ್ನು ಓದಿದ ಮೇಲೆ ಇಸ್ರೇಲಿಗಳು ಪೆಲಸ್ತೀನಿನ ಪಶ್ಚಿಮ ದಂಡೆ ಪ್ರದೇಶದಲ್ಲಿ ಈಚೆಗೆ ನಡೆಸಿರುವ ಹತ್ಯಾಕಾಂಡ ಹೇಗಿದ್ದಿತು ಎಂಬುದನ್ನು ಕಲ್ಪಿಸಿಕೊಳ್ಳಬಹುದು. ಅಲ್ಲದೆ, ಇನ್ನೂವರೆಗೆ ಅಂತಾರಾಷ್ಟ್ರೀಯ ಸಮುದಾಯ ಇಸ್ರೇಲಿ ಪಾತಕಿಗಳನ್ನು ಮಾನವ ಹಕ್ಕುಗಳ ಉಲ್ಲಂಘನೆಗಾಗಿ, ಅಮಾನುಷ ಹತ್ಯಾಕಾಂಡಕ್ಕಾಗಿ, ಯುದ್ಧಾಪರಾಧಕ್ಕಾಗಿ ವಿಚಾರಣೆಗೆ ಗುರಿಪಡಿಸಿಲ್ಲ ಏಕೆ ಎನಿಸದಿರದು. ಇದಕ್ಕೆ ಕಾರಣ ಇಲ್ಲಿ ಅಪ್ರಸ್ತುತ.

ಲೇಖಕಿ ನೀಡಿರುವ ಕೆಲವು ವಿವರಗಳ ಉಲ್ಲೇಖ ಇಲ್ಲಿವೆ :

* ಯುದ್ಧದ ಪರಿಣಾಮದಿಂದಾದ ಹಲವು ವಿಧದ ಬೀಭತ್ಸ ರೂಪದ ಗಾಯಗಳುಳ್ಳ ರೋಗಿಗಳು ಆಸ್ಪತ್ರೆಯಲ್ಲಿ ಕಾಣಸಿಗುತ್ತಿದ್ದರು. ಕೈಯನ್ನು ತುಂಡರಿಸುವಷ್ಟು ಶಕ್ತವಾದ ಅಥವಾ ಒಂದೇ ಪೆಟ್ಟಿಗೆ ಕೊಂದುಬಿಡುವಷ್ಟು ಸಾಕಷ್ಟು ತೀಕ್ಷ್ಣರೂಪದ ಮೊನಚಾದ ಕಾಂಕ್ರೀಟ್ ಸ್ಲಾಬಿನ ಚೂರುಗಳು ಕೆಲವು ರೋಗಿಗಳ ದೇಹದೊಳಗೆ ಇದ್ದುವು. ಸಾಧಾರಣವಾದ ಸುಟ್ಟ ಗಾಯಗಳಿಂದ ಹಿಡಿದು ಸ್ನಾಯುವಿನ ಆಳಕ್ಕೆ ತಲುಪಿದ ಗಂಭೀರ ರೂಪದ ಸುಟ್ಟ ಗಾಯಗಳ ರೋಗಿಗಳು ಇದ್ದರು... ನಾನು ನೋಡುವಷ್ಟು ಹೊತ್ತಿಗೆ ಈ ಗಾಯಗಳಿಗೆ ವಾರಗಟ್ಟಲೆಯ ಸೋಂಕು ತಗಲಿತ್ತು. (ಪು. ೩೫)

* 'ರೇಗನ್-ಬೆಗಿನ್ ಸಿಂಡ್ರೋಮ್' ಎಂದು ಅಮೆರಿಕನ್ ದಾದಿಯರು ಕರೆಯುವ ಯುದ್ಧದ ಶಾಕ್ ತಗಲಿದ ಮಕ್ಕಳನ್ನು ನೋಡಿದರೆ ಎದೆ ಕಲಕುವಂತಿತ್ತು. ಈ ಮಕ್ಕಳಲ್ಲಿ ಹೆಚ್ಚಿನವರ ಹೆತ್ತವರು, ಹತ್ತಿರದ ಸಂಬಂಧಿಗಳು ಬಾಂಬ್ ಧಾಳಿಯಿಂದ ಸತ್ತುಹೋಗಿದ್ದರು. ಈ ಮಕ್ಕಳಿಗೆ ಚಿಕಿತ್ಸೆ ನೀಡುವಾಗಲೆಲ್ಲ ಇಸ್ರೇಲಿ ನಾಯಕನ ಮಾತುಗಳು ನನ್ನ ಕಿವಿಯಲ್ಲಿ ಮೊಳಗುತ್ತವೆ. ಬಾಂಬು ದಾಳಿಯಿಂದಾದ ಸಾವು-ನೋವುಗಳಿಗೆ ಆತನ ಪ್ರತಿಕ್ರಿಯೆ... ''ಆಮ್ಲೇಟು ಮಾಡಬೇಕಿದ್ದರೆ ಮೊಟ್ಟೆಯನ್ನು ಒಡೆಯಲೇಬೇಕಾಗುತ್ತದೆ.'' (ಇದು ಇಸ್ರೇಲಿನ ಸಿನಿಕತನಕ್ಕೆ ಸಾಕ್ಷಿ-ಸಂ.) (ಪು. ೩೫)

* ಒಂದು ದಿನ ನನ್ನ ಕಣ್ಣೆದುರಲ್ಲೇ ಶಿಬಿರದ ಮುರುಕು ಮನೆಯೊಂದರ ಮುಂದೆ ಸೈನಿಕರ ಟ್ಯಾಂಕೊಂದು ಬಂದು ನಿಂತು ಹೇಳದೆ ಕೇಳದೆ ರಾಕೆಟ್ಟು ಹಾರಿಸಿತು. ಕ್ಷಣಮಾತ್ರದಲ್ಲಿ ಮನೆ ಕಸದ ಮುದ್ದೆಯಾಯಿತು... ಹತ್ಯಾಕಾಂಡ ನಡೆದ ಇದೇ ಸ್ಥಳದಲ್ಲಿ ನಾನು ಚಿಕಿತ್ಸೆ ಮಾಡಿದ ಚಿಕ್ಕ ಮಗುವಿನ ದೇಹವು ಸಿಕ್ಕಿತ್ತು. ಈ ಮಗುವು ಇತರ ಕೆಲವು ಮಕ್ಕಳೊಂದಿಗೆ ಆಟವಾಡುತ್ತಿರುವಾಗ ಸೈನಿಕರು ಎಸೆದ ಕೈ ಬಾಂಬು ಇವರ ಗುಂಪಿನ ನಡುವೆ ಸಿಡಿದು ಎಲ್ಲರ ದೇಹವೂ ಚಿಂದಿಚಿಂದಿಯಾಗಿತ್ತು... (ಪು. ೯೪)

* ...ಈ ಶಿಬಿರವು ಕಳೆದ ೧೨ ವಾರಗಳಿಂದ ದಿಗ್ಬಂಧನಕ್ಕೊಳಗಾಗಿದೆ. ನಾವು ಮತ್ತು ಇಪ್ಪತ್ತು ಸಾವಿರ ಇಲ್ಲಿ ವಾಸಿಸುತ್ತಿರುವ ಶಿಬಿರ ವಾಸಿಗಳು ತುಂಬಾ ಸಂಕಷ್ಟಗಳಿಗೆ ಸಿಲುಕಿದ್ದೇವೆ. ...ಕುಡಿಯುವ ನೀರೇ ಇಲ್ಲ. ರಸ್ತೆ ಬದಿಯಲ್ಲಿ ನೀರು ತರಲು ಹೋದರೆ ಪ್ರಾಣಕ್ಕೆ ಅಪಾಯವಿದೆ. ...ಹಲವು ಹೆಂಗಸರು ಮಕ್ಕಳು... ನೀರು ಹಿಡಿಯಲು ಹೋಗಿ ಪ್ರಾಣ ಕಳೆದುಕೊಂಡಿದ್ದಾರೆ. ...ಆಹಾರ ದಾಸ್ತಾನು ...ಖಾಲಿಯಾಗಿದೆ. ಮಗುವಿನ ಆಹಾರ ಹಾಲು, ಕುಡಿಯುವ ನೀರಿಲ್ಲದೆ ಮಕ್ಕಳು ಸಾಯುತ್ತಿದ್ದಾರೆ. ...ಜನರು ಸಿಕ್ಕಿದ ಕೊಳೆತ ಪದಾರ್ಥಗಳನ್ನು ತಿಂದು ವಾಂತಿ-ಭೇದಿಗಳಿಗೊಳಗಾಗುತ್ತಿದ್ದಾರೆ. ...ಹಿಡಿ ಹಿಟ್ಟಿಗೂ ಹಾಹಾಕಾರವೆದ್ದಿದೆ... ಹೆಂಗಸರು, ಗರ್ಭಿಣಿಯರು, ಮಕ್ಕಳು ನಿತ್ರಾಣವಾಗಿಬಿಟ್ಟಿದ್ದಾರೆ... ವಿದ್ಯುಚ್ಛಕ್ತಿ ಸರಬರಾಜಿಲ್ಲದೆ ಎರಡೂವರೆ ತಿಂಗಳು ಕಳೆದಿವೆ. ಇದು ಚಳಿಗಾಲ. ಜನ ಚಳಿಯಿಂದ ತತ್ತರಿಸುತ್ತಿದ್ದಾರೆ. ...ಆಸ್ಪತ್ರೆಯಲ್ಲಿ ಔಷಧಿಗಳು ಖಾಲಿಯಾಗಿವೆ... ಪರಿಸ್ಥಿತಿ ಅಮಾನವೀಯವಾಗಿದೆ... (ಪು. ೨೨೦-೨೨೧)

ಲೇಖಕಿ ವೈದ್ಯಕೀಯ ಸೇವೆ ಸಲ್ಲಿಸಿದ್ದು ಲೆಬನಾನಿನ ಸಬ್ರಾ ಮತ್ತು ಶಾಕಿಲಾ ಶಿಬಿರಗಳಲ್ಲಿ. ಇಸ್ರೇಲ್ ರಾಷ್ಟ್ರ ಸ್ಥಾಪನೆಯಾದ ನಂತರ ನಿರಾಶ್ರಿತರಾದ ಪೆಲಸ್ತೀನಿಯನ್ನರು ನೆಲಸಿದ್ದ ಶಿಬಿರಗಳು ಇವು. ಇಸ್ರೇಲಿಗಳು ದಾಳಿ ನಡೆಸಿದ್ದು ಪೆಲಸ್ತೀನ್ ವಿಮೋಚನಾ ಸಂಸ್ಥೆಯ ಕಾರ್ಯಕರ್ತರನ್ನು ಮೂಲೋತ್ಪಾಟನೆ ಮಾಡಲು. ಇಸ್ರೇಲ್ ಸ್ಥಾಪನೆಯಾದಂದಿನಿಂದ ಇಂದಿನ ವರೆಗೆ ಪೆಲಸ್ತೀನ್ ಜನರ ಮೇಲೆ ದಬ್ಬಾಳಿಕೆ ದೌರ್ಜನ್ಯಗಳು ನಡೆಯುತ್ತಲೇ ಇವೆ. ಲೇಖಕಿ ಡಾ|| ಸ್ವಿ ಕಣ್ಣಿಗೆ ಕಟ್ಟುವಂತೆ, ಮನಕಲಕುವಂತೆ ಕ್ರೌರ್ಯವನ್ನು ಬಣ್ಣಿಸಿದ್ದಾರೆ. ಅವರ ಈ ಕೃತಿಯನ್ನು ಫಕೀರ್ ಮುಹಮ್ಮದ್ ಕಟ್ಪಾಡಿಯವರು ಯಥಾವತ್ತಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಅವರಿಗೆ ಅಭಿನಂದನೆಗಳು. ನಿಜಸ್ಥಿತಿಯನ್ನು ಅರಿಯಲು ಬಯಸುವ ಎಲ್ಲ ಮಾನವತಾವಾದಿಗಳು ಓದಲೇಬೇಕಾದ ಪುಸ್ತಕ ಇದು. ಜಿ. ಕೆ. ಗೋವಿಂದರಾಯರು ಮುನ್ನುಡಿ ಬರೆದಿದ್ದಾರೆ. ಅವರು ಇಸ್ರೇಲ್‌ನ ಸ್ಥಾಪನೆ, ಪೆಲಸ್ತೀನ್ ಜನತೆ ತಮ್ಮ ತಾಯ್ನಾಡಿನ ಸ್ಥಾಪನೆಗಾಗಿ ನಡೆಸಿರುವ ಹೋರಾಟ, ಅವರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ವಿಶ್ವಸಂಸ್ಥೆಯ ಅನಾದರಣೆ ಕುರಿತು ಸರಿಯಾದ ಮಾಹಿತಿ ನೀಡಿದ್ದರೆ ಉಪಯೋಗವಾಗುತ್ತಿತ್ತು.

ಸೀಯಾರ್ಕೆ
'ಚೌಜೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ.ಹಂತ, ೩ನೇ ಬ್ಲಾಕ್
ಕತ್ತಿಗುಪ್ಪೆ, ಬೆಂಗಳೂರು - ೫೬೦ ೦೮೫

# ಮತ್ತೆ ಹಾಡು ಬಾ 'ಸಿರಿ' ಯಜ್ಜಿ



ಹಿರಿಯಟ್ಟಿಯಿಂದ ಒಂದು ಕಿ. ಮೀ. ದೂರದಲ್ಲಿರುವ ಯಲಗಟ್ಟೆ ಗೊಲ್ಲರಹಟ್ಟಿಯ ತಿಪ್ಪೇಸ್ವಾಮಿಯೊಂದಿಗೆ ಸಿರಿಯಜ್ಜಿಯ ಮದುವೆಯಾಯಿತು. ಚಿಕ್ಕವಳಿದ್ದರಿಂದ ಮದುವೆಯಾದ ಕೆಲ ವರ್ಷನಂತರ ಗಂಡನ ಮನೆಗೆ ಹೋದಳು. ಅಲ್ಲಿಗೆ ಹೋದ ಮೇಲೆ ಚಿತ್ರಲಿಂಗ, ನರಸಿಂಹಸ್ವಾಮಿ, ಕರಿಯಣ್ಣ ದೇವರುಗಳ ಮೇಲೆ ಪದ ಕಲಿತಳು. ಗಂಡನ ಮನೆಯಲ್ಲಿ ಬಡತನ ಹೆಚ್ಚಿದ್ದರಿಂದ ಕೂಲಿಗೆ ಹೋಗಲೇಬೇಕಾಗಿತ್ತು, ಆದರೆ ಅಜ್ಜಿಗೆ ಅದಕ್ಕಿಂತ ಮುಖ್ಯವಾಗಿ ಜೊತೆಗಾರರ ಸಂಗಡ ಪದ ಹಾಡುತ್ತಾ ಕೆಲಸ ಮಾಡಬಹುದಲ್ಲ ಎಂಬುದೇ ಹೆಚ್ಚು ಆಕರ್ಷಣೀಯವಾಗಿತ್ತು

ಪರಮೇಶ್ವರಯ್ಯ ಸೊಪ್ಪಿಮಠ

ಕರ್ನಾಟಕವು ಜಾನಪದ ಕಲೆಗಳ ತವರೂರು. ಎಲ್ಲಾ ಶಾಸ್ತ್ರೀಯ ಕಲೆಗಳ ಮೂಲ ಜಾನಪದ ಎನ್ನುವುದರಲ್ಲಿ ಅನುಮಾನವಿಲ್ಲ. ಇಂತಹ ಜಾನಪದ ಕಲೆಗಳನ್ನು ಮಾಧ್ಯಮವಾಗಿಸುತ್ತಾ, ಪೋಷಿಸಿಕೊಂಡು ಬಂದ ಹಿರಿಯ ಕಲಾವಿದರ ಸಂಖ್ಯೆ ಅಸಂಖ್ಯಾತ. ಅಂಥವರು ಮುಖ್ಯವಾಹಿನಿಯಲ್ಲಿ ಕಾಣುವುದು ತುಂಬಾ ವಿರಳ. ಆ ವಿರಳ ಗುಂಪಿನ ಪ್ರಕಾಶಮಾನ ನಕ್ಷತ್ರವೇ ಚಿತ್ರದುರ್ಗದ ಸಿರಿಯಜ್ಜಿ. ಸಾವಿರಗಟ್ಟಲೆ ಹಾಡುಗಳ ಖಣಿ. ಜಾನಪದ ಲೋಕದ ಅನರ್ಘ್ಯರತ್ನವಾಗಿ, ಹಳ್ಳಿಯಿಂದ ದಿಲ್ಲಿವರೆಗೆ ಹೆಸರು ಪಡೆದ ಸಿರಿಯಜ್ಜಿ ಇಂದು ನಮ್ಮೊಂದಿಗಿಲ್ಲ. ಆದರೆ ಆಕೆಯಿಂದ ನಾವುಗಳು ಕಲಿತು, ಕಂಡುಕೊಂಡಿರುವುದು ಅಷ್ಟಿಷ್ಟಲ್ಲ. ಜಾನಪದ ಸಾಹಿತ್ಯದ ಮೇರು ಪರ್ವತ ಇನ್ನೂ ಬದುಕಿರಬೇಕು ಎಂದು ನಾವುಗಳು ಅಪೇಕ್ಷಿಸುವಾಗಲೇ ( ದಿನಾಂಕ ೨-೪-೦೯ ರ ಬೆಳಗ್ಗೆ ) ಇಹಲೋಕ ತ್ಯಜಿಸಿದ್ದು ನಮ್ಮೆಲ್ಲರ ದೌರ್ಭಾಗ್ಯ.

ಚಿತ್ರದುರ್ಗದ ಪೂರ್ವದಂಚಿನ ಚಳ್ಳಕೆರೆ ತಾಲ್ಲೂಕಿನ ಯಲಗಟ್ಟೆ ಗೊಲ್ಲರಹಟ್ಟಿಗೆ ಸೇರಿದ, ಅದಕ್ಕೆ ಅತ್ಯಂತ ಹತ್ತಿರದಲ್ಲೇ ಇರುವ ಹಿರಿಯಟ್ಟಿ ಸಿರಿಯಜ್ಜಿಯ ಹುಟ್ಟೂರು. ಸಾಮಾನ್ಯವಾಗಿ ಎಲ್ಲಾ ಗೊಲ್ಲರಹಟ್ಟಿಗಳು ಜನವಸತಿ ನಾಗರಿಕ ಗ್ರಾಮಗಳಿಂದ ಸ್ವಲ್ಪ ದೂರದಲ್ಲಿರುತ್ತವೆ. ಈ ಹಟ್ಟಿಗಳಲ್ಲಿ ಗೊಲ್ಲರು ಮಾತ್ರ ಇರುತ್ತಾರೆ. ಅವರು ಕಟ್ಟುನಿಟ್ಟಿನ, ಜಿಗುಟು ಸ್ವಭಾವದವರಾಗಿರುತ್ತಾರೆ. ಅವರ ಸಂಸ್ಕೃತಿಯಲ್ಲಿ ಬರುವ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು, ಮದುವೆ, ದೇವರ ಉತ್ಸವ, ಜಾತ್ರೆ, ಸುಗ್ಗಿ ಹಬ್ಬಗಳು ಸೇರಿದಂತೆ ನಡೆವ ವಿವಿಧ ಕಾರ್ಯಕ್ರಮಗಳು ಇಂದಿಗೂ ತಮ್ಮತನವನ್ನು ಉಳಿಸಿಕೊಂಡು ಬಂದಿವೆ. ಹಾಗಾಗಿ ಒಂದು ಬುಡಕಟ್ಟಿನ ಬಹುಪಾಲು ಲಕ್ಷಣಗಳನ್ನು ಈಗಲೂ ಅಲ್ಲಿ ಉಳಿಸಿಕೊಳ್ಳಲಾಗಿದೆ. ಈ ಅಂಶಗಳಿಂದಲೇ ಈ ಸಮುದಾಯವನ್ನು 'ಜೀವಂತ ಪಳೆಯುಳಿಕೆ' ಎಂದು ಜಾನಪದ ವಿದ್ವಾಂಸರು ಗುರುತಿಸಿದ್ದಾರೆ.

ತಂದೆಯಂತೆ ಈಕೆಗೂ ಓದು ಹತ್ತಲಿಲ್ಲ ಎಂದು ಮನೆಯವರು ಕುರಿ ಕಾಯಲು ಹಚ್ಚಿದರು. ಬೆಳಿಗ್ಗೆಯೆಲ್ಲಾ ಪಶುಗಳನ್ನು ಮೇಯಿಸಲು ಕಾಡಿನಲ್ಲಿ ಅಲೆಯುತ್ತಿದ್ದಳು. ಸಂಜೆ ಮನೆಗೆ ಬಂದಾಗ ಬೀಸುವಕಲ್ಲಿನ ಪದಗಳನ್ನು ಕೇಳಿದರೆ ಸಾಕು ದಿನದ ಆಯಾಸವೆಲ್ಲ ಮರೆಯುತ್ತಿದ್ದಳು. ಅದೇನೋ ಸಿರಿಯಜ್ಜಿಗೆ ಹಾಡುಗಳನ್ನು ಕೇಳಿದರೆ ಕುಣಿಯಬೇಕೆನ್ನುವಷ್ಟು ಆಸೆ. ಅವರ ಮನೆಯಲ್ಲಿ ಅವರ ಅಜ್ಜಿ ಮತ್ತು ಅತ್ತೆ ಬಹಳ ಇಂಪಾಗಿ ಹಾಡುತ್ತಿದ್ದರು. ಅತ್ತೆಯಲ್ಲಿ ಪದಗಳ ಖಜಾನೆಯೇ ಅಡಗಿತ್ತು. ಆ ಬುಡಕಟ್ಟಿನಲ್ಲಿ ಬರುವ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು, ಮದುವೆ, ದೇವರ ಉತ್ಸವ, ಜಾತ್ರೆ, ಸುಗ್ಗಿ, ಹಬ್ಬಗಳು ಸೇರಿದಂತೆ ನಡೆವ ವಿವಿಧ ಕಾರ್ಯಕ್ರಮಗಳಲ್ಲಿ ಅವರು ಪದ ಹಾಡುತ್ತಿದ್ದರು. ಇದರಿಂದ ಹೆಚ್ಚು ಪ್ರೇರಿತಳಾದ ಸಿರಿಯಜ್ಜಿ ಹಾಡುಗಳನ್ನು ಕಲಿಯಬೇಕೆಂಬ ಉತ್ಕಟ ಆಸೆಯಿಂದ ತನಗೆ ಕಲಿಸಲು ಅವರಿಗೆ ದುಂಬಾಲುಬಿದ್ದಳು.

ಅತ್ತೆ ಕರಿಸಿರಿಯಜ್ಜಿಯು ಎತ್ತಪ್ಪ, ಜುಂಜಪ್ಪ, ಕೊಂಡದ ಕಾಟವ್ವ, ಗೋರ್ಲತ್ತು ಮಾರಕ್ಕ ಮುಂತಾದ ಅನೇಕ ದೇವರುಗಳ ಮೇಲೆ ಪದ ಹಾಡುತ್ತಿದ್ದಳು. ಅವರು ಅವು ಖಂಡಕಾವ್ಯಗಳು. ಮಹಾಕಾವ್ಯಗಳು ಎಂಬ ಪರಿವೆ ಇಲ್ಲದೆ ಹಾಡುತ್ತಿದ್ದರು. ಅಂದಿನ ದಿನಗಳಲ್ಲಿ ಮದುವೆಗಳಲ್ಲಿ ಮೈಕುಗಳಿರುತ್ತಿರಲಿಲ್ಲ. ಹಾಗಾಗಿ ಮದುವೆಯ ಪ್ರಾರಂಭದಿಂದ ಕೊನೆಯವರೆಗೂ ನಿರಂತರವಾಗಿ ಸೋಬಾನೆ ಪದಗಳನ್ನು ಹಾಡುತ್ತಿದ್ದರು. ಎಷ್ಟು ಹಾಡಿದರೂ ಇವರ ಪದಗಳು ಮುಗಿಯುತ್ತಲೇ ಇರಲಿಲ್ಲ. ಸಿರಿಯಜ್ಜಿಯು ಪ್ರಾರಂಭದಲ್ಲಿ ಅತ್ತೆ ಮತ್ತು ಅಜ್ಜಿಯರ ಜತೆ ಹಿಮ್ಮೇಳವಾಗಿ ಹಾಡಲು ಪ್ರಾರಂಭಿಸಿದಳು. ಹಾಡುತ್ತ ಹಾಡುತ್ತ ಆ ಪದಗಳು ಕಂಠಪಾಠವಾದುವು. ಅದರಲ್ಲೂ ನೆನಪಿನ ಶಕ್ತಿಯನ್ನ ದೈವದತ್ತವಾಗಿ ಪಡೆದಿದ್ದರಿಂದ ಒಂದು ಸಾರಿ ಕೇಳಿದರೆ ಸಾಕು ಅದನ್ನು ನೆನಪಿನಲ್ಲಿಟ್ಟುಕೊಳ್ಳುತ್ತಿದ್ದಳು. ಅಲ್ಪ ಸಮಯದಲ್ಲೇ ಸಿರಿಯಜ್ಜಿ ಮುಮ್ಮೇಳಗಾತಿಯಾದಳು.

ಆ ಗೊಲ್ಲರಿಗೆ ಎತ್ತಪ್ಪನ ಕುರಿತಾದ ಗೂಡಿನ ಹಬ್ಬ ಮಹತ್ವದ್ದು. ಎತ್ತಪ್ಪ ಕಾಡುಗೊಲ್ಲ ಜನಾಂಗಕ್ಕೆ ಸಂಸ್ಕೃತಿಯನ್ನು ಕೊಟ್ಟ ಆ ಬುಡಕಟ್ಟಿನ ಮೊದಲ ವ್ಯಕ್ತಿ. ಎತ್ತಪ್ಪನ ನಂತರ ಜುಂಜಪ್ಪ ಎಂಬ ಅತ್ಯಂತ ಜನಪ್ರಿಯ ಸಾಂಸ್ಕೃತಿಕ ವೀರನೂ ಬರುತ್ತಾನೆ. ಈ ಹಿರಿಯರ ನೆನಪಿನ ಹಬ್ಬಗಳಲ್ಲಿ ಕಂಬಿ ಪದಗಳನ್ನು ಹಾಡುತ್ತಾರೆ. ಈ ಹಾಡುಗಳು ಸಿರಿಯಜ್ಜಿಯ ರಕ್ತದಲ್ಲಿ ಬೆರೆತುಹೋಗಿದ್ದವು. ಈ ಮಹಾಕಾವ್ಯಗಳನ್ನು ಒಂದು ಅಕ್ಷರವೂ ತಪ್ಪಿಲ್ಲದಂತೆ ಹಾಡುವುದರಲ್ಲಿ ಸಿರಿಯಜ್ಜಿ ಎತ್ತಿದ ಕೈ. ಹಾಗಾಗಿ ಸಿರಿಯಜ್ಜಿಗೆ ಬದುಕೇ ಶಿಕ್ಷಣವಾಯಿತು.

ಹಾಡಿನ ಗೀಳನ್ನು ಹಚ್ಚಿಕೊಂಡಿದ್ದ ಈ ಅಜ್ಜಿ ತನಗೆ ದೈವದತ್ತವಾಗಿ ಬಂದ ನೆನಪಿನ ಬುತ್ತಿಯಿಂದ ಪದಗಳ ರಾಶಿಗಳನ್ನು ಕೂಡಿಹಾಕಿಕೊಂಡಳು. ಒಂದು ಎರಡಲ್ಲ - ಬಿಡಿಹಾಡುಗಳು, ಮದುವೆ ಹಾಡುಗಳು, ಸಿರಿಯಣ್ಣ - ನಿಂಗಣ್ಣ, ಕೊಂಡದ ಕಾಟವ್ವ, ಚಿತ್ತವ್ವನಂಥ ಈರಗಾರ- ಈರಗಾತಿಯರ ಬಗ್ಗೆ, ಎತ್ತಪ್ಪ - ಜುಂಜಪ್ಪನಂಥ ಕುಲದೇವತೆಗಳ ಬಗ್ಗೆ – ಈ ರೀತಿ ಖಂಡಕಾವ್ಯದಿಂದ ಹಿಡಿದು ಮಹಾಕಾವ್ಯದ ವರೆಗೂ ತನ್ನ ಪ್ರಭುತ್ವ ಮೆರೆದಳು. ಏಳು ದಿನಗಳ ಮದುವೆ ಶಾಸ್ತ್ರದುದ್ದಕ್ಕೂ ಸೋಬಾನೆ ಪದಗಳು ಸಾಲುಗಟ್ಟಿ ಅಜ್ಜಿಯ ಕಂಠದಿಂದ ಹೊರಬರುತ್ತಿದ್ದವು. ಅಲ್ಲಿ ಹಾಡುಗಳನ್ನು ಬಿಚ್ಚಿಡುತ್ತಾ ಕೇಳುಗರನ್ನು ಮನಸೂರೆಗೊಳಿಸುತ್ತಿದ್ದಳು. ಹಾಗಾಗಿ ಸಾವಿರಾರು ಜಾನಪದದ ಹಾಡುಗಳಿಗೆ ಜೀವ ತುಂಬಿ ಜನಪದದ ವೈಶಿಷ್ಟ್ಯತೆ ಮತ್ತು ವೈವಿಧ್ಯತೆಯನ್ನು ನಾಡಿಗೆ ಪರಿಚಯಿಸುವಲ್ಲಿ ಈ ಅಜ್ಜಿಯ ಪಾತ್ರ ಹಿರಿದು.



ಆಕೆಯ ಜೀವನಶೈಲಿಯಲ್ಲಿ ಹಾಡು ಬೆರೆತು ಹೋಗಿತ್ತು. ಗದ್ದೆ ಕೆಲಸಗಳಲ್ಲಿ ನಾಟಿಮಾಡುವುದು, ಕಳೆ ತೆಗೆಯುವುದು, ಕಾಳು ತೂರುವುದು, ಕಪಿಲೆ ಹೊಡೆಯುವುದು, ದಾರಿಯಲ್ಲಿ ಹೋಗುವಾಗ ಗೆಳತಿಯರ ಜೊತೆ– ಹೀಗೆ ಸದಾ ಹಾಡುತ್ತಾ ಇರುತ್ತಿದ್ದಳು. ಒಂದು ಅಂದಾಜಿನ ಪ್ರಕಾರ ಈಕೆ ೨೦ ಸಾವಿರಕ್ಕೂ ಹೆಚ್ಚಿನ ಹಾಡುಗಳ ಒಡತಿಯಾಗಿದ್ದಳು. ಸಿರಿಯಜ್ಜಿಗೆ ಕುಂತರೂ, ನಿಂತರೂ, ನಡೆದರೂ, ಬದುಕು ಮಾಡಿದರೂ ಹಾಡೇ ಹಾಡು. ಹಾಗಾಗಿ ಆಕೆಯ ಬದುಕೇ ಒಂದು ಹಾಡಾಯಿತು.

ಹಿರಿಯಟ್ಟಿಯಿಂದ ಒಂದು ಕಿ. ಮೀ. ದೂರದಲ್ಲಿರುವ ಯಲಗಟ್ಟಿ ಗೊಲ್ಲರಹಟ್ಟಿಯ ತಿಪ್ಪೇಸ್ವಾಮಿಯೊಂದಿಗೆ ಸಿರಿಯಜ್ಜಿಯ ಮದುವೆಯಾಯಿತು. ಚಿಕ್ಕವಳಾದ್ದರಿಂದ ಮದುವೆಯಾದ ಕೆಲ ವರ್ಷನಂತರ ಗಂಡನ ಮನೆಗೆ ಹೋದಳು. ಅಲ್ಲಿಗೆ ಹೋದ ಮೇಲೆ ಚಿತ್ರಲಿಂಗ, ನರಸಿಂಹಸ್ವಾಮಿ, ಕರಿಯಣ್ಣ ದೇವರುಗಳ ಮೇಲೆ ಪದ ಕಲಿತಳು. ಗಂಡನ ಮನೆಯಲ್ಲಿ ಬಡತನ ಹೆಚ್ಚಿದ್ದರಿಂದ ಕೂಲಿಗೆ ಹೋಗಲೇಬೇಕಾಗಿತ್ತು. ಆದರೆ ಅಜ್ಜಿಗೆ ಅದಕ್ಕಿಂತ ಮುಖ್ಯವಾಗಿ ಜೊತೆಗಾರರ ಸಂಗಡ ಪದ ಹಾಡುತ್ತಾ ಕೆಲಸ ಮಾಡಬಹುದಲ್ಲ ಎಂಬುದೇ ಹೆಚ್ಚು ಆಕರ್ಷಣೀಯವಾಗಿತ್ತು.

ಮದುವೆಯಾದ ಕೆಲ ವರ್ಷದ ನಂತರ ಈರಣ್ಣ, ಕ್ಯಾತಣ್ಣ ಎಂಬ ಮಕ್ಕಳು ಜನಿಸಿದರು. ೧೯೬೦-೬೫ರ ಭೀಕರ ಬರಗಾಲದ ಕಾಲದಲ್ಲಿ ಗಂಡನು ಅಕಾಲ ಮರಣಕ್ಕೆ ತುತ್ತಾದನು. ಗಂಡ ಸತ್ತ ಮೇಲೆ ಹಾಡೇ ಸಿರಿಯಜ್ಜಿಯ ಸಂಗಾತಿಯಾಯಿತು. ಅದು ಅಜ್ಜಿಯ ಉಸಿರಾಗಿ, ಬದುಕಾಯಿತು. ತನ್ನ ಕಷ್ಟವನ್ನೆಲ್ಲಾ ಹಾಡಿನಲ್ಲಿ ಮರೆತು ಆನಂದ ಪಡೆಯುತ್ತಿದ್ದಳು. ಸಿರಿಯಜ್ಜಿ ಜೀವನ ಶಾಲೆಯಲ್ಲಿ ಕಲಿಯುತ್ತಾ ವಿದ್ಯೆಯ ಪರ್ವತವೇ ಆಗಿ ಜಾನಪದ ಸರಸ್ವತಿ ಎಂಬಂತಾದಳು.

ಸಿರಿಯಜ್ಜಿ ಬರೀ ಹಾಡುಗಾರ್ತಿಯಾಗಿರಲಿಲ್ಲ. ಜೊತೆಗೆ ಕಾವ್ಯಗಳನ್ನು ಕಟ್ಟುವ ಪ್ರತಿಭೆಯನ್ನೂ ಮೈಗೂಡಿಸಿಕೊಂಡಿದ್ದಳು. ಹಟ್ಟಿಯಲ್ಲಿ ಬೆಳೆದುಬಂದ ಈಕೆ ಸಹಜವಾಗಿ ಕೃಷಿ ಮತ್ತು ಪಶುಪಾಲನೆಯಲ್ಲಿ ಹೆಚ್ಚು ತೊಡಗಿಕೊಂಡವಳು. ಈ ಹಿನ್ನೆಲೆಯಲ್ಲಿ ಆಕೆ ಕೃಷಿಯ ಆಚರಣೆಗಳನ್ನು, ಪಶುಪಾಲಕರ ನಡೆ, ಪಶುಪಾಲನೆ ಮತ್ತು ಅವುಗಳ ಮಹತ್ವವನ್ನು ತನ್ನ ಹಾಡುಗಳಲ್ಲಿ ಪ್ರಚುರಪಡಿಸಿದಳು. ಪರಿಸರ ಮತ್ತು ನಮ್ಮಗಳ ಸಂಬಂಧವನ್ನು ಅಜ್ಜಿಯ ಹಾಡುಗಳಲ್ಲೇ ಕೇಳಬೇಕು. ಆಕೆಯ ಹಾಡುಗಳಲ್ಲಿ ಬರುವ ಪರಿಸರ ಪ್ರಜ್ಞೆ, ನಿಸರ್ಗ ಪ್ರೇಮ ಅಕ್ಷರ ಕಲಿತು, ಬುದ್ಧಿವಂತರು ಎನಿಸಿಕೊಂಡ ನಾವುಗಳು ನಾಚುವಂತಿವೆ.

ಹಾಗೆ ನೋಡಿದರೆ ಹಟ್ಟಿ ಸಂಸ್ಕೃತಿ, ಅಲ್ಲಿರುವ ಮನೆಗಳ ಪರಿಸರ ಇಂದಿಗೂ ನಗರೀಕರಣದ ಪ್ರಭಾವ ಮತ್ತು ಹೊಡೆತಕ್ಕೆ ಸಿಲುಕಿಲ್ಲ ಎಂಬುದಕ್ಕೆ ಸಿರಿಯಜ್ಜಿಯೇ ಉತ್ತಮ ಉದಾಹರಣೆ. ಒಂದು ಪಕ್ಷ ನಗರ ಸಂಸ್ಕೃತಿಗೆ ಹಟ್ಟಿಗಳು ಮೈಯೊಡ್ಡಿದ್ದರೆ ಸಿರಿಯಜ್ಜಿಯ ವ್ಯಕ್ತಿತ್ವವು ಹಾಡಿನ ಗಣಿಯಾಗಿ ಬೆಳೆಯುತ್ತಿರಲಿಲ್ಲ. ಆಕೆಗೆ ಅಲ್ಲಿನ ಪರಿಸರ ಪೂರಕವಾದುದರಿಂದ ಮೌಖಿಕ ಸಾಹಿತ್ಯದ ಗಣಿಯಾಗಿ ಮೆರೆದಳು. ಅಲ್ಲದೆ ಅಜ್ಜಿ ಎಂದೂ ಖ್ಯಾತಿಯನ್ನು ಅರಸಿ ಹೋಗಲಿಲ್ಲ. ತನ್ನ ಸಾಹಿತ್ಯ ನಿಧಿಯನ್ನು ವೇದಿಕೆಗಳಲ್ಲಿ ಹೇಳಿಕೊಂಡವಳೇ ಅಲ್ಲ. ತನ್ನ ಸಮುದಾಯದ ಕಾರ್ಯಕ್ರಮಗಳಲ್ಲಿ ಮಾತ್ರ ಈಕೆ ರಾತ್ರಿ-ಹಗಲೆನ್ನದೇ ನಿರಂತರವಾಗಿ, ನಿರರ್ಗಳವಾಗಿ ಸಹಸ್ರಾರು ಹಾಡುಗಳನ್ನು ಹಾಡುತ್ತಿದ್ದಳು.

ಬೆಳಗೆರೆ ಕೃಷ್ಣಶಾಸ್ತ್ರಿಗಳು ಈಕೆಯಲ್ಲಿನ ಪ್ರತಿಭೆಯನ್ನು ಗುರುತಿಸಿದರು. ಸಿರಿಯಜ್ಜಿಯ ಜಾನಪದ ಹಾಡುಗಳ ಸಂಗ್ರಹ ಕಾರ್ಯ ನಡೆಯಿತು. ಅದರಿಂದಾಗಿ 'ಮಹಾಸತಿ ಕಾಟವ್ವ' ಮತ್ತು 'ಕತ್ತಲೆ ದಾರಿದೂರ', 'ಜನಪದ ವೀರ ಗೀತೆಗಳು' ಎಂಬ ಕಥನ ಗೀತೆಗಳು ಎಲ್ಲರ ಮನದಲ್ಲಿ ಮನೆಮಾಡಿವೆ. ಗೊಲ್ಲ ಜನಾಂಗದ ದೇವರ ಹಾಡುಗಳು ಜನರನ್ನು ಹೆಚ್ಚು ಆಕರ್ಷಿಸಲು ಸಾಧ್ಯವಾಯಿತು. ಇತ್ತೀಚೆಗೆ ಖ್ಯಾತ ಸಂಶೋಧಕ ಹನೂರ ಕೃಷ್ಣಮೂರ್ತಿ ಅವರು ಸಿರಿಯಜ್ಜಿ ಕುರಿತು 'ಸಾವಿರದ ಸಿರಿ ಬೆಳಗು' ಎಂಬ ಕೃತಿ ರಚಿಸಿದ್ದಾರೆ. ಡಾ॥ ಮೀರಾಸಾಬಿಹಳ್ಳಿ ಶಿವಣ್ಣ ಅವರು ಗಾಂಧಿ ಅಧ್ಯಯನ ಕೇಂದ್ರ ಮಾಲಿಕೆಗಾಗಿ ಸಿರಿಯಜ್ಜಿ ಕುರಿತು ಕೃತಿ ರಚಿಸಿದ್ದಾರೆ. ಈ ರೀತಿ ಜಾನಪದ ಸಂಗ್ರಹಕಾರರಿಗೆ ಮತ್ತು ಸಾಹಿತಿಗಳಿಗೆ ಮಾಹಿತಿ ನೀಡಿ ಸಾಂಸ್ಕೃತಿಕ ಲೋಕದ ಧ್ರುವತಾರೆಯಾದಳು ಈ ಅಜ್ಜಿ.

ಜಾನಪದ ಕಂಪ್ಯೂಟರ್ ಎಂದೇ ಖ್ಯಾತಿ ಪಡೆದ ಸಿರಿಯಜ್ಜಿಯು ಜಾನಪದ ಸೊಗಡು-ಸೊಬಗನ್ನು ತನ್ನ ಸಿರಿಕಂಠದಿಂದ ಹಾಡಿ, ನಾಡಿನಾದ್ಯಂತ ಮನೆ ಮಾತಾಗಿದ್ದಳು. ಅಜ್ಜಿಯ ಅಮೋಘ ಕಂಠಸಿರಿಗಾಗಿ ಅಂದಿನ ಮುಖ್ಯಮಂತ್ರಿಗಳಾದ ಗುಂಡೂರಾಯರು 'ಜನಪದ ಸಿರಿ' (೧೯೭೭-೭೮) ಎಂಬ ಅನ್ವರ್ಥಕ ನಾಮದ ಬಿರುದನ್ನಿತ್ತು ಸನ್ಮಾನಿಸಿದ್ದರು. ೧೯೮೨ರಲ್ಲಿ ಅಕಾಡೆಮಿ ಪ್ರಶಸ್ತಿಯೂ ಸಿರಿಯಜ್ಜಿಯ ಕೈ ಸೇರಿತು. ಜಾನಪದ ಲೋಕಕ್ಕೆ ಸಿರಿಯಜ್ಜಿಯ ಕೊಡುಗೆ ಗಮನಿಸಿದ ರಾಜ್ಯ ಸರ್ಕಾರ ೨೦೦೦ದಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿತು.

ಸಿರಿಯಜ್ಜಿಯ ಸಾಧನೆ ಎಲ್ಲೆಲ್ಲೂ ಮನೆಮಾತಾಯಿತು. ಅದು ವಿಶ್ವವಿದ್ಯಾಲಯದ ಕದವನ್ನೂ ತಟ್ಟಿತು. ಅಜ್ಜಿಯ ಜಾನಪದ ದೈತ್ಯ ಪ್ರತಿಭೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರತಿಷ್ಠಿತ 'ನಾಡೋಜ' ಗೌರವವನ್ನು ೨೦೦೪ರಲ್ಲಿ ನೀಡಿ ಪುರಸ್ಕರಿಸಿತು. ಅಕ್ಷರವೇ ಗೊತ್ತಿಲ್ಲದ ಒಬ್ಬ ಹೆಣ್ಣುಮಗಳು ಕನ್ನಡ ನಾಡನ್ನು ಶ್ರೀಮಂತಗೊಳಿಸಿ, ಆದಿಕವಿ ಪಂಪನ ಹೆಸರಲ್ಲಿ ನೀಡುವ ಗೌರವಕ್ಕೆ ಪಾತ್ರವಾದುದಕ್ಕೆ ಇಡೀ ನಾಡೇ ಹೆಮ್ಮೆಪಟ್ಟಿತು. ೨೦೦೬ರಲ್ಲಿ 'ಜಾನಪದ ಶ್ರೀ' ಪ್ರಶಸ್ತಿಯೂ ಸಂದಿತು. ಕಳೆದ ವರ್ಷ ಆಳ್ವಾಸ್ ನುಡಿಸಿರಿ ಪ್ರಶಸ್ತಿಯು ಸಿರಿಯಜ್ಜಿಯ ಮುಡಿಗೇರಿತು.

ಅಜ್ಜಿಯನ್ನು 'ನಡೆದಾಡುವ ಜಾನಪದ ಕೋಶ' ಎಂದೇ ಪರಿಗಣಿಸಿ ಅನೇಕ ಸಂಘ - ಸಂಸ್ಥೆಗಳು, ಮೇಳಗಳು, ಮಠಮಾನ್ಯಗಳು ನೀಡಿರುವ ಸನ್ಮಾನಗಳಿಗೆ ಲೆಕ್ಕವಿಲ್ಲ. ಈ ರೀತಿ ಮಾನ-ಸನ್ಮಾನಗಳು ಹುಡುಕಿಕೊಂಡು ಜಾನಪದ ಸರಸ್ವತಿಗೆ ಸಂದಿದ್ದು ದೇಸಿ ಸಂಸ್ಕೃತಿಗೆ ಸಂದ ಗೌರವವೇ ಆಗಿದೆ.

ಸಿರಿಯಜ್ಜಿ ನಮ್ಮ ನಾಡಿನ ಜಾನಪದ ಲೋಕಕ್ಕೆ ಬೆಲೆ ಕಟ್ಟಲಾಗದಷ್ಟು ಅಮೂಲ್ಯವಾದ ಸಾಹಿತ್ಯ ಭಂಡಾರವನ್ನು ಕೊಡುಗೆಯಾಗಿ ಕೊಟ್ಟಿದ್ದಾಳೆ. ನಮ್ಮ ಜಾನಪದದಲ್ಲಿ ಇಂತಹ ಪ್ರತಿಭೆಗಳನ್ನು ಗುರುತಿಸಿ, ಪ್ರೋತ್ಸಾಹಿಸಿದ್ದು ಕಡಿಮೆಯೆ. ಸಿರಿಯಜ್ಜಿಯಂತಹ ಅನೇಕ ಪ್ರತಿಭೆಗಳುಳ್ಳ ಖಣಿಗಳು ಹಟ್ಟಿಗಳಲ್ಲಿ ಅಪಾರವಾಗಿದ್ದಾರೆ. ಅವರು ತಮ್ಮ ಹಾಡಿನ ಮಹತ್ವವೇ ತಿಳಿಯದೇ ಬದುಕುತ್ತಿರುವ ಮುಗ್ಧರು. ಇಂತಹ ಹಾಡುಗಾರರು ಮುಂದೆ ಸಿಗುವುದು ತುಂಬಾ ದುಸ್ತರವಾಗಲಿದೆ. ಇಂತವರನ್ನು ಉಳಿಸಿ-ಬೆಳೆಸುವ ಸಾಂಘಿಕ ಪ್ರಯತ್ನಗಳು ಸರಿಯಾಗಿ ನಡೆಯುತ್ತಿಲ್ಲ. ಅದಕ್ಕಾಗಿ ನಾವು ತಕ್ಷಣ ಎಚ್ಚೆತ್ತುಕೊಂಡು ಇಂತವರ ಕುರಿತು ಸಂಶೋಧನಾ ಪುಸ್ತಕಗಳನ್ನು ರಚಿಸುವುದಲ್ಲದೆ, ಉಳಿಕೆಗೆ ಬೇಕಾದ ಎಲ್ಲ ಕ್ರಮಗಳನ್ನು ಕೈಗೊಳ್ಳಬೇಕಿದೆ.

**ಪರಮೇಶ್ವರಯ್ಯ ಸೊಪ್ಪಿಮಠ**
ಶಿಕ್ಷಕರು, ಕೆ.ವಿ.ಓ.ಆರ್. ಕಾಲೊನಿ, ಹಗರಿಬೊಮ್ಮನಹಳ್ಳಿ
ಬಳ್ಳಾರಿ ಜಿಲ್ಲೆ - ೫೮೩ ೨೧೨

ಉಗ್ರರು ನುಸುಳುವ ಸಾಧ್ಯತೆ
'ಕರಾವಳಿ ಪ್ರದೇಶದಲಿ ಕಟ್ಟೆಚ್ಚರ'

ಬಿ. ವಿಲ್ಸನ್

ನೀವು ನಿಶ್ಚಿಂತೆಯಿಂದಿರಿ ಸಾರ್...
ಮೀನು ಎತ್ತಿದಂತೆ ಉಗ್ರರನ್ನು
ಎತ್ತಿ ಹಾಕುತ್ತೇನೆ ಸಾರ್...!

# ಎರಡು ವಿರುದ್ಧ ವ್ಯವಸ್ಥೆಗಳ ಒಡಂಬಡಿಕೆ - ಒಂದು ವಿಶ್ಲೇಷಣೆ

**ಬಿ. ಎನ್. ವೇಣುಗೋಪಾಲ್**

ಪ್ರಪಂಚದಲ್ಲಿ ಅನೇಕ ಅಭಿವೃದ್ಧಿಶೀಲ ದೇಶಗಳು ತಮ್ಮ ಸರ್ವತೋಭಿಮುಖ ಅಭಿವೃದ್ಧಿಗೆ ಈಗಾಗಲೇ ಹಲವಾರು ಅಭಿವೃದ್ಧಿ ಮಂತ್ರಗಳನ್ನು ಜಪಿಸುತ್ತಿವೆ. ಈ ಮಂತ್ರಗಳು ಅಭಿವೃದ್ಧಿ ಹೊಂದಿರುವಂತಹ ಕೆಲವೇ ದೇಶಗಳದ್ದು. ಅದರಲ್ಲೂ ಇಂತಹ ಮಂತ್ರಗಳನ್ನು ಆಕರ್ಷಕವಾಗಿ ವಿವಿಧ ಮಾದರಿಗಳ ಮೂಲಕ ಉತ್ಸಾಹದಿಂದ ಬೋಧಿಸುತ್ತಿರುವುದು ಅಮೆರಿಕಾ ಎಂಬ ಉದ್ದಾಮ ಪಂಡಿತ. ಈ ಪಂಡಿತನಿಗೆ ಇತರೆ ಎಂಟು ಮಂದಿ ಶಿಷ್ಯ-ಪಂಡಿತರ ಬಳಗವೇ ಇದೆ. ಈ ಬಳಗಕ್ಕೆ ಪ್ರಪಂಚದಾದ್ಯಂತ ಅನೇಕ ದೇಶಗಳು ಭಕ್ತರಾಗಿದ್ದಾರೆ. ಇವರೆಲ್ಲರೂ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳ ನಿರ್ವಹಣೆ, ಉದಾರೀಕರಣ, ಖಾಸಗೀಕರಣ ಹಾಗೂ ಜಾಗತೀಕರಣಗಳ ಜೊತೆಗೆ ಅನೇಕ ಉಪ-ಕರಣಗಳೊಂದಿಗೆ ಪ್ರಮಾಣ ಮಾಡುತ್ತಾರೆ. ಆದರೆ ಇವೆಲ್ಲವೂ ಬಂಡವಾಳಶಾಹಿ ವ್ಯವಸ್ಥೆಯ ವಿವಿಧ ಮುಖಗಳೇ ಆಗಿರುವುದು ಅತ್ಯಂತ ಆಘಾತಕಾರಿ ಅಂಶ.

ಬಂಡವಾಳಶಾಹಿಯು (ಅ)ವ್ಯವಸ್ಥೆಯಡಿಯಲ್ಲಿ ವಿವಿಧ ಮಾದರಿಯ ಅಭಿವೃದ್ಧಿ ಕಾರ್ಯಯೋಜನೆಗಳಿಗೆ ಅತಿ ಹೆಚ್ಚು ಪ್ರಮಾಣದ ಸಂಪನ್ಮೂಲಗಳನ್ನು ಕ್ರೋಡೀಕರಿಸುವುದರ ಮೂಲಕ ವ್ಯಯಿಸುತ್ತದೆ. ಈ ಕಾರ್ಯಯೋಜನೆಗಳಿಂದ ಹೊರಬಂದ ಫಲಿತಾಂಶವು ಯಾರಿಗೆ ಎಷ್ಟು ತಲುಪುತ್ತಿದೆ ಎಂಬ ಪ್ರಶ್ನೆಗೆ ಬಹುಶಃ ಉತ್ತರ ಸಿಗದು. ಇನ್ನೊಂದರ್ಥದಲ್ಲಿ ಪ್ರಶ್ನಿಸುವ ಪ್ರಯತ್ನವು ಒಂದು ಅಪರಾಧವೆಂದೆನಿಸಿಬಿಡುತ್ತದೆ. ಪ್ರಶ್ನಿಸಿದವರಿಗೆ ಅಭಿವೃದ್ಧಿ ವಿರೋಧಿಗಳು ಎಂಬ ಹಣೆಪಟ್ಟಿ ಕಟ್ಟಲಾಗುತ್ತದೆ. ಪ್ರಸ್ತುತ ಅಭಿವೃದ್ಧಿ ಮಾದರಿಯಲ್ಲಿ 'ಸಾರ್ವಜನಿಕ- ಖಾಸಗಿ ಸಹಭಾಗಿತ್ವ' ಎಂಬ ಎರಡು ವಿರುದ್ಧ ವ್ಯವಸ್ಥೆಗಳು ಒಂದಾಗಿರುವುದನ್ನು ನೋಡಬಹುದು. ಈ ಎರಡು ವ್ಯವಸ್ಥೆಗಳ ಮೂಲ ಉದ್ದೇಶವು ಬೇರೆಯೆ ಆದರೂ ಅವುಗಳ ಆಶಯಗಳು ಒಂದೇ ಎಂಬಂತೆ ತೋರಿಬರುತ್ತಿದೆ. ಇದರಲ್ಲಿ ಸ್ಥಳೀಯ ಹಾಗೂ ವಿದೇಶಿ ಬಂಡವಾಳಶಾಹಿ ಸಂಸ್ಥೆಗಳ ನೇರ ಹಸ್ತಕ್ಷೇಪ, ಹೆಚ್ಚು ಲಾಭಗಳಿಸುವ ಹುನ್ನಾರ ಇವೇ ಮೊದಲಾದ ಅಂಶಗಳಿರುತ್ತವೆ. ಈ ಮಾದರಿಯಲ್ಲಿ ಯಾರಿಗೆ ಎಷ್ಟು ಲಾಭ ಮತ್ತು ಎಷ್ಟು ನಷ್ಟ ಎಂಬುದರ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನೂ ಈ ಲೇಖನದಲ್ಲಿ ಮಾಡಲಾಗಿದೆ.

### (ಅ) ಎರಡು ವಿರುದ್ಧ ವ್ಯವಸ್ಥೆಗಳು

ತಮ್ಮ ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ಪ್ರಜಾಪ್ರಭುತ್ವವೆಂದು ಘೋಷಿಸಿಕೊಂಡಿರುವ ಪ್ರಪಂಚದ ಅನೇಕ ದೇಶಗಳು ಸ್ವಾತಂತ್ರ್ಯದ ಹೆಸರಿನಡಿ ಎಲ್ಲಾ ಚಟುವಟಿಕೆಗಳನ್ನು ಖಾಸಗಿ ವ್ಯಕ್ತಿ/ಸಂಸ್ಥೆಗಳಿಗೆ ಹಣ, ಅಧಿಕಾರದ ಜೊತೆಗೆ ಅನೇಕ ಸಂಪನ್ಮೂಲಗಳನ್ನು ದಯಪಾಲಿಸಿವೆ. ಇಲ್ಲಿ ಸರ್ಕಾರದ ಪ್ರತ್ಯಕ್ಷ ಅಥವಾ ಪರೋಕ್ಷ ಮಧ್ಯಪ್ರವೇಶ ಅತ್ಯಲ್ಪ. ಈ ತೆರನಾದ ಪರಿಸರವು ಬಂಡವಾಳಶಾಹಿ ವ್ಯವಸ್ಥೆಗೆ ಭದ್ರವಾದ ಬುನಾದಿಯನ್ನು ನಿರ್ಮಿಸಿಕೊಟ್ಟಿರುವುದಲ್ಲದೆ, ಅಲ್ಲಿ ಲಭ್ಯವಿರುವ ಉತ್ಪಾದನಾಂಗಗಳನ್ನು ಯಾವುದೇ ಏಕವ್ಯಕ್ತಿ ಅಥವಾ ಸಂಘಗಳು ಬಳಸಿಕೊಂಡು ಸರಕು-ಸೇವೆಗಳನ್ನು ಯಥೇಚ್ಛವಾಗಿ ಉತ್ಪಾದನೆ ಮಾಡುವುದರ ಮೂಲಕ ಅತಿ ಹೆಚ್ಚು ಲಾಭ ಪಡೆಯಬಹುದಾಗಿದೆ. ಈ ವ್ಯವಸ್ಥೆಯಲ್ಲಿ ಎಲ್ಲ ಚಟುವಟಿಕೆಗಳನ್ನು ಮುಕ್ತ ಮಾರುಕಟ್ಟೆ ಪೂರೈಕೆ, ಬೇಡಿಕೆ ಹಾಗೂ ಲಾಭದ ದೃಷ್ಟಿಯಿಂದ ಮಾಪನ ಮಾಡಲಾಗುತ್ತದೆ. ಹೂಡಿಕೆ, ಸರಕು-ಸೇವೆಗಳಿಗೆ ಮಾರುಕಟ್ಟೆಗಳು ಹುಟ್ಟಿ ಅನೇಕ ವೇಳೆ ಮರು ಹುಟ್ಟುವುದರೊಂದಿಗೆ ಸಾವನ್ನಪ್ಪುತ್ತವೆ. ಆದರೆ ವ್ಯವಸ್ಥೆಯು ಮಾತ್ರ ಚುರುಕಾಗಿ ಮುಂದಿನ ಕಾರ್ಯ ಚಟುವಟಿಕೆಗಳಿಗೆ ತನ್ನನ್ನು ಅಣಿಮಾಡಿಕೊಳ್ಳುತ್ತಾ ಮುನ್ನುಗ್ಗುತ್ತದೆ. ಆದರೆ ಇನ್ನೊಂದು ವ್ಯವಸ್ಥೆಯು ಈ ಮೇಲೆ ನಮೂದಿಸಿರುವ ಲಕ್ಷಣಗಳಿಗೆ ತದ್ವಿರುದ್ಧವಾಗಿರುತ್ತದೆ. ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯು ಬಹು ಸಕ್ರಿಯವಾಗಿ ಜನಪರವಾಗಿದ್ದು, ಅಲ್ಲಿ ದೊರೆಯುವ ಸಂಪನ್ಮೂಲಗಳ ಕ್ರೋಡೀಕರಣ, ಉತ್ಪಾದನೆ, ಹಂಚಿಕೆ, ವಿನಿಮಯ ಹಾಗೂ ಅನುಭೋಗಗಳನ್ನು ಸಮನಾಗಿಸಿ ಸಮಾನತೆಯನ್ನು ದೃಢಪಡಿಸುತ್ತದೆ. ಇಲ್ಲಿ ಯಾವ ಲಾಭಕೋರತನವೂ ಕಾಣಬರುವ ಲಕ್ಷಣಗಳಿರುವುದಿಲ್ಲ, ಆದರೆ ಉತ್ಪಾದನಾ ವೆಚ್ಚವನ್ನು ಪಡೆಯುವ ದೃಷ್ಟಿಯಿಂದ ಒಂದು ನಿರ್ದಿಷ್ಟ ಬೆಲೆಗೆ ಸರಕು ಸೇವೆಗಳನ್ನು ಮಾರಾಟ ಮಾಡಲೇ ಬೇಕಾಗುತ್ತದೆ. ಈ ರೀತಿಯಾದ ವಾಸ್ತವತೆಯನ್ನು ಕೇವಲ ಕಾಲ್ಪನಿಕವಾದುದೆಂದು ಪಾಶ್ಚಿಮಾತ್ಯ ದೇಶಗಳು ಪ್ರಚಾರ ಮಾಡುತ್ತಿವೆ. ಈ ಎರಡೂ ವ್ಯವಸ್ಥೆಗಳನ್ನು ಒಳಹೊಕ್ಕು ವಿಶ್ಲೇಷಿಸಿದರೆ, ಪ್ರತಿಯೊಂದು ಹಂತದಲ್ಲೂ ಅವುಗಳ ಕಾರ್ಯಚಟುವಟಿಕೆ ಹಾಗೂ ಉದ್ದೇಶಗಳಲ್ಲಿ ಭಿನ್ನತೆ ತೋರಿಬರುತ್ತದೆ. ಕೆಲವು ಸಂದರ್ಭಗಳಲ್ಲಿ ಈ ಎರಡೂ ವ್ಯವಸ್ಥೆಗಳು ಒಂದುಗೂಡುವುದರೊಂದಿಗೆ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳುವುದರ ಮೂಲಕ ಕಾರ್ಯ ಪ್ರವೃತ್ತವಾಗುತ್ತವೆ. ಜನಸಮುದಾಯವು ಅಭಿವೃದ್ಧಿಯ ಫಲವನ್ನು ಅನುಭವಿಸುವ ಕಾತರದಲ್ಲಿ ಬೇರೆಲ್ಲ ವಿಚಾರಗಳಿಂದ ವಿಮುಖರಾಗುತ್ತಾರೆ. ಈ ಹಾದಿಯಲ್ಲಿ ಬಂಡವಾಳಶಾಹಿ ಹಾಗೂ ಸರ್ಕಾರಗಳಿಗೆ ಒಂದು ಉತ್ತಮ ಹಾದಿಯಾಗುವುದರೊಂದಿಗೆ ಅವರ ಕಾರ್ಯಸಿದ್ಧಿಗೆ ಅನುಕೂಲವಾಗುತ್ತದೆ. ಈ (ಬೇ)ಜವಾಬ್ದಾರಿ ಚಟುವಟಿಕೆಯನ್ನು ಪ್ರಗತಿಪರ ಎಂದು ಬಿಂಬಿಸಲಾಗುತ್ತದೆ. ಈ ಅಂಶಗಳು ಅನೇಕ ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತವೆ. ಮೊದಲನೆಯದಾಗಿ, ಜನರಿಂದ ಆರಿಸಿ ಬಂದ ಸರ್ಕಾರಗಳು ಘನ ಉದ್ದೇಶವಾದ ಸೇವಾ ತತ್ಪರತೆಯಿಂದ ಕೂಡಿರಬೇಕೆ ವಿನಾ ಲಾಭಕೋರರೊಂದಿಗೆ ಕೈಜೋಡಿಸುವುದು ಸೂಕ್ತವೆ? ಈ ರೀತಿಯಾದ ಯೋಜನೆಗಳು ಖಾಸಗಿ ಬಂಡವಾಳಶಾಹಿಗಳನ್ನು ಪುಷ್ಟೀಕರಿಸುವುದಿದೆ. ಅಭಿವೃದ್ಧಿ ಎಂಬುದನ್ನು ಸರ್ಕಾರದ ವತಿಯಿಂದ ಪೂರೈಸಲು ಸಾಧ್ಯವೆ? ಅಥವಾ ಬಂಡವಾಳದಿಂದ ಅಭಿವೃದ್ಧಿ ಸೌಕರ್ಯಗಳಿಗೆ ಖಾಸಗಿ ಸಂಸ್ಥೆಗಳು ಗ್ರಾಹಕರುಗಳಿಗೆ ವಿಧಿಸುವ ಬೆಲೆಯೇನು?, ಅಭಿವೃದ್ಧಿ ಯೋಜನೆಗಳ ವೆಚ್ಚ ಹಾಗೂ ಗುಣಮಟ್ಟವೇನು ಎನ್ನುವುದರ ಜೊತೆಗೆ ಅವುಗಳನ್ನು ಅಳೆಯುವ ವಿಧಾನವೇನು, ಎಂಬಿತ್ಯಾದಿ ಪ್ರಶ್ನೆಗಳಿಗೆ ಪ್ರಾಯಶಃ ಉತ್ತರವನ್ನು ಜನರು ಕಂಡುಕೊಳ್ಳುವುದು ಅತ್ಯವಶ್ಯಕವೆನಿಸುತ್ತದೆ.

### (ಆ) ಖಾಸಗಿ - ಸಾರ್ವಜನಿಕ ವ್ಯವಸ್ಥೆಯ ಹುಟ್ಟು

ಈ ವ್ಯವಸ್ಥೆಯು ಮೊದಲು ಐರೋಪ್ಯ ದೇಶಗಳಲ್ಲೊಂದಾದ ಇಂಗ್ಲೆಂಡ್‌ನಲ್ಲಿ ಜನ್ಮ ತಾಳಿತು. ೧೯೭೦ ಹಾಗೂ ೮೦ರ ದಶಕಗಳಲ್ಲಿ ಈ ದೇಶದ ಸರ್ಕಾರವು ತನ್ನ ಆರ್ಥಿಕ ವ್ಯವಸ್ಥೆಯಲ್ಲಿನ ಸಾರ್ವಜನಿಕ ಗಳಿಕೆಯ ಒಂದು ಭಾಗದ ಮಾದರಿಯನ್ನು ಆಮೂಲಾಗ್ರವಾಗಿ ಬದಲಾವಣೆ ಮಾಡುವ ಮೂಲಕ ಖಾಸಗಿ-ಸಾರ್ವಜನಿಕ ಒಡಂಬಡಿಕೆಯ ಯೋಜನೆಗೆ ಹೆಚ್ಚು ಪುಷ್ಟಿ ನೀಡಲಾರಂಭಿಸಿತು. ಬಹುಪಾಲು

**ಬಂಡವಾಳಶಾಹಿಯು ವ್ಯವಸ್ಥೆಯಡಿಯಲ್ಲಿ ವಿವಿಧ ಮಾದರಿಯ ಅಭಿವೃದ್ಧಿ ಕಾರ್ಯಯೋಜನೆಗಳಿಗೆ ಅತಿ ಹೆಚ್ಚು ಪ್ರಮಾಣದ ಸಂಪನ್ಮೂಲಗಳನ್ನು ಕ್ರೋಡೀಕರಿಸುವುದರ ಮೂಲಕ ವ್ಯಯಿಸುತ್ತದೆ. ಈ ಕಾರ್ಯಯೋಜನೆಗಳಿಂದ ಹೊರಬಂದ ಫಲಿತಾಂಶವು ಯಾರಿಗೆ ಎಷ್ಟು ತಲುಪುತ್ತಿದೆ ಎಂಬ ಪ್ರಶ್ನೆಗೆ ಬಹುಶಃ ಉತ್ತರ ಸಿಗದು. ಇನ್ನೊಂದರ್ಥದಲ್ಲಿ ಪ್ರಶ್ನಿಸುವ ಪ್ರಯತ್ನವು ಒಂದು ಅಪರಾಧವೆಂದೆನಿಸಿಬಿಡುತ್ತದೆ. ಪ್ರಶ್ನಿಸಿದವರಿಗೆ 'ಅಭಿವೃದ್ಧಿ ವಿರೋಧಿಗಳು' ಎಂಬ ಹಣೆಪಟ್ಟಿ ಕಟ್ಟಲಾಗುತ್ತದೆ. ಪ್ರಸ್ತುತ ಅಭಿವೃದ್ಧಿ ಮಾದರಿಯಲ್ಲಿ 'ಸಾರ್ವಜನಿಕ-ಖಾಸಗಿ ಸಹಭಾಗಿತ್ವ' ಎಂಬ ಎರಡು ವಿರುದ್ಧ ವ್ಯವಸ್ಥೆಗಳು ಒಂದಾಗಿರುವುದನ್ನು ನೋಡಬಹುದು. ಈ ಎರಡು ವ್ಯವಸ್ಥೆಗಳ ಮೂಲ ಉದ್ದೇಶವು ಬೇರೆಯೆ ಆದರೂ ಅವುಗಳ ಆಶಯಗಳು ಒಂದೇ ಎಂಬಂತೆ ತೋರಿಬರುತ್ತಿದೆ.**

ಖಾಸಗಿ-ಸಾರ್ವಜನಿಕ ಯೋಜನೆಗಳು ವ್ಯಕ್ತಿಗತ ಒಡಂಬಡಿಕೆಗಳಾಗಿರುತ್ತವೆ. ೧೯೯೨ರಲ್ಲಿ ಇಂಗ್ಲೆಂಡ್‌ನಲ್ಲಿ ಕನ್ಸರ್‌ವೇಟಿವ್ ಪಕ್ಷದಿಂದ ಆಯ್ಕೆಯಾದ ಪ್ರಧಾನಮಂತ್ರಿ ಜಾನ್ ಮೇಜರ್ ಅವರ ಅಧಿಕಾರಾವಧಿಯಲ್ಲಿ ಮೊದಲ ಬಾರಿಗೆ ಖಾಸಗಿ ಹಣಕಾಸು ಆದ್ಯತಾ ಯೋಜನೆಯೊಂದಿಗೆ ಖಾಸಗಿ-ಸಾರ್ವಜನಿಕ ವ್ಯವಸ್ಥೆಗೆ ನಾಂದಿ ಹಾಡಲಾಯಿತು. ಈ ಕಾರ್ಯವು ಸಾರ್ವಜನಿಕ ವಲಯ ಎರವಲು ಪಡೆಯುವ ಅಗತ್ಯತೆಯನ್ನು, ಸರ್ಕಾರದ ವತಿಯಿಂದ ಕಡಿಮೆ ಮಾಡುವ ಉದ್ದೇಶವನ್ನು ಹೊಂದಿತ್ತು. ೧೯೯೦ರಲ್ಲಿ ಸರ್ಕಾರದ ವತಿಯಿಂದ ಆರ್ಥಿಕ-ಸಾರ್ವಜನಿಕ ವೆಚ್ಚವನ್ನು ತಡೆಹಿಡಿಯುವ ಗುರಿಯೊಂದಿಗೆ ಹೆಚ್ಚು ಹಣಕಾಸಿನ ಹೊರೆಯಾದರೂ ಅಡ್ಡಿಯಿಲ್ಲವೆಂದು ಖಾಸಗಿ ವಲಯವನ್ನು ಉತ್ತೇಜಿಸುವ ಧಾರಾಳತನವನ್ನು ಅಲ್ಲಿನ ಸರ್ಕಾರವು ತೋರಿಸಿತು. ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸುವುದು ಮುಖ್ಯ. ಅದೆಂದರೆ, ದಕ್ಷತೆಯೆಂಬ ಹಣೆಪಟ್ಟಿಯನ್ನು ಖಾಸಗಿ ಸಂಸ್ಥೆಗಳಿಗೆ ಅಂಟಿಸಿರುವುದು. ಹಾಗಾದರೆ ಸರ್ಕಾರವು ಮತ್ತದರ ಯಂತ್ರವು ಅದಕ್ಷವೆ? ಯೋಜನೆಗಳನ್ನು ಕೈಗೆತ್ತಿಕೊಳ್ಳುವುದರಿಂದ ಅವುಗಳ ಅಂತ್ಯದವರೆಗೆ ಯಾವುದೇ ಸಮಸ್ಯೆಗಳಿಗೆ ಖಾಸಗಿ ಸಂಸ್ಥೆಗಳು ಹೊಣೆಯಾಗದೆ ಸರ್ಕಾರವೇ ಪೂರ್ಣಪ್ರಮಾಣದ ಜವಾಬ್ದಾರಿಯನ್ನು ಹೊರಲು ಸಿದ್ಧವಿರಬೇಕು. ಇದು 'ಕೋತಿಯು (ಖಾಸಗೀ ಸಂಸ್ಥೆಗಳು) ಮೊಸರು (ಲಾಭಗಳಿಸಿ) ತಿಂದು ಮೇಕೆ (ಸಾರ್ವಜನಿಕರ) ಬಾಯಿಗೆ (ಹೆಚ್ಚು ಬೆಲೆಗೆ) ಒರೆಸಿದ' ಕಾರ್ಯತಂತ್ರವಾಗಿದೆ.

ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿ ಈ ಮಾದರಿಯು ತನ್ನದೇ ಆದ ಖ್ಯಾತಿಯನ್ನು ಪಡೆಯುತ್ತಿದೆ. ಲಾಭ ಮತ್ತದರ ಹಂಚಿಕೆಯು ಮಾತ್ರ ಖಾಸಗಿ ಹಾಗೂ ಸರ್ಕಾರದ್ದು, ಆದರೆ ಫಲವತ್ತಾದ ಕೃಷಿ ಭೂಮಿ, ಉಳಿತಾಯ ಹಾಗೂ ತೆರಿಗೆಗಳಿಂದ ಸಂಚಯನವಾದ ಹಣವು ಮಾತ್ರ ಜನರದ್ದು. ಮೂಲಭೂತ ಸೌಕರ್ಯಗಳು ಆ ದೇಶದ ಸಂವಿಧಾನಾತ್ಮಕವಾಗಿ ಜನರಿಗೆ ಲಭ್ಯವಾಗಬೇಕು. ಆದರೆ ಈ ಎಲ್ಲಾ ಸವಲತ್ತುಗಳನ್ನು ಕೆಲವೇ ಮಂದಿ ತಮ್ಮ ಸ್ವಂತ ಲಾಭಕ್ಕಾಗಿ ತಮ್ಮದಾಗಿಸಿ ಕೊಂಡಿರುವುದು ಒಂದು ದುರಂತವೇ ಸರಿ. ಸಾಮಾಜಿಕ-ಆರ್ಥಿಕ ನ್ಯಾಯ, ಸರ್ಕಾರದ ನಿಯಂತ್ರಣ, ಸಮಾನ ಹಂಚಿಕೆ, ಸೇವಾಕೇಂದ್ರಿತ ಯೋಜನೆಗಳು ಇವೆಲ್ಲವೂ ತತ್ವಪ್ರತಿಪಾದಿತ ಮೌಲ್ಯಗಳು ಈ ರೀತಿಯಾದ ಒಡಂಬಡಿಕೆಗಳ ಮುಂದೆ ಗೌಣವಾಗಿ ಬಿಡುತ್ತವೆ. ೧೯೯೫ರಲ್ಲಿ ಆಸ್ಟ್ರೇಲಿಯಾದ ಆರ್ಥಿಕ ಯೋಜನಾ ಸಲಹಾ ಆಯೋಗವು ಅನೇಕ ಅಧ್ಯಯನಗಳನ್ನು ಮೊದಲು ಮಾಡಿ, ಕೊನೆಗೆ ಒಂದು ನಿರ್ಧಾರಕ್ಕೆ ಬಂದಿತು. ಅದೆಂದರೆ, 'ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಲ್ಲಿ ಖಾಸಗಿ ಬಂಡವಾಳ ಹೂಡಿಕೆಯು ಸಾರ್ವಜನಿಕ ಹೂಡಿಕೆಗೆ ಹೋಲಿಸಿದರೆ ಅತಿ ಕಳಪೆ ಮಟ್ಟದ್ದಾಗಿರುವುದು' ಎಂದು. ಅದು ನಿಜವೂ ಹೌದು. ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ ಎರಡು ಪ್ರಮುಖ ಪರಿಕಲ್ಪನೆಗಳಿವೆ: (೧) ಸಾರ್ವಜನಿಕ ಕಳಕಳಿ ಹಾಗೂ (೨) ಯೋಜನೆಗಳನ್ನು ಜಾರಿಗೊಳಿಸುವ ಕಳಕಳಿ. ಈ ಎರಡೂ ಪರಿಕಲ್ಪನೆಗಳಲ್ಲಿ ಯಾವುದಕ್ಕೆ ಹೆಚ್ಚು ಬದ್ಧತೆಯಿರುವುದೆಂಬುದು ಮುಖ್ಯ ಪ್ರಶ್ನೆ. ಜನರಿಂದ ಕ್ರೋಢೀಕರಿಸಿದ ತೆರಿಗೆ ಹಣವನ್ನು ಜನರಿಂದ ಆಯ್ಕೆಯಾಗಿ ಬಂದು ಅದೇ ಪ್ರತಿನಿಧಿಗಳು ಯಾವ ಆಧಾರದ ಮೇಲೆ ಖಾಸಗಿ ಬಂಡವಾಳದಾರರಿಗೆ ಹೇಗೆ

# ಸರ್ವರಿಗೂ ಸಮಪಾಲು ಸಮಬಾಳು...?



ಅಪ್ಪನಂತಿದ್ದ ನನ್ನಪ್ಪ
ಕನ್ನಡಿ ಹಿಂಬದಿಯ
ಕಾಗದದ ಜೋಡು
ಅಮ್ಮ ಹೇಳಿದಂತೆ
ಅವ ರೂಪಪಡಿಯೊಳಗಪ್ಪ
ನಿಷ್ಪನ್ನ ಕಂಗಳಿಗೆ ಕಪ್ಪುರಂಧ್ರ
ಅಮ್ಮನ ಕಾಮ–ಸಂ–ವೇದನೆಗೆ ಅಗ್ನಿ
ಅಪ್ರಕಟಿತ, ಅಭಿದಾನ ಅಭಿಜಾತ
ಸತ್ಯ ಸಂಧ ಸತ್ಯ ಕಠೋರವೆಂದ
ಸಾಯಲಿಲ್ಲ ಭೂತ–ಗನ್ನಡಿಯ ಸತ್ವ
ಅಪ್ಪನೆಂಬುದು ಅಮ್ಮನಷ್ಟೇ ಸತ್ಯ
ಕೊರಳಿಗೆ ದನಿಯಾಗಲಿಲ್ಲ
ನಾಲಿಗೆಗೆ ಹೂರಣವಾದ
ಬಂಧನದಿಂದ ನಿರ್ವಾಹ
ಚಾರಿತ್ರ್ಯ ನಿರ್ವಾಣ
ನಿರುತ್ತರಿ, ನಿರುಪದ್ರವಿ
ನಿರ್ಲಿಪ್ತ ನಿರಾಳ ಪ್ರತಿಮೆ
ಅವ್ವನಿಗೆ ಅಣಚಿಯಾಗದ ನಿಸ್ಸೀಮ
ಬಾವಲಿಗೂ ಭಾವನೆಗಳಿವೆಯೆಂದಿದ್ದ
ಉಸುರುತ್ತಿದ್ದ ಸದಾ ಸರ್ವರಿಗೂ
ಸಮಪಾಲು ಸಮಬಾಳು...

**ಪ್ರೊ|| ಅಶೋಕ್ ಕುಮಾರ್**
ಆಯ್ಕೆಶ್ರೇಣಿ ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹೊಸದುರ್ಗ - ೫೭೭ ೫೨೭, ಚಿತ್ರದುರ್ಗ ಜಿಲ್ಲೆ

ವರ್ಗಾಯಿಸುತ್ತಾರೆ, ಲಾಭಕ್ಕಾಗಿ ಹಪಹಪಿಸುವ ಖಾಸಗಿ ವಲಯಕ್ಕೆ ಸಾಮಾಜಿಕ ಕಳಕಳಿಯು ಹೇಗೆತಾನೆ ಬರುತ್ತದೆ! ಒಂದು ಹಂತದಲ್ಲಿದ್ದರೂ ಅದು ಯಾವ ಮಟ್ಟದ್ದು, ಎಂಬಿತ್ಯಾದಿ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರ ಮೊದಲು ದೊರಕಬೇಕು. ಇನ್ನು ಯೋಜನೆಯನ್ನು ಜಾರಿಗೊಳಿಸುವ ಕಳಕಳಿಯತ್ತ ನೋಟ ಹರಿಸಿದರೆ, ಅಲ್ಲಿ ಯಾವ ಯೋಜನೆಯನ್ನು ಹೂಡಲಾಗಿದೆ, ಅದರ ವೆಚ್ಚವೇನು, ಯೋಜನೆ ಪೂರ್ಣಗೊಳ್ಳುವ ಕಾಲಾವಧಿ ಎಷ್ಟು, ಮತ್ತದರ ನಿರ್ವಹಣಾ ವೆಚ್ಚವನ್ನು ಯಾರು ಭರಿಸಬೇಕು, ಕೆಲವರ ಅಭಿವೃದ್ಧಿಗಾಗಿ ಹೆಚ್ಚು ಜನರಿಗೆ ಹೇಗೆ ತಾನೆ ಸಹಾಯವಾಗುತ್ತದೆ, ಎಂಬಿತ್ಯಾದಿ ಪ್ರಶ್ನೆಗಳಿಗೆ ಸಾರ್ವಜನಿಕ-ಖಾಸಗಿ ಮಾದರಿಯ ಒಂದು ಉತ್ತಮ ಮಾದರಿಯಾಗಬಲ್ಲುದೆ ?

**(ಇ) ಸಾರ್ವಜನಿಕ-ಖಾಸಗಿ ಒಡಂಬಡಿಕೆಯ ವಿವಿಧ ಮಾದರಿಗಳು**

ಖಾಸಗಿ ಬಂಡವಾಳ (ಅ) ವ್ಯವಸ್ಥೆಯಲ್ಲಿ ಲಾಭಗಳಿಸಲು ಅನೇಕ ರೀತಿಯ ಮಾದರಿಗಳನ್ನು ಹುಟ್ಟುಹಾಕಲಾಗುತ್ತದೆ. ಆದರೆ ಎಲ್ಲ ಮಾದರಿಗಳ ದೃಷ್ಟಿಕೋನ ಮತ್ತು ಅಂತಿಮ ಗುರಿಯು ಲಾಭಗಳಿಕೆಯೇ ಆಗಿದೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಈ ಒಡಂಬಡಿಕೆಯಲ್ಲಿ ಎರಡು ಮಾದರಿಗಳಿವೆ. ಅವುಗಳೆಂದರೆ: (ಅ) ಸೇವಾ ಮಾದರಿ, ಮತ್ತು (ಆ) ನೀಡಿಕೆ ಮಾದರಿ. ಸೇವಾ ಮಾದರಿಯಲ್ಲಿ, ಸರ್ಕಾರವು ಕೆಲವು ಕೆಲಸಗಳನ್ನು ತಾನೇ ನಿರ್ವಹಿಸುವ ಬದಲು ಅವುಗಳನ್ನು ಸರ್ಕಾರೇತರ ಖಾಸಗಿ ಸಂಸ್ಥೆಗಳಿಗೆ ವರ್ಗಾಯಿಸಿ ಸೇವೆಗಳನ್ನು ಒದಗಿಸುವುದೇ ಆಗಿದೆ. ಈ ಮಾದರಿಯಲ್ಲಿ ಅನೇಕ ಉಪ-ಮಾದರಿಗಳಿವೆ, ಅವುಗಳಲ್ಲಿ ಮೊದಲನೆಯದಾಗಿ, ಸಂಕೀರ್ಣ (ಸಮಗ್ರ) ಹೊರ ಗುತ್ತಿಗೆ ಮಾದರಿ, ಈ ಮಾದರಿಯಲ್ಲಿ ಸಮಗ್ರ ಸೇವೆಯನ್ನು ನಿಗದಿತ ಕಾಲಾವಧಿ, ವೆಚ್ಚ ಹಾಗೂ ಬೆಲೆಗೆ ಒಡಂಬಡಿಕೆಯೊಂದರ ಆಧಾರದ ಮೇಲೆ ಜನರಿಗೆ ಸೇವೆಯನ್ನು ಒದಗಿಸುವುದು.

ಇಲ್ಲಿ ಎಲ್ಲ ವ್ಯವಹಾರ ನಿರ್ವಹಣೆಯ ಜವಾಬ್ದಾರಿಯು ಖಾಸಗಿ ಸಂಸ್ಥೆಯದೇ ಆಗಿರುತ್ತದೆ. ಬಂದ ಲಾಭದಲ್ಲಿ ಶೇಕಡಾವಾರು ಸರ್ಕಾರಕ್ಕೆ ತೆರಿಗೆಯ ರೂಪದಲ್ಲಿ ತಲುಪುತ್ತದೆ. ಮಿಕ್ಕಿದ್ದೆಲ್ಲವೂ ಖಾಸಗಿ ಸಂಸ್ಥೆಯದ್ದೆ. ಅದನ್ನು ಸಾಧಿಸಲು ಹೆಚ್ಚು ಬೆಲೆ ನಿಗದಿಪಡಿಸುವ ಮೂಲಕ ಲಾಭವನ್ನು ತನ್ನದಾಗಿಸಿ ಕೊಳ್ಳುತ್ತದೆ. ಎರಡನೆಯದಾಗಿ, ವಿನಾಯಿತಿ ಮಾದರಿ: ಇಲ್ಲಿ ತೆರಿಗೆ ಹಾಗೂ ಆಸ್ತಿಯ ಕಾನೂನನ್ನು ಮೀರುವುದರ ಮೂಲಕ ಇನ್ನೆಲ್ಲ ತೆರನಾದ ಲೆಕ್ಕದ ನಿಯಮಗಳನ್ನು ಪಾಲಿಸುವುದರೊಂದಿಗೆ ಖಾಸಗಿ ಸಂಸ್ಥೆಗಳು ಗುತ್ತಿಗೆಯನ್ನು ನಿರ್ವಹಿಸುವುದು. ಈ ಹಂತದಲ್ಲಿ ಸಂಸ್ಥೆಯು ತೆರಿಗೆಯನ್ನು ತಪ್ಪಿಸುವುದರೊಂದಿಗೆ ಆಸ್ತಿಯ ಕಾನೂನನ್ನು ತಮಗಿಷ್ಟಬಂದಂತೆ ಕೃಷಿ ಮತ್ತು ಕೃಷಿಯೇತರ ಭೂಮಿಯನ್ನು ಬಳಸಿಕೊಳ್ಳಬಹುದಾಗಿದೆ. ಉದಾಹರಣೆಗೆ, ನೈಸ್ ಸಂಸ್ಥೆ ಮತ್ತು ಪ್ರಸ್ತುತ ಸರ್ಕಾರದ ರಸ್ತೆ ಕಾಮಗಾರಿ ಒಡಂಬಡಿಕೆ. ಈ ತೆರನಾದ ಒಪ್ಪಂದಗಳು ಸಂವಿಧಾನ ಬಾಹಿರವಲ್ಲವೇ? ಅಭಿವೃದ್ಧಿ ಮಂತ್ರ ಜಪಿಸುವ ಸರ್ಕಾರಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಈ ಬಗೆಯಲ್ಲಿ ಕಾರ್ಯ ನಿರ್ವಹಿಸಬಹುದೆ? ಸರ್ವಸಮ್ಮತಿಯಿಂದ ಒಪ್ಪಿಕೊಂಡ ತತ್ವಗಳಿಗೆ ಮಸಿ ಬಳೆಯುವುದಲ್ಲವೆ ಇದು, ಎಂದೊಮ್ಮೆ ಯೋಚಿಸಿ ಕಾರ್ಯಪ್ರವೃತ್ತರಾಗಬೇಕಿದೆ. (ಇ) ನೀಡಿಕೆ ಮಾದರಿ: ಈ ಮಾದರಿಯಲ್ಲಿ ಸರ್ಕಾರದ ಅಂಗಗಳಿಂದಾಗಬೇಕಾದ ಕೆಲವು ಜವಾಬ್ದಾರಿಯುತ ಕೆಲಸಗಳನ್ನು ತಾತ್ಕಾಲಿಕವಾಗಿ ಖಾಸಗಿ ಸಂಸ್ಥೆಗಳಿಗೆ ವರ್ಗಾಯಿಸುವುದೇ ಆಗಿದೆ. ಇದು ಒಂದರ್ಥದಲ್ಲಿ ಖಾಸಗೀಕರಣದ ಇನ್ನೊಂದು ಮುಖ, ಅಷ್ಟೆ. ಈ ಮಾದರಿಯಲ್ಲಿ ಎರಡು ಉಪಮಾದರಿಗಳಿವೆ: (೧) ಬೋಟ್ (ಬಿ.ಓ.ಟಿ.) ಎಂದರೆ 'ನಿರ್ಮಿಸು-ನಿರ್ವಹಿಸು -ವರ್ಗಾಯಿಸು', ಇಲ್ಲಿ ಸರ್ಕಾರವು ಇಂತಿಷ್ಟು ಗುತ್ತಿಗೆಗಳನ್ನು ಖಾಸಗಿ ಸಂಸ್ಥೆಗಳಿಗೆ ಪರಭಾರೆ ಮಾಡುತ್ತದೆ. ಕೆಲಸದ ಅರ್ಧ ಭಾಗದಲ್ಲಿ ಈ ಗುತ್ತಿಗೆಗಳನ್ನು ಖಾಸಗಿ ಸಂಸ್ಥೆಯು ಸರ್ಕಾರಕ್ಕೆ ಹಿಂದಿರುಗಿಸಲಾಗುವುದಿಲ್ಲ. ಆದರೆ ಗುತ್ತಿಗೆಯ ಕಾಲಾವಧಿಯು ಪೂರ್ಣವಾದ ನಂತರವೇ ಸಂಸ್ಥೆಯು ಎಲ್ಲವನ್ನೂ ಸರ್ಕಾರಕ್ಕೆ ಹಸ್ತಾಂತರಿಸುತ್ತದೆ. ಈ ಅವಧಿಯಲ್ಲಿ ಬಂದ ಲಾಭವೆಲ್ಲವೂ ಖಾಸಗಿಯವರಿಗೆ ದಕ್ಕುತ್ತದೆ. ಖಾಸಗಿ ಸಂಸ್ಥೆಯು ಯಾವ ಬೆಲೆ ನಿರ್ಧರಿಸುತ್ತದೆಯೋ ಆ ಕುರಿತು ಸರ್ಕಾರವು ಯಾವುದೇ ರೀತಿಯ ಹಸ್ತಕ್ಷೇಪ ಮಾಡುವಂತಿಲ್ಲ. ಈ ತೆರನಾದ ಸೇವೆಗಳನ್ನು ಗ್ರಾಹಕರು ಹೆಚ್ಚು ಬೆಲೆ ತೆತ್ತು ಖರೀದಿಸಿ ಉಪಯೋಗಿಸಬೇಕಾಗುತ್ತದೆ. ಇದು ಗ್ರಾಹಕನ ನೇರ ಶೋಷಣೆಯಲ್ಲವೆ? ಖಾಸಗಿ ಸಂಸ್ಥೆಗಳು ಗ್ರಾಹಕನಿಗೆ ಅನೇಕ ರೀತಿಯ ಸಬೂಬುಗಳನ್ನು ನೀಡುತ್ತವೆ. ಅದರಲ್ಲಿ 'ಗುಣಮಟ್ಟ' ಎಂಬುದೊಂದು. (೨) ಸಹಕಾರಿ ಉಪ-ಮಾದರಿ: ಈ ಒಡಂಬಡಿಕೆಯಲ್ಲಿ ಸರ್ಕಾರವು ಶಾಸನಸಮ್ಮತವಾದ ಸ್ಥಾನವನ್ನು ನೀಡುವುದರ ಮೂಲಕ ನೇರ ಅಥವಾ ಪರೋಕ್ಷವಾಗಿ ತನ್ನ ಷೇರುಗಳನ್ನು ಹೊಂದಿ ದೀರ್ಘ ಕಾಲದವರೆಗೆ ಕಾರ್ಯನಿರ್ವಹಿಸುತ್ತವೆ. ಆದರೆ ಇಲ್ಲಿ ಬಂಡವಾಳಶಾಹಿಯ ಮಧ್ಯಸ್ತಿಕೆಯ ಪ್ರಮಾಣವು ಅಗಾಧವಾಗಿರುತ್ತದೆ. ಖಾಸಗಿ ಸಂಸ್ಥೆಗಳೂ ಸರ್ಕಾರಕ್ಕೆ ಅತಿ ತೆರಿಗೆ ಪಾವತಿಸುವುದರೊಂದಿಗೆ ಹೆಚ್ಚು ಬೆಲೆಗಳ ಮೂಲಕ ಅಧಿಕ ಲಾಭವನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಗ್ರಾಹಕನ ಹಿತರಕ್ಷಣೆ, ಸಾಮಾಜಿಕ ನ್ಯಾಯ, ಜನರೊಂದಿಗೆ ಸರ್ಕಾರದ ಬದ್ಧತೆಯೆಲ್ಲವೂ ಅರ್ಥ ಕಳೆದುಕೊಳ್ಳುತ್ತದೆ. ಈ ಎಲ್ಲಾ ಮಾದರಿ ಹಾಗೂ ಉಪಮಾದರಿಗಳೂ ಜನಪರವಾಗಿರುತ್ತವೆ ಎಂದು ಬಿಂಬಿಸಲಾಗುತ್ತದೆಯೇ ಹೊರತು, ತೆರೆಮರೆಯಲ್ಲಿರುವ ಆಶಯಗಳು ಮಾತ್ರ ಪಟ್ಟಭದ್ರ ಹಿತಾಸಕ್ತಿಗಳ ಅನುಕೂಲಕ್ಕಾಗಿಯೇ ಇರುತ್ತವೆ. ದೇಶದ ಅಭಿವೃದ್ಧಿ ಕಾರ್ಯ ಪ್ರಕ್ರಿಯೆಯಲ್ಲಿ ಸರ್ಕಾರದ ಸಕ್ರಿಯ ಪಾತ್ರವನ್ನು ಖಾಸಗಿ ಸಂಸ್ಥೆಗಳು ಭಕ್ಷಿಸುವ ಚಿತ್ರಣವು ಹಿಂದೆಂದಿಗಿಂತಲೂ ಹೆಚ್ಚು ಸ್ಪಷ್ಟವಾಗಿ ಕಾಣಿಸುತ್ತದೆ. ಈ ಹಂತದಲ್ಲಿ ಜನರ ಪಾತ್ರ ಅಥವಾ ದೃಷ್ಟಿಕೋನವು ಸರಕು-ಸೇವೆಗಳ ಬಳಕೆಯೆಡೆಗೆ ಹೆಚ್ಚು ಹರಿಯ ತೊಡಗಿರುವುದು ಒಂದು ಮುಖ್ಯ ಕಾರಣವೆನ್ನಬಹುದು.




**(ಈ) ಭಾರತದಲ್ಲಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವ**

ಭಾರತದಲ್ಲಿ ಪ್ರಸ್ತುತ ವಿವಿಧ ಮಾದರಿಗಳಲ್ಲಿ, ಸರ್ಕಾರವು ಅನೇಕ ಖಾಸಗಿ ಬಂಡವಾಳಶಾಹಿ ಸಂಸ್ಥೆಗಳಿಗೆ ಈಗಾಗಲೆ ಗುತ್ತಿಗೆಗಳನ್ನು ನೀಡಿವೆ. ಇದರ ಅಂದಾಜು ರೂ. ೨೨,೪೭,೭೨೨ ಸಾವಿರ ಕೋಟಿಗೂ ಅಧಿಕ. ಕರ್ನಾಟಕ ರಾಜ್ಯವೊಂದರಲ್ಲೇ ರಸ್ತೆ ಕಾಮಗಾರಿ, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ರಾಷ್ಟ್ರೀಯ ಹೆದ್ದಾರಿ, ಚತುಷ್ಪಥ ಕೂಡು ರಸ್ತೆಗಳು, ಮೇಲುಸೇತುವೆ, ರಸ್ತೆಗಳ ಡಾಂಬರೀಕರಣ ಮತ್ತು ಅಗಲೀಕರಣದಂತಹ ಕಾಮಗಾರಿಗಳಿಗೆ ಗುತ್ತಿಗೆಗಳನ್ನು ಸರ್ಕಾರವು ಧಾರಾಳವಾಗಿ ಖಾಸಗಿ ಸಂಸ್ಥೆಗಳಿಗೆ ಹಸ್ತಾಂತರಿಸಿದೆ. ಇದರಡಿಯಲ್ಲಿ ಜನರಿಗಾಗುವ ಅನುಕೂಲವನ್ನು ಅಧಿಕಾರದ ಚುಕ್ಕಾಣಿ ಹಿಡಿದವರು ಬಹು ವಿಜೃಂಭಣೆಯಿಂದ ಪ್ರದರ್ಶಿಸುವ ಮೂಲಕ ಪ್ರಚಾರ ಗಿಟ್ಟಿಸಿಕೊಳ್ಳುತ್ತಿದ್ದಾರೆ. ಹೀಗೆ ಅಭಿವೃದ್ಧಿಯ ಯೋಜನಾ ಕಾರ್ಯಗಳನ್ನು ಎರಡು ತದ್ವಿರುದ್ಧ ವ್ಯವಸ್ಥೆಗಳು ಸಾಕಾರಗೊಳಿಸಲೆತ್ನಿಸಿವೆ. ಪ್ರಶ್ನಿಸಿದವರನ್ನು ಅಭಿವೃದ್ಧಿ ವಿರೋಧಿಗಳೆಂದು ಅಲ್ಲಗಳೆಯುತ್ತಿವೆ. ಅಭಿವೃದ್ಧಿಹೊಂದಿದ ದೇಶಗಳ ಸರ್ಕಾರಗಳು ಖಾಸಗಿ ಬಂಡವಾಳಶಾಹಿ ಸಂಸ್ಥೆಗಳಿಗೆ ಹೆಚ್ಚು ಸ್ವಾತಂತ್ರ್ಯ ನೀಡಿರುವುದು ಅಪೇಕ್ಷಣೀಯ. ಕೇವಲ ದೇಶ ಮತ್ತದರ ಪ್ರಜಾಪ್ರಭುತ್ವ ಉದ್ದೇಶಗಳು ಜನಪರವಾಗಿರ ಬೇಕೆಂದು ಬೊಬ್ಬೆ ಹಾಕುವ ಪಾಶ್ಚಿಮಾತ್ಯ ದೇಶಗಳ ತತ್ವಗಳು ಸಾಮಾಜಿಕ-ಆರ್ಥಿಕ ಸ್ತರಗಳಲ್ಲಿ ಕೇವಲ ಕೆಲವು ವರ್ಗಗಳನ್ನು ಪೋಷಿಸಿ ಗೌಣವಾಗಿ ಬಿಡುತ್ತವೆಂಬ ಅಂಶವನ್ನು ಚರ್ಚೆಗೆ ಒಡ್ಡಬೇಕು. ಸಾರ್ವಜನಿಕ-ಖಾಸಗಿ ಒಡಂಬಡಿಕೆಯೆಂಬ ಜಗ್ಗಾಟದಲ್ಲಿ ಕೊನೆಗೆ ಜನರೇ ನಷ್ಟ ಅನುಭವಿಸ ಬೇಕಾಗುತ್ತದೆ. ಲಾಭದ ದೃಷ್ಟಿಯಿಂದ ಯೋಜನಾ ಕಾರ್ಯಗಳನ್ನು ಕೈಗೆತ್ತಿಕೊಂಡು ಕಾರ್ಯಗತ ಗೊಳಿಸುವುದು ಹೇಗೆ ತಾನೆ ಜನಪರ ವಾದೀತು? ಬಂಡವಾಳಶಾಹಿ (ಅ)ವ್ಯವಸ್ಥೆಯಲ್ಲಿ ಇನ್ನೆಷ್ಟು ಮಾದರಿಗಳಿವೆಯೋ, ಕಾದು ನೋಡಬೇಕು!

ಬಿ. ಎನ್. ವೇಣುಗೋಪಾಲ್
ನಂ. ೪೨೫, ೮ನೇ ಮುಖ್ಯರಸ್ತೆ, ಹನುಮಂತನಗರ
ಬೆಂಗಳೂರು - ೫೬೦ ೦೧೯

## ನಂದಾಕುಮಾರಸ್ವಾಮಿ

ಕಳೆದ ವರ್ಷ ಪ್ರಜಾವಾಣಿಯಲ್ಲಿ ಪ್ರಕಟವಾದ "ಯಾವ ಲೇಖಕಿಯರೂ ಕನ್ನಡದಲ್ಲಿ ನಾಟಕಗಳನ್ನು ಬರೆದೇ ಇಲ್ಲ" ಎಂಬ ಹೇಳಿಕೆ ನನ್ನ ಗಮನ ಸೆಳೆಯಿತು. ಅದಕ್ಕೆ ಪ್ರತಿಕ್ರಿಯೆಯಾಗಿ ಒಂದಿಬ್ಬರು ನಾಟಕಗಾರ್ತಿಯರ ಹೆಸರುಗಳನ್ನು ಉಲ್ಲೇಖಿಸಿ ವಾಚಕರ ವಾಣಿಗೆ ಪತ್ರ ಬರೆದಿದ್ದರು.

ಈ ಬಗ್ಗೆ ಮಾಹಿತಿ ಸಂಗ್ರಹಿಸಲು ಆರಂಭಿಸಿದೆ. ಆಗ ನಾನು ಸುಮಾರು ೧೨೫ ವರ್ಷಗಳ ಹಿಂದಕ್ಕೆ ಹೋಗಬೇಕಾಯಿತು. ಹೌದು ೧೨೫ ವರ್ಷಗಳ ಹಿಂದೆಯೇ ಕನ್ನಡತಿಯರು ಅನೇಕ ನಾಟಕಗಳನ್ನು ಬರೆದಿದ್ದರು. ಅಲ್ಲದೆ, ಅವು ಮೈಸೂರು ಶಿಕ್ಷಣ ಇಲಾಖೆಯ ವತಿಯಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿನ ಅನೇಕ ತರಗತಿಗಳಿಗೆ ಪಠ್ಯಪುಸ್ತಕಗಳಾಗಿ ನೇಮಕಗೊಂಡು ನೂರಾರು ವಿದ್ಯಾರ್ಥಿ/ವಿದ್ಯಾರ್ಥಿನಿಯರನ್ನು, ಅವರ ಹೆತ್ತವರನ್ನು ತಲುಪಿದವು ಎಂದು ತಿಳಿದು ಸಂತೋಷದಿಂದ ಉಬ್ಬಿಹೋದೆ. ಈ ಲೇಖನದಲ್ಲಿ ಆ ಎಲ್ಲ ವಿವರಗಳು ಇಲ್ಲದಿದ್ದರೆ ಅದು ನನ್ನ ಮಿತಿ. ಈ ಮಿತಿಯಲ್ಲೇ ಮಹಿಳಾ ನಾಟಕ ಲೋಕದ ಅನಾವರಣಗೊಳಿಸುವ ಪ್ರಯತ್ನ ಇಲ್ಲಿದೆ.

ಕಲಾ ಪ್ರಕಾರಗಳಲ್ಲಿ ನಾಟಕ ಪ್ರಕಾರವೇ ಹೆಚ್ಚು ರಮ್ಯವಾದದ್ದು. ಇದಕ್ಕೆ ಕಾರಣ ಪ್ರೇಕ್ಷಕರಲ್ಲಿ ಇರುವ ಎಲ್ಲ ರೀತಿಯ ಕಲಾಭಿರುಚಿಯನ್ನು ನಾಟಕ ಪ್ರಕಾರ ಏಕಕಾಲದಲ್ಲಿ ಶಮನ ಮಾಡುತ್ತದೆ, ತೃಪ್ತಿಪಡಿಸುತ್ತದೆ. ಆದ್ದರಿಂದಲೇ ಈ ಪ್ರಕಾರಕ್ಕೆ ಎಲ್ಲಿಲ್ಲದ ಮಹತ್ವ ಹಾಗೂ ಸ್ಥಾನ. ಇದನ್ನು ಅರಿತುಕೊಂಡೇ ನಮ್ಮ ಹಿರಿಯ ನಾಟಕಗಾರ್ತಿಯರು ಅನೇಕ ನಾಟಕಗಳನ್ನು ಬರೆದಿದ್ದಾರೆ. ಸಮಾಜವನ್ನು, ಅದರ ಅಂಕುಡೊಂಕುಗಳನ್ನು ತಿದ್ದುವ ಪ್ರಯತ್ನ ಮಾಡಿದ್ದಾರೆ, ಸಂದೇಶವನ್ನು ನೀಡಿದ್ದಾರೆ.

ಈ ನಾಟಕಗಾರ್ತಿಯರ ಸಾಲಿನಲ್ಲಿ ಮೊದಲು ನಿಲ್ಲುವವರು ನಂಜನಗೂಡು ತಿರುಮಲಾಂಬ ಅವರು. ಈಕೆ ಹುಟ್ಟಿದ್ದು ೨೫-೩-೧೮೮೭ರಲ್ಲಿ. ಸುಮಾರು ೧೨೫ ವರ್ಷಗಳ ಹಿಂದೆಯೇ ಹಲವು ಪ್ರಥಮಗಳನ್ನು ದಾಖಲಿಸಿದ ಪ್ರಥಮ ನಾಟಕಗಾರ್ತಿ ಇವರು.



# ಸ್ತ್ರೀಲೋಕ – ನಾಟಕದ ಹೆಜ್ಜೆಗಳು

ಈಕೆ ನಂಜನಗೂಡಿನ ವೆಂಕಟಕೃಷ್ಣ ಅಯ್ಯಂಗಾರ್ ಹಾಗೂ ಅಲಮೇಲಮ್ಮನವರ ಮಗಳು. ಪತಿ ಕೊಳ್ಳೇಗಾಲದ ನರಸಿಂಹ ಅಯ್ಯಂಗಾರ್. ೧೪ನೇ ವಯಸ್ಸಿಗೆ ವಿಧವೆಯ ಪಟ್ಟ. ತಂದೆಯ ಪ್ರೋತ್ಸಾಹದಿಂದ ಪ್ರಾಥಮಿಕ ಶಾಲೆಯವರೆಗೆ ವಿದ್ಯಾಭ್ಯಾಸ ಮಾಡಿದರು. ಮುಂದೆ ಮನೆಯಲ್ಲೇ ತಮ್ಮ ಓದುಬರಹದ ದಾಹಗಳನ್ನು ತಣಿಸಿಕೊಂಡರು; ಅವೆಲ್ಲವನ್ನು ಲೋಕಾರ್ಪಣೆ ಮಾಡಿದರು.

ತಿರುಮಲಾಂಬರು ಬರೆದ ನಾಟಕಗಳು 'ರಮಾನಂದ', 'ಚಂದ್ರವದನ', 'ಭಾರ್ಗವ ಗರ್ವಭಂಗ' ಮತ್ತು 'ವಿವೇಕೋದಯ'. 'ರಮಾನಂದ' ನಾಟಕ ಮೂಲತಃ ಇವರೇ ಬರೆದ 'ರಮಾನಂದ' ಕಾದಂಬರಿಯನ್ನು ಆಧರಿಸಿದೆ. ಈ ನಾಟಕ ೧೯೧೬, ೧೯೧೭, ೧೯೨೫ರಲ್ಲಿ ಮೂರು ಮುದ್ರಣಗಳನ್ನು ಕಂಡಿದೆ. ಇದು ಪ್ರಕಟವಾದದ್ದು ೧೯೧೬ರಲ್ಲಿ. ೧೯೧೮-೧೯೧೯ರಲ್ಲಿ ಮೈಸೂರಿನಲ್ಲಿ ೪ನೇ ತರಗತಿಗೆ ಪಠ್ಯವಾಗಿತ್ತು. ಈ ನಾಟಕವು ಒಳ್ಳೆಯ ಹಾಗೂ ಕೆಟ್ಟ ನಡತೆಯ ವಿದ್ಯಾರ್ಥಿಗಳ ಬಗ್ಗೆ ಹೇಳುತ್ತದೆ. ಪಾಳೆಗಾರ ಶ್ರೀಮಂತರಾಯರ ಮಕ್ಕಳು ರವಿವರ್ಮ ಮತ್ತು ರಮಾನಂದ. ರವಿವರ್ಮ ಉದ್ಧಟನಾದರೆ, ರಮಾನಂದ ಸೌಮ್ಯ ಸ್ವಭಾವದವನು. ಇವರಿಬ್ಬರನ್ನು ಸೋದರಮಾವನಾದ ಸತ್ಯವ್ರತರ ಬಳಿಗೆ ಓದಲು ಕಳಿಸುತ್ತಾರೆ. ಒಮ್ಮೆ ರವಿವರ್ಮ ತನ್ನ ಮೇಲೆ ಹೊರಿಸಿದ ತಪ್ಪಿನ ಆಪಾದನೆಯನ್ನು ರಮಾನಂದನ ಮೇಲೆ ಹೊರಿಸುತ್ತಾನೆ. ಆದರೆ ರಮಾನಂದನ ಸತ್ಯತೆ ಅರಿತ ಗುರುಗಳು ರವಿವರ್ಮನನ್ನು ಶಿಕ್ಷಿಸುತ್ತಾರೆ. ರಮಾನಂದನನ್ನು ಅಭಿನಂದಿಸುತ್ತಾರೆ. ಎಲ್ಲ ವಿದ್ಯಾರ್ಥಿಗಳಿಗೂ ಈ ವಿಷಯ ತಮ್ಮ ಮುಂದಿನ ಬದುಕನ್ನು ರೂಪಿಸಿಕೊಳ್ಳಲು ದಾರಿದೀಪದಂತಿದೆ.

'ಚಂದ್ರವದನ' ನಾಟಕ ೧೯೧೬ರಲ್ಲಿ ಹಾಗೂ ೧೯೨೮ರಲ್ಲಿ ಪ್ರಕಟವಾಯಿತು. ಇದು ಹತ್ತು ಜನ ಪತಿವ್ರತೆಯರನ್ನು ಕುರಿತ ನಾಟಕ. 'ವಿವೇಕೋದಯ' ಪುರಾಣ ವಸ್ತುವನ್ನು ಆಧರಿಸಿದ ನಾಟಕ. ಕನ್ನಡದ ಪ್ರಪ್ರಥಮ ನಾಟಕಗಾರ್ತಿಯಾದ ನಂಜನಗೂಡು ತಿರುಮಲಾಂಬ ಅವರು ೩೧-೮-೧೯೮೨ರಲ್ಲಿ ನಿಧನರಾದರು.

ತಿರುಮಲಾಂಬ ಅವರ ಹಾಗೆ ತಿರುಮಲೆ ರಾಜಮ್ಮನವರೂ ನಾಟಕ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ರಾಜಮ್ಮನವರು ೨೨-೧೧-೧೯೦೦ರಲ್ಲಿ ಜನಿಸಿದರು. ತುಮಕೂರಿನಲ್ಲಿ ನೆಲಸಿದ್ದ ಕಂದಾಡೆ ರಾಘವಾಚಾರ್ಯ ಹಾಗೂ ಸೀತಮ್ಮನವರ ಮಗಳು. ಲೋಯರ್ ಸೆಕೆಂಡರಿವರೆಗೆ ವಿದ್ಯಾಭ್ಯಾಸ. ಇವರ ಪತಿ ಹೆಸರಾಂತ ಸಾಹಿತಿ ತಿರುಮಲೆ ತಾತಾಚಾರ್ಯರು. ರಾಜಮ್ಮನವರ ಕಾವ್ಯನಾಮ 'ಭಾರತಿ'.

ಇವರು ಬರೆದ ನಾಟಕಗಳು ಹಲವು. 'ತಪಸ್ವಿನಿ', 'ವಾತ್ಸಲ್ಯತರಂಗ ಲೀಲಾ', 'ಮಹಾಸತಿ', 'ಸುಖಮಾರ್ಗ', 'ದೃಢಪ್ರತಿಜ್ಞೆ', 'ಸ್ವರ್ಗ ನಿರಸನ', 'ಉನ್ನತ ಭಾಮಿನಿ', 'ದುಂದುಭಿ', 'ಅಂತರ್ಜ್ಯೋತಿ' ಮುಂತಾದುವು.

೧೯೧೯ರಲ್ಲಿ ಅಮೆಚೂರ್ ನಾಟಕ ಕಂಪನಿಯವರು ಕವಿ ರವೀಂದ್ರನಾಥ ಠಾಕೂರರನ್ನು ಬೆಂಗಳೂರಿಗೆ ಆಹ್ವಾನಿಸಿದ್ದರು. ಲಲಿತ ಕಲಾ ಸಮ್ಮೇಳನವನ್ನು ಏರ್ಪಡಿಸಿ, ಆಗ ಏಕಾಂಕ ಹಾಗೂ ಮೂರಂಕದ ನಾಟಕಗಳ ಸ್ಪರ್ಧೆ ಜರುಗಿತು. ಈ ಸ್ಪರ್ಧೆಯ ಕೇಂದ್ರ ವಿಷಯಗಳೆಂದರೆ ಬಾಲ್ಯವಿವಾಹ ನಿಷೇಧ ಮತ್ತು ವಿಧವಾ ವಿವಾಹ. ರಾಜಮ್ಮನವರು ಬರೆದ ಮೂರಂಕದ 'ಸುಖಮಾರ್ಗ' ಎಂಬ ನಾಟಕಕ್ಕೆ ಪ್ರಥಮ ಬಹುಮಾನ ಬಂದಿತು. ಹಾಗೆಯೆ ಕೆ. ಭೀಮರಾಯರು ಬರೆದ ಐತಿಹಾಸಿಕ ನಾಟಕ 'ಪೃಥ್ವಿರಾಜ' ನಾಟಕಕ್ಕೆ ಪ್ರಥಮ ಬಹುಮಾನ ದೊರೆಯಿತು.

'ತಪಸ್ವಿನಿ', 'ಮಹಾಸತಿ', 'ವಾತ್ಸಲ್ಯ ತರಂಗಲೀಲಾ' – ಈ ಮೂರೂ ನಾಟಕಗಳು 'ಭಾರತೀ ರೂಪಕ ತ್ರಯೀ' ಎಂದು ಖ್ಯಾತಿ ಪಡೆದಿವೆ. 'ತಪಸ್ವಿನಿ' ನಾಟಕ ರಾಮಾಯಣಕ್ಕೆ ಸಂಬಂಧಪಟ್ಟ ಕಥಾ ಹಂದರ

ಕಳೆದ ವರ್ಷ ಪ್ರಜಾವಾಣಿಯಲ್ಲಿ ಪ್ರಕಟವಾದ "ಯಾವ ಲೇಖಕಿಯರೂ ಕನ್ನಡದಲ್ಲಿ ನಾಟಕಗಳನ್ನು ಬರೆದೇ ಇಲ್ಲ" ಎಂಬ ಹೇಳಿಕೆ ನನ್ನ ಗಮನ ಸೆಳೆಯಿತು. ಅದಕ್ಕೆ ಪ್ರತಿಕ್ರಿಯೆಯಾಗಿ ಒಂದಿಬ್ಬರು ನಾಟಕಗಾರ್ತಿಯರ ಹೆಸರುಗಳನ್ನು ಉಲ್ಲೇಖಿಸಿ ವಾಚಕರ ವಾಣಿಗೆ ಪತ್ರ ಬರೆದಿದ್ದರು.

ಈ ಬಗ್ಗೆ ಮಾಹಿತಿ ಸಂಗ್ರಹಿಸಲು ಆರಂಭಿಸಿದೆ. ಆಗ ನಾನು ಸುಮಾರು 125 ವರ್ಷಗಳ ಹಿಂದಕ್ಕೆ ಹೋಗಬೇಕಾಯಿತು. ಹೌದು 125 ವರ್ಷಗಳ ಹಿಂದೆಯೇ ಕನ್ನಡತಿಯರು ಅನೇಕ ನಾಟಕಗಳನ್ನು ಬರೆದಿದ್ದರು, ಅಲ್ಲದೆ, ಅವು ಮೈಸೂರು ಶಿಕ್ಷಣ ಇಲಾಖೆಯ ವತಿಯಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿನ ಅನೇಕ ತರಗತಿಗಳಿಗೆ ಪಠ್ಯಪುಸ್ತಕಗಳಾಗಿ ನೇಮಕಗೊಂಡು ನೂರಾರು ವಿದ್ಯಾರ್ಥಿ/ವಿದ್ಯಾರ್ಥಿನಿಯರನ್ನು, ಅವರ ಹೆತ್ತವರನ್ನು ತಲುಪಿದವು ಎಂದು ತಿಳಿದು ಸಂತೋಷದಿಂದ ಉಬ್ಬಿಹೋದೆ. ಈ ಲೇಖನದಲ್ಲಿ ಆ ಎಲ್ಲ ವಿವರಗಳು ಇಲ್ಲದಿದ್ದರೆ ಅದು ನನ್ನ ಮಿತಿ. ಈ ಮಿತಿಯಲ್ಲೇ ಮಹಿಳಾ ನಾಟಕ ಲೋಕದ ಅನಾವರಣಗೊಳಿಸುವ ಪ್ರಯತ್ನ ಇಲ್ಲಿದೆ.

ಹೊಂದಿದೆ. ಲಕ್ಷ್ಮಣ ಮತ್ತು ಊರ್ಮಿಳೆಯರ ಅನುಕೂಲ ದಾಂಪತ್ಯ, ಪ್ರೇಮ, ತ್ಯಾಗ ಮುಂತಾದ ದಾಂಪತ್ಯ ಮೌಲ್ಯಗಳನ್ನು ಈ ನಾಟಕದಲ್ಲಿ ಕಡೆದಿಡಲಾಗಿದೆ.

ಶ್ರೀರಾಮ ತನ್ನ ಮಡದಿ ಸೀತೆಗೆ ತಮ್ಮ ಲಕ್ಷ್ಮಣನನ್ನು ಕುರಿತು ಹೀಗೆ ಹೇಳುತ್ತಾನೆ :

*ನೋಡಿವರ ನಿಸ್ವಾರ್ಥ ಜೀವನವ ಸೀತಾ*
*ತ್ಯಾಗದೊಂದಗ್ಗಳಿಕೆಯನು ಜಗಕೆ ತೋರಿಸಿದ*
*ನಿತ್ಯ ತೃಪ್ತರ ನೋಡು. ಸತ್ಯ ಸಾಹಸವ*
*ಹಿರಿಯರೆಮ್ಮಿಂದೆ*

– ರಾಮ ಸೀತೆಯರು ತಮಗಿಂಗಲೂ ಲಕ್ಷ್ಮಣ ಮತ್ತು ಊರ್ಮಿಳೆ ಉತ್ತಮರೆಂದು ಒಪ್ಪಿಕೊಳ್ಳುತ್ತಾರೆ. ಈ ನಾಟಕದಲ್ಲಿ ಲಕ್ಷ್ಮಣ - ಊರ್ಮಿಳೆಯರ ಸಂವಾದದಲ್ಲಿ ಇಡೀ ರಾಮಾಯಣದ ಕಥೆ ಬಂದಿದೆ. ಈ ನಾಟಕದ ಬಗ್ಗೆ ಮಾಸ್ತಿಯವರು, ''ಇಲ್ಲಿ ಸಹಜವಾದ ಕಾವ್ಯದೃಷ್ಟಿಯೂ ಸರಳವಾದ ಕಾವ್ಯಶಕ್ತಿಯೂ ಸೇರಿ ಮನೋಜ್ಞವಾದ ರೂಪಕ ನಿರ್ಮಾಣಗೊಂಡಿದೆ'' ಎಂದಿದ್ದಾರೆ.

ರಾಜಮ್ಮನವರು 'ಮಹಾಸತಿ' ನಾಟಕದಲ್ಲಿ 'ಸತಿ ಪದ್ಧತಿ'ಯ ತಲ್ಲಣಗಳು, ಸಂಕಟ, ಆನಂದ ಎಂಬ ಮನಸ್ಸಿನ ವಿವಿಧ ಮಜಲುಗಳನ್ನು ತೆರೆದಿಟ್ಟಿದ್ದಾರೆ. ಚೋಳರಾಜನ ಅಧೀನದಲ್ಲಿದ್ದ ನವಿಲನಾಡಿನ ದೊರೆ ಏಚ. ಈತನ ಪತ್ನಿ ದೇಕಬ್ಬೆ. ರಾಜನ ಆಣತಿಯನ್ನು ಮೀರಿ ಏಚ ತನ್ನ ದಾಯಾದಿಯಾದ ಎರೆಯಂಗನನ್ನು ಮಲ್ಲಯುದ್ಧದಲ್ಲಿ ಸಂಹರಿಸುತ್ತಾನೆ. ಇದರಿಂದ ಕೋಪಗೊಂಡ ಚೋಳರಾಜ ಏಚನನ್ನು ಕೊಲ್ಲಿಸುತ್ತಾನೆ. ದೇಕಬ್ಬೆ ಚಿತೆ ಏರುತ್ತಾಳೆ. ಈ ಬಗೆಗಿನ ವಿವರಗಳು ಹೆಗ್ಗಡದೇವನಕೋಟೆಯಲ್ಲಿರುವ ಶಿಲಾಶಾಸನದಲ್ಲಿವೆ.

ದೇಕಬ್ಬೆಯನ್ನು ಹೆತ್ತವರು ರವಿಗ ಮತ್ತು ಪೊನ್ನಬ್ಬೆ. ಇವಳ ಸಖಿಯರು ನೀಲಬ್ಬೆ ಮತ್ತು ಮಲ್ಲಬ್ಬೆ. ಕತ್ತಲೆಯ ಸಾವಲ್ಲ ಎನ್ನುವ ನೀಲಬ್ಬೆ :

*ದಿನ ದುರ್ದಿನವು ನಮಗೆ*
*ಪುಣ್ಯ ದಿನವಾಸತಿಗೆ*
*ಮಸಣವರಮನೆಯಾಯ್ತು*

– ಎಂದು ಸಂಕಟಪಡುತ್ತಾಳೆ. ಮತ್ತೊಬ್ಬ ಸಖಿ ಮಲ್ಲಬ್ಬೆ.

*ಜನರೆನಿತು ಮರುಳಾಗಿಹರಮ್ಮ, ಏನಿವರ ಉತ್ಸಾಹ*
*ಸಂಭ್ರಮವೇ... ದುರಭಿಮಾನವಿದೆಲ್ಲಾ*
*ದುಷ್ಟಪದ್ಧತಿ... ಅಂಗೀಕರಿಸಬೇಕೋ ?*
*ಶರಣಾಗಬೇಕೋ ?*
*ಈ ಕ್ರಮದೊಳೆನಗೊಂದು ಪ್ರಿಯವಲ್ಲ*
*ಕ್ರೌರ್ಯದ ಮಹಾಭೂತ ಬಾಯ್ತೆರೆದು ಅರ್ಭಟಿಸಿ*
*ಜಗತ ಕರುಣೆಯನೆಲ್ಲಾ ನುಂಗಿ ತೇಗುತ್ತಿದೆ*

– ಎಂದು ಕಿಡಿಕಾರುತ್ತಾಳೆ. ಈ ಕೋಪದ ಸೆರೆಯಲ್ಲೇ ಮಲ್ಲಬ್ಬೆಯ ನೋವು-ಸಂಕಟ ಕಾಣುತ್ತದೆ.

ಕೋಪ, ಸಂಕಟ, ನೋವುಗಳಿಂದ ಮುಕ್ತಳಾದ ದೇಕಬ್ಬೆಗೆ ಚಿತೆ ತನ್ನ ಜೀವನದ ಆನಂದಮಯ ಜಗತ್ತಾಗಿದೆ. ಇವರೆಲ್ಲರಿಗೂ ದೇಕಬ್ಬೆ ಹೀಗೆ ಸಮಾಧಾನ ಪಡಿಸುತ್ತಾಳೆ :

*ಆ ಜೀವನ ಅನಂತ, ಸೌಭಾಗ್ಯ ಸಂಭ್ರಮದ ಶುಭ*
*ಮಹೋತ್ಸವ, ಅಲ್ಲಿ ಸಾವಿಲ್ಲ, ನೋವಿಲ್ಲ, ಭವದ*
*ಭಾವನೆ ಇಲ್ಲ, ಮಿತವಿಲ್ಲ, ಚ್ಯುತಿಯಿಲ್ಲ,*
*ಆನಂದದಾಶ್ರಯವು*
*ಅಲ್ಲಿದೆ.*

'ವಾತ್ಸಲ್ಯ ತರಂಗಲೀಲಾ' ನಾಟಕ ಶಕುಂತಳೆಯ ಜನನದ ಕಥೆ. ದೇವಕನ್ನಿಕೆಯಾದ ಮೇನಕೆಯಲ್ಲಿ ಮಾತೃವಾತ್ಸಲ್ಯದ ಸೆಳೆತ. ಆದರೆ ದೇವೇಂದ್ರನ ಆದೇಶದಂತೆ ತನ್ನ ಮಗುವನ್ನು ಭೂಲೋಕದಲ್ಲಿ ಬಿಟ್ಟುಹೋಗಲೇಬೇಕು :

*ವಾತ್ಸಲ್ಯ ಒಲವೆತ್ತು ಶಿಶುವ ಬಿಡೆ ಮನಸ್ಸಿಲ್ಲ*
*ಅಲ್ಲಿ ಕೊಂಡೊಯ್ಯದಕೆ ಅಮರರೊಪ್ಪಿಗೆ ಇಲ್ಲ*

ಮೇನಕೆಗೆ ಉಭಯಸಂಕಟ. 'ವಾತ್ಸಲ್ಯ ತರಂಗಲೀಲಾ'ದ ಜಾಲವು ಮೇನಕೆಯನ್ನು ಆವರಿಸಿಬಿಟ್ಟಿದೆ. ಆದಕ್ಕಾಗಿ ಮಾಲಿನೀ ನದಿ ದೇವತೆ, ಶಕುಂತಳ ಪಕ್ಷಿಗಳಿಗೆ ತನ್ನ ಮಾತೃಮಮತೆಯ ಜವಾಬ್ದಾರಿಯನ್ನು ಹೊರಿಸಿ ದೇವಲೋಕಕ್ಕೆ ನಡೆಯುತ್ತಾಳೆ. ನದಿ ದೇವತೆ, ಶಕುಂತಳ ಪಕ್ಷಿಗಳು ನಂತರ ಋಷಿ ಪತ್ನಿ ಗೌತಮಿ, ಕಣ್ವ ಮಹರ್ಷಿಗಳ ತನಕ ಮಾತೃವಾತ್ಸಲ್ಯದ ತರಂಗಗಳು ಹರಡಿ ಶಕುಂತಳೆಯನ್ನು ರಕ್ಷಿಸುವ ಹೊಣೆಗಾರಿಕೆ ಹೊರುತ್ತಾರೆ. ''ವಾತ್ಸಲ್ಯದಲ್ಲಿರುವ ಹೃದಯ ಸಂವಾದವನ್ನು ಈ ರೂಪಕ ಬಹಳ ಚೆನ್ನಾಗಿ ಪ್ರತಿಧ್ವನಿಸಿದೆ'' – ಎಂದಿದ್ದಾರೆ ಗುಣಸಾಗರಿ ನಾಗರಾಜು ಅವರು.

ತಿರುಮಲೆ ರಾಜಮ್ಮನವರು ವೀಣಾವಾದಕಿಯೂ ಹೌದು. ಲಲಿತಕಲಾ ಪ್ರವೀಣೆಯಾದ ರಾಜಮ್ಮನವರಿಂದ ನಾಟಕಲೋಕಕ್ಕೆ ಅಮೂಲ್ಯವಾದ ಕಾಣಿಕೆಗಳು ಸಂದಿವೆ. ಇವರು ೨೪-೧೦-೧೯೮೪ರಲ್ಲಿ ಕಣ್ಮರೆಯಾದರು.

ಇವರ ನಂತರದ ಸ್ಥಾನ ಸರಸ್ವತಿಬಾಯಿ ರಾಜವಾಡೆಯವರಿಗೆ ಸಲ್ಲಬೇಕು. ಉಡುಪಿ ತಾಲ್ಲೂಕಿನ ಒಳಂಜಾಲದಲ್ಲಿ ೦೩-೧೦-೧೯೧೩ರಲ್ಲಿ ಜನಿಸಿದರು. ಹೆತ್ತವರು ನಾರಾಯಣರಾವ್ ಹಾಗೂ ಕಮಲಾಬಾಯಿ. ಪತಿ ರಾಯಶಾಸ್ತ್ರಿ ರಾಜವಾಡೆ. ವಿದ್ಯಾಭ್ಯಾಸ ಎಸ್.ಎಸ್.ಎಲ್.ಸಿ.ವರೆಗೆ. ಹಾಗೆಯೇ ರಾಷ್ಟ್ರಭಾಷಾ ವಿಶಾರದ ಪದವಿ ಪಡೆದಾಕೆ. ಇವರ ಕಾವ್ಯನಾಮಗಳು ಹಲವು - ವೀಣಾಪಾಣಿ, ವಿಶಾಲ, ಗಿರಿಬಾಲೆ.

ಸರಸ್ವತಿಬಾಯಿ ಅವರು ಬರೆದಿರುವ ನಾಟಕಗಳು




'ಪರಿಣಯ', 'ಮಂಥರೆ ಕಂಡ ಅಂತರಂಗ', 'ಪ್ರಕಾಶ', 'ಬಿರುಗಾಳಿ', 'ದಿಟ್ಟಿ ಕಲೆಕ್ಟರ್', 'ನಲ್ಮೆಯ ಸಹೋದರ', 'ಸಂಸಾರ' ಹಾಗೂ 'ಸಂತ ಮೀರಾ'.

ಮರಾಠಿ ಹಾಗೂ ಹಿಂದಿ ಭಾಷೆಗಳಿಂದ ಅನೇಕ ನಾಟಕಗಳನ್ನು ಕನ್ನಡ ಭಾಷೆಗೆ ಪರಿಚಯಿಸಿದ ಅನುವಾದಕಿ ರಾಜವಾಡೆ ಅವರು. ೧೯೪೯ರಲ್ಲಿ 'ಪರಿಣಯ' ಎಂಬ ನಾಟಕವನ್ನು ಮರಾಠಿಯಿಂದ ಕನ್ನಡ ಭಾಷೆಗೆ ತಂದರು. ಹಾಗೆಯೇ ೧೯೫೭ರಲ್ಲಿ 'ಬಿರುಗಾಳಿ' ಮರಾಠಿಯಿಂದ ಕನ್ನಡಕ್ಕೆ ಬಂದ ನಾಟಕ. ಇದಲ್ಲದೆ 'ಪ್ರಕಾಶ' ಎಂಬ ನಾಟಕವನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿದರು.

೧೯೫೨ರಲ್ಲಿ 'ಸಾರ್ಥಕ ಜೀವನ' ಎಂಬ ನಾಟಕವನ್ನು ಕನ್ನಡದಲ್ಲಿ ಬರೆದರು. ಈ ನಾಟಕದ ೩ನೇ ಅಂಕದ ೭-೮ನೇ ದೃಶ್ಯಗಳು 'ಮಂಥರೆ ಕಂಡ ಅಂತರಂಗ' ಎಂಬ ಹೆಸರಿನಲ್ಲಿ ೧೯೬೧ರಲ್ಲಿ ಪ್ರಕಟವಾಯಿತು. ಇದೇ ಸಮಯದಲ್ಲಿ 'ನಲ್ಮೆಯ ಸಹೋದರ' ನಾಟಕವನ್ನು ಬರೆದರು.

ಇಲ್ಲಿ ದಾಖಲಿಸಬಹುದಾದ ಬಹು ಅಮೂಲ್ಯವಾದ ಅಂಶವೆಂದರೆ, ಈ ಎಲ್ಲಾ ನಾಟಕಗಳಲ್ಲಿ ಸ್ವತಃ ನಾಟಕಗಾರ್ತಿಯೇ ಪಾತ್ರವಹಿಸುತ್ತಿದ್ದ ಹೆಗ್ಗಳಿಕೆ. ಈ ಅಂಶ ಸ್ತ್ರೀಲೋಕದ ನಾಟಕದ ಹೆಜ್ಜೆ ಗುರುತುಗಳಲ್ಲಿ ಅನನ್ಯವಾದುದು. ಸರಸ್ವತಿಬಾಯಿ ರಾಜವಾಡೆಯವರು ೨೩-೪-೧೯೪೪ರಲ್ಲಿ ಇಲ್ಲವಾದರು.

ರಾಜವಾಡೆಯವರ ನಂತರ ಹೆಸರಿಸಬಹುದಾದ ನಾಟಕಗಾರ್ತಿ ಟಿ. ಸುನಂದಮ್ಮ. ೮-೮-೧೯೧೭ರಲ್ಲಿ ಟಿ. ರಾಮಯ್ಯ ಮತ್ತು ನಾಗಮ್ಮ ದಂಪತಿಗಳಲ್ಲಿ ಜನಿಸಿದರು. ಪತಿ ವೆಂಕಟನಾರಣಪ್ಪ. ಇಂಟರ್‌ಮೀಡಿಯಟ್‌ವರೆಗೆ ವಿದ್ಯಾಭ್ಯಾಸ. ''ಸುನಂದಮ್ಮನವರು ಈ ದೇಶದಲ್ಲಿ ಹುಟ್ಟಬಾರದಿತ್ತು. ಅವರೇನಾದರೂ ಇಂಗ್ಲೆಂಡಿನಲ್ಲಿ ಹುಟ್ಟಿ 'ಪಂಚ್'ನಂತಹ ಪತ್ರಿಕೆಗೆ ಬರೆದಿದ್ದರೆ... ಒಂದು ಸಾಲಿಗಿಷ್ಟು ಎಂದು ಸಂಭಾವನೆಯನ್ನು ಪಡೆಯುತ್ತಿದ್ದರು. ನಮ್ಮದು ಬಡದೇಶ'' ಎಂದು ಹೇಳಿದವರು ಡಾ॥ ಶಿವರಾಂ ಅವರು.

ಶ್ರೀಸಾಮಾನ್ಯನ ಸುತ್ತಲಿನ ಬದುಕನ್ನು ಹಾಸ್ಯದ ಕಣ್ಣಿನಿಂದ ನೋಡಲು ಶ್ರೀಸಾಮಾನ್ಯರಿಗೆ ತೋರಿಸಿ ಕೊಟ್ಟವರು ಸುನಂದಮ್ಮ. 'ವಿದೇಶಿ ವರ', 'ಬೊಂಬಾಯಿ ಸೊಸೆ', 'ಅತ್ತೆ ಸ್ಪೆಷಲ್', 'ಫೋನಿನ Fun', 'ಆದರ್ಶದ ಆಡಂಬರ', 'ಗೃಹಲಕ್ಷ್ಮಿ', 'ಚಕ್ರಚುಕ್ಕೆ', 'ಚಿಕ್ಕಪ್ಪನ ಉಯಿಲು' ಇತ್ಯಾದಿ ಇವರು ರಚಿಸಿದ ನಾಟಕಗಳು. ಇದಲ್ಲದೆ ಸುಮಾರು ಎಂಟು ಕಿರು ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೆಲವು ಬಿಡಿಬಿಡಿಯಾಗಿ ಪ್ರಕಟವಾಗಿವೆ.

ಇವರ 'ವಿದೇಶಿ ವರ' ಎಂಬ ನಾಟಕದಲ್ಲಿ ಮಗನಿಗೆ ವಿದೇಶದಲ್ಲೇ ಮದುವೆಯಾಗಿ ಒಂದು ಮಗುವಿದೆ. ಆದರೆ ಅವನು ಸ್ವದೇಶಕ್ಕೆ ಬಂದಾಗ ಹೆತ್ತವರು ಹೆಣ್ಣು ನೋಡೋ ನಾಟಕವಾದರೂ ಆಡೋಣ ಎಂದು ಸಂಭ್ರಮದಿಂದ ಚೆಲ್ಲಾಟವಾಡುತ್ತಾರೆ ಹೆತ್ತವರು. ಇದರೊಂದಿಗೆ ವಿದೇಶೀ ವರನನ್ನು ಹುಡುಕಿಕೊಂಡು ಬರುವ ಕನ್ಯಾಪಿತೃಗಳ ಸ್ಥಿತಿ-ಗತಿಗಳ ಅನಾವರಣ ಈ ನಾಟಕದಲ್ಲಿದೆ.

'ಬೊಂಬಾಯಿ ಸೊಸೆ' ನಾಟಕದಲ್ಲಿ ಪ್ರೇಮ ವಿವಾಹವಾದ ಮಗ-ಸೊಸೆಯರನ್ನು ನೋಡಲು ಹೋದ ತಾಯಿ ಮುಂಬೈ ಫ್ಲ್ಯಾಟ್‌ಗಳಲ್ಲಿನ ಜೀವನದ ರೀತಿ-ನೀತಿಗಳು, ಶೈಲಿಯ ಬಗ್ಗೆ ಈ ಮೊದಲೇ

ಚಲನಚಿತ್ರವೊಂದರಲ್ಲಿ ನೋಡಿದವಳು. ಮಗ-ಸೊಸೆಯ ಆದರ, ಅನಾದರಗಳ ಕುರಿತು ತಣ್ಣಗೆ ಪ್ರತಿಕ್ರಿಯಿಸುತ್ತಾಳೆ.

'ಫೋನಿನ Fun' – ಹೊಸದಾಗಿ ಫೋನ್ ಬಂದ ಕಾಲದ ಕಥೆಯ ಕುರಿತ ನಾಟಕ. ಕೆಲವೇ ಮನೆಯವರು ಫೋನನ್ನು ಬಹು ಸಂಭ್ರಮದಿಂದ ತಮ್ಮ ಮನೆಗಳಿಗೆ ಹಾಕಿಸಿಕೊಂಡಮೇಲೆ, ಪ್ರತಿದಿನ ಪಡುವ ಪೇಚಾಟದ ಪ್ರಸಂಗಗಳು ನಗೆ-ಬುಗ್ಗೆಗಳನ್ನು ಎಬ್ಬಿಸುತ್ತವೆ. ವಠಾರದ ಮನೆಗಳಲ್ಲಿರುವವರ ಜೀವನದಲ್ಲಿ ಇವರದು ಸಾರ್ವಜನಿಕ ಸೇವೆಯಾಗಿ ಪರಿಣಮಿಸಿ ನಿತ್ಯ ಪಡುವ ಪಾಡು ಈ ನಾಟಕದ ವಸ್ತು.

'ಅತ್ತೆ ಸ್ಪೆಷಲ್' ನಾಟಕದಲ್ಲಿ ಮಹಿಳಾ ಸಮಾಜದಲ್ಲಿನ ಸದಸ್ಯೆಯರ ಮೀಟಿಂಗ್ ಜರಗುತ್ತದೆ. ಅವರ ಮಾತುಕತೆಗಳು, ಪ್ರವಾಸದ ಸಿದ್ಧತೆಗಳೇ ಪ್ರಧಾನ ವಿಷಯ. ಈ ಸಿದ್ಧತೆಯ ಬಗ್ಗೆ ನವಿರಾದ ಹಾಸ್ಯ ಚಿತ್ರಣವಿದೆ. ಮಾತಿನ ಸೊಗಡು, ಮಧ್ಯದಲ್ಲಿ ಸದಸ್ಯೆಯೊಬ್ಬಳ ಪ್ರಾಸಬದ್ಧ ಕವಿತಾರೂಪದ ಅನೌನ್ಸ್‌ಮೆಂಟ್‌ಗಳು...

ಕರಾವಳಿ ಕಿರೀಟಕ್ಕೆ ಟ್ರಿಪ್ಪು
ಯಾರ್‍ಯಾರಿಗೆ ಬರಲೊಪ್ಪು
ಕೇಳ್ತಿದಾರೆ ಸೆಕ್ರೆಟ್ರಿ
ಸೇರೋರೆಲ್ಲ ದುಡ್ಕಟ್ರಿ''

– ಈ ನಾಟಕ ಕೊನೆಯಾಗುವುದು ಅತ್ತೆಯರ ಸ್ಪೆಷಲ್ ಬಸ್‌ನಲ್ಲಿ. ಕಾಶಿ, ರಾಮೇಶ್ವರ ಮುಂತಾದ ಪುಣ್ಯಕ್ಷೇತ್ರಗಳ ದರ್ಶನ ಪಡೆದು ಪುನೀತರಾಗಿ ಬರುವ ಅತ್ತೆಯರು ಸೊಸೆಯಂದಿರು ಹೋಗಬೇಕೆನ್ನುವ ವೇಳೆಗೆ ಸರಿಯಾಗಿ ಬಂದಿಳಿಯುತ್ತಾರೆ. ಸಮಾಜದ ಸದಸ್ಯೆಯರೆಲ್ಲ ಪೆಚ್ಚುಮೋರೆ ಹಾಕಿಕೊಂಡು ಮುಂದೆ 'ಸೊಸೆ ಸ್ಪೆಷಲ್' ಬಸ್ ಮಾಡೋಣ ಎಂದು ಮುಖ ಮುಖ ನೋಡಿಕೊಳ್ಳುತ್ತಾರೆ. ಇದರಲ್ಲಿನ ಒಂದೊಂದು 'ಪಂಚ್' ಓದುಗರನ್ನು ಪಂಚ್‌ಮಾಡುತ್ತದೆ.

'ಆದರ್ಶದ ಆಡಂಬರ' ನಾಟಕ ಸಮಾಜ ಸೇವಾಕರ್ತೆಯೊಬ್ಬಳ ಅಂತರಂಗ/ಬಹಿರಂಗ ಜೀವನವನ್ನು ಅನಾವರಣಗೊಳಿಸುತ್ತದೆ. ಈಕೆ ಬಹಿರಂಗದಲ್ಲಿ ಅನುಕಂಪೆ, ದಯಾಮಯಿ, ಕರುಣಾಮಯಿ. ಆದರೆ ಅಂತರಂಗದಲ್ಲಿ ಇದಕ್ಕೆ ತದ್ವಿರುದ್ಧ ಸ್ವಭಾವದವಳು. ಇಂಥ ಗೋಸುಂಬೆಗಳ ನಿಜ ಬಣ್ಣವನ್ನು ಈ ನಾಟಕ ಬಯಲುಮಾಡುತ್ತದೆ.

ದಿನನಿತ್ಯದ ಬದುಕಿನ ಒಂದು ಘಟನೆಯನ್ನು ಆಧರಿಸಿ ಮಾತಿನ ಚಾಕಚಕ್ಯತೆಯೇ ಅಲ್ಲದೆ ಹಾಸ್ಯಲೇಪನದೊಂದಿಗೆ ರಚಿತತೊಂಡ ಈ ನಾಟಕಗಳು ಇವರ ಲೇಖನಿಯಿಂದ ಮೂಡಿಬಂದಿವೆ. ನಗೆಯ ಲೇಪನದ ಹಿಂದೆ ವಾಸ್ತವದ ಚಿತ್ರಣ ಇವರ ನಾಟಕಗಳಲ್ಲಿದೆ. ಇವರ ಪ್ರತಿಯೊಂದು ನಾಟಕವೂ ಆರೆಂಟು ಪುಟಗಳಿಗೆ ಸೀಮಿತವಾಗಿದೆ. ಸಂದರ್ಭಕ್ಕೆ ತಕ್ಕಂತೆ ತಮ್ಮ ಕಲ್ಪನೆಯ ಕೊಂಡಿಗಳನ್ನು ಕೂಡಿಸುವ ಕುಶಲ ಕೆಲಸ ಇವರ ನಾಟಕಗಳಲ್ಲಿದೆ. ಟಿ. ಸುನಂದಮ್ಮನವರು ೨೬-೧-೨೦೦೬ರಲ್ಲಿ ಕಾಲವಾದರು.




ಒಂದು ಗುಟುಕು ಸಾರಾಯಿ
ಒಂದೇ ಹೋಳು ಉಪ್ಪಿನಕಾಯಿ
ಜೊತೆಗೊಂದೇ ಗುಳ್ಳಕಾಯಿ ಗಾತ್ರದ ಬೋಂಡ
ಇಷ್ಟೆ ಸಾಕೆಂದೆ
ಅರ್ಧ ಪ್ರಪಂಚ ಗೆದ್ದವನಂತೆ ಗರ್ಜಿಸಿದೆ

ಅಮ್ಮಣಮ್ಮನ ಬೆರಕೆ ಸೊಪ್ಪಿನ ಬೋಂಡ
ಕಳ್ಳು ಬೋಟಿ ಗುಂಡಿಗೆಕಾಯಿ ಚಾಕಣ
ಚೆನ್ನಾಗಿ ಕತ್ತರಿಸಲು ಕಾಸಿಲ್ಲ

ಕುಡಿಯುವುದು ತಪ್ಪೆನ್ನುತ್ತದೆ ಲೋಕ ಬಡವರಿಗೆ
'ನಿತ್ಯ'ದ ಬಿಡುಗಡೆಗೆ ಏನೇನಿದೆ ಹೇಳಿ ಹತಾರ ?

ನೀನಂದು ಬಂದೆ ಅಮಲಿನಲ್ಲಿ
ನಿಜದ ಅಮಲೋ ಸುಳ್ಳೇ ಕಾಸಿಲ್ಲದಾಗಿನ ತೆವಲೋ ಕಾಣೆ
ಬಂದವನೆ ನಾಯ ಕರೆದೆ, ಮರಿಯ ಕರೆದೆ
ದೊಡ್ಡ ಮರಿ ನಡುಕಲ ಮರಿ ಎಲ್ಲ ಗದರಿ ಅಟ್ಟಿದೆ
ಕಿರು ಮರಿ ಕರೆದು ಮೈ ಸವರಿ ಬೋಂಡದ ಚೂರು ಹಾಕಿದೆ
ತಿನ್ನುವವರೆಗೆ ಪ್ರೀತಿ ಮಾಡಿದೆ
ಗಕ್ಕನೆ ಹಿಂದಿನ ಕಾಲ ಹಿಡಿದು ಗಿರಗಿರ ತಿರುಗಿಸಿ
ತಿರುಗಿಸಿ ಪೆಯ್‌ಯ್‌ಯ್ಯಂತ ಎಸೆದೆ

ನಾನಿಲ್ಲಿ ನರಕದಲ್ಲಿ ಬಿದ್ದಿದ್ದೇನೆ ಮರಿ ಅನಾಥ
ಹಳೆ ಮಚ್ಚೆಗಳ ಸವರುತ್ತ ಹೊಸ ಗಾಯಗಳ ನೆಕ್ಕುತ್ತ
ದೊಡ್ಡ ದೊಡ್ಡ ಬಾಟಲಿಗಳಿಗೆ ಹೆದರುತ್ತ
ಹುತ್ತಗಳ ಸಂತೆ ನೋಡುತ್ತ ನೋಡುತ್ತ...

ಸಾರಾಯಿ ನಿಷೇಧಿಸಿದ ಸರ್ಕಾರಕ್ಕೆ ನಮಸ್ಕಾರ.

ಬೇಗೂರು ರಾಮಲಿಂಗಪ್ಪ
ಉಪನ್ಯಾಸಕರು, ಮಹಾರಾಣಿ ಕಲಾ ಕಾಲೇಜು, ಶೇಷಾದ್ರಿ ರಸ್ತೆ
ಬೆಂಗಳೂರು - ೫೬೦ ೦೦೧

೧೬-೩-೧೯೨೪ರಲ್ಲಿ ಹುಟ್ಟಿದ ಸುಶೀಲ ಕೊಪ್ಪರ್ ಅವರು ಟಿ. ಸುನಂದಮ್ಮನವರ ನಂತರದ ನಾಟಕಗಾರ್ತಿಯಾಗಿದ್ದಾರೆ. ಹುಬ್ಬಳ್ಳಿಯಲ್ಲಿ ವಾಸವಾಗಿದ್ದ ಮಧ್ವರಾಯ ಹಾಗೂ ಕಮಲಬಾಯಿಯವರ ಮಗಳು. ಕೊಪ್ಪರ್ ಈಕೆಯ ಪತಿ. ಎಸ್.ಎಸ್.ಎಲ್.ಸಿ.ಯವರೆಗೆ ವಿದ್ಯಾಭ್ಯಾಸ.

ಇವರು ಅನೇಕ ಮರಾಠಿ ನಾಟಕಗಳನ್ನು ಕನ್ನಡಕ್ಕೆ ತಂದರು. ಅಶೋಕ ಪಾಟೋಳೆಯವರ ಮರಾಠಿ ನಾಟಕ 'ಆಯಿ ರಿಟಾಯಿರ ಹೋತೆಯ' ಎಂಬುದರ ಕನ್ನಡ ಅನುವಾದ 'ಅಮ್ಮ ರಿಟೈರ್ ಆಗ್ತಾಳೆ'. ಈ ಕೃತಿಗೆ ೧೯೮೯ರಲ್ಲಿ 'ವೃತ್ತಿ ನಾಟಕ ನಿರ್ಮಾಪಕರ ಸಂಘ'ದ ಪ್ರಶಸ್ತಿ ದೊರೆತಿದೆ. ಈ ನಾಟಕಕ್ಕೆ ಒಂದು ಹೆಗ್ಗಳಿಕೆ ಇದೆ. ಅದೇಂದರೆ, ಬೆಂಗಳೂರಿನ 'ನ್ಯೂ ಆಸ್ಟಿನ್ ಥಿಯೇಟರ್' ತಂಡದವರಿಂದ ಉದಯಕುಮಾರ್ ಕುಲಕರ್ಣಿ ಅವರ ನಿರ್ದೇಶನದಲ್ಲಿ ಮೊದಲ ಬಾರಿಗೆ ಪ್ರದರ್ಶನಗೊಂಡ ಕನ್ನಡ ರೂಪಾಂತರ ನಾಟಕವಿದು.

ಇವರ ಮತ್ತೊಂದು ಅನುವಾದಿತ ನಾಟಕ 'ನಟ ಸಾಮ್ರಾಟ'. ಇದು ಜ್ಞಾನಪೀಠ ಪ್ರಶಸ್ತಿ ಪಡೆದ ಶ್ರೀ ಶಿರವಾಡಕರ್ ಅವರು ರಚಿಸಿರುವ ನಾಟಕ. ಹಾಗೆಯೇ ಶ್ರೀ ವಸಂತ ಕಾನಟ್ಕರ್ ಅವರು ಬರೆದ 'ಪ್ರೇಮ ತುಝಾ ರಂಗ' ನಾಟಕವನ್ನು 'ಪ್ರೇಮರಂಗ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ತಂದರು. ಇವರ ಮತ್ತೊಂದು ನಾಟಕ 'ಗಾಠ ಆಹೇಮಾ ಝಾಸಿ' – ಎಂಬುದನ್ನು 'ಚದುರಂಗ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ತಂದರು.

ಇವರ ಎಲ್ಲ ನಾಟಕಗಳು ರಂಗಭೂಮಿಯ ಮೇಲೆ ಪ್ರದರ್ಶನಗೊಂಡಿವೆ. ಆದರೆ ಪುಸ್ತಕ ರೂಪದಲ್ಲಿ ಪ್ರಕಟವಾಗಿಲ್ಲ. ಪರಭಾಷೆಯಿಂದ ಕನ್ನಡಕ್ಕೆ ತಂದ ಅನುವಾದಕಿಯರ ಸಾಲಿನಲ್ಲಿ ಪ್ರಮುಖ ಸ್ಥಾನ ಪಡೆದ ಸುಶೀಲ ಕೊಪ್ಪರ್ ಅವರು ೨೫-೨-೨೦೦೬ರಲ್ಲಿ ನಿಧನರಾದರು.

ಇವರಂತೆಯೇ ನಾಟಕಗಳನ್ನು ಬರೆದವರ ಸಾಲಿನಲ್ಲಿ ನುಗ್ಗೇಹಳ್ಳಿ ಪಂಕಜ ಅವರ ಹೆಸರು ಮುಖ್ಯವಾದುದು. ಇವರು ೨-೬-೧೯೨೯ರಲ್ಲಿ ಎಸ್. ಪಿ. ರಾಘವಾಚಾರ್ ಮತ್ತು ಶಾಂತಮ್ಮ ದಂಪತಿಗಳ ಮಗಳಾಗಿ ಜನಿಸಿದರು. ಹೈಸ್ಕೂಲ್‌ವರೆಗೆ ವಿದ್ಯಾಭ್ಯಾಸ. ಇವರ ಪತಿಯ ಹೆಸರು ಎನ್. ತಿರುಮಲೆ (ಇವರ ವಿಶೇಷತೆ ಎಂದರೆ ಇಂಗ್ಲಿಷ್ ನಾಟಕಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿರುವುದು. ಅವುಗಳಲ್ಲಿ ಆರ್ಥರ್ ಎಂಗ್ ಪಿನೆರೊನ ಜನಪ್ರಿಯ ನಾಟಕದ ಕನ್ನಡ ರೂಪಾಂತರ ಸೆಕೆಂಡ್ ಮಿಸೆಸ್ ಟ್ಯಾಂಕ್ವೆರಿ', 'ಅರಳಿಕಟ್ಟೆ ರಾಮಾಚಾರಿಯ ಎರಡನೆಯ ಹೆಂಡತಿ' ಪ್ರಮುಖವಾದುವು. ಇವರ ಮತ್ತೊಂದು ಅನುವಾದಿತ ಕೃತಿ ಆಸ್ಕರ್ ವೈಲ್ಡ್ ಬರೆದ 'ಲೇಡಿ ವಿಂಡರ್‌ಮಿಯರ್ ಫ್ಯಾನ್', ಇದರ ಕನ್ನಡ ರೂಪಾಂತರ 'ಆ ಒಂದು ವಿಷ ಘಳಿಗೆ'. ಇನ್ನೊಂದು ನಾಟಕ ಆಸ್ಕರ್ ವೈಲ್ಡನ 'ಸಲೋಮೆ'. ಇದರ ಕನ್ನಡ ರೂಪಾಂತರಕ್ಕೆ 'ಸಲೋಮೆ' ಎಂಬ ಹೆಸರನ್ನೇ ನುಗ್ಗೇಹಳ್ಳಿ ಪಂಕಜ ಇರಿಸಿಕೊಂಡಿದ್ದಾರೆ.

ಹೈಸ್ಕೂಲ್‌ವರೆಗೆ ಮಾತ್ರ ವಿದ್ಯಾಭ್ಯಾಸ ಮಾಡಿದ ಪಂಕಜ ಅವರು ಇಂಗ್ಲಿಷಿನ ಹಲವು ನಾಟಕಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವರನ್ನು ನೆನೆಯಲೇಬೇಕಾದ ಹೊತ್ತು ಇದು.

ಅನುಸೂಯ ರಾಮರೆಡ್ಡಿ ಅವರು ೨೫-೧೨-೧೯೨೯ರಲ್ಲಿ ಜನಿಸಿದವರು. ಇವರ ಹೆತ್ತವರು ತುರುವನೂರಿನ ಎಂ. ರಾಮರೆಡ್ಡಿ ಮತ್ತು ಮಂಗಳಮ್ಮ. ವಿದ್ಯಾಭ್ಯಾಸ ಎಂ.ಎ., ಬಿ.ಎಡ್ ಮತ್ತು ಹಿಂದಿ ರಾಷ್ಟ್ರಭಾಷಾ ಪ್ರವೀಣೆ. ಪತಿಯ ಹೆಸರು ಕೆ. ರಾಮರೆಡ್ಡಿ. ಈಕೆ ಅಧ್ಯಾಪಕಿಯಾಗಿ ಸೇವೆ ಸಲ್ಲಿಸಿದವರು. ಇವರು ಬರೆದ ನಾಟಕಗಳು 'ಮನೆಗೆ ಮೂರು ಮಾಣಿಕ್ಯ' ಮತ್ತು 'ಮುತ್ತಿನ ಹಾಗೆ ಎರಡು'. ೨೮-೯-೨೦೦೦ರಲ್ಲಿ ತೀರಿಕೊಂಡರು.

''ಬದುಕು ಎಷ್ಟು ಸಂಕೀರ್ಣವೋ ಅಷ್ಟೇ ವರ್ಣಮಯ. ಎಷ್ಟು ವೈವಿಧ್ಯವೋ ಅಷ್ಟೇ ವೈಶಿಷ್ಟ್ಯಪೂರ್ಣ. ಜೀವನವನ್ನು ನಂದನವನ್ನಾಗಿಸಿಕೊಂಡವರು ಕೆಲವರಾದರೆ ಸ್ಮಶಾನವನ್ನಾಗಿಸಿಕೊಂಡವರು ಹಲವರು. ಆದರೆ ಅವೆರಡಕ್ಕೂ ಹೊರತಾದ ಮರುಭೂಮಿಯಾಗಿದ್ದರೆ? ಅದರಲ್ಲೂ ಆ ಮರಳಿನ ರಾಶಿಯಲ್ಲೂ ಎಣ್ಣೆ ತೆಗೆವ ಕಲ್ಪನಾ ವಿಲಾಸಿಗಳು, ಭಾವಜೀವಿಗಳು ಕೈಬೆರಳಷ್ಟು ಮಂದಿ! ಅಂತಹ ಅಪರೂಪದ ವ್ಯಕ್ತಿಗಳ ವಿರಳ ಪಂಕ್ತಿಯಲ್ಲಿ ಬಿ. ಎಸ್. ಚಂದ್ರಕಲಾ ಅವರದು ಎದ್ದು ಕಾಣುವ ವ್ಯಕ್ತಿತ್ವ'' – ಹೀಗೆಂದವರು ಸಾ. ಶಿ. ಮರುಳಯ್ಯನವರು.

ಚಿಕ್ಕ ವಯಸ್ಸಿನಲ್ಲೇ ವಿಧವೆಯಾದರೂ ಧೃತಿಗೆಡದೆ ಸಂಗೀತ, ಸಾಹಿತ್ಯ, ಕಲೆಗಳ ಸಂಗಮವಾಗಿ ಅರಳಿದವರು ಚಂದ್ರಕಲಾ. ಈಕೆ ೨೧-೩-೧೯೩೧ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಜಿ. ಆರ್. ಸಿದ್ದಪ್ಪ ಮತ್ತು ಭದ್ರಮ್ಮನವರ ಮಗಳು. ಮುಂದೆ ಜಿ. ಜಯದೇವಯ್ಯನವರೊಡನೆ ವಿವಾಹ. ಇಂಟರ್‌ಮೀಡಿಯಟ್‌ವರೆಗೆ ವಿದ್ಯಾಭ್ಯಾಸ ಮಾಡಿ ಸಂಗೀತದಲ್ಲಿ ವಿದ್ವತ್ ಪಡೆದರು. ದಂಪತಿಗಳಿಬ್ಬರೂ ಪಿಟೀಲುವಾದಕರು. ಜೊತೆಗೆ ಹಾಡುಗಾರಿಕೆ. ಮೃದಂಗ ನುಡಿಸುವುದರಲ್ಲೂ ಪರಿಣತರು. ಬೆಂಗಳೂರಿನ ಕಾರ್ಪೊರೇಷನ್ ಶಾಲೆಯಲ್ಲಿ ಸಂಗೀತ ಉಪಾಧ್ಯಾಯಿನಿಯಾಗಿ ಸೇವೆ ಸಲ್ಲಿಸಿದವರು. ಇವರು ಬರೆದ ನಾಟಕ 'ಕಾಂಚನದ ಕಮರು'. ಚಂದ್ರಕಲಾ ೪-೩-೨೦೦೫ ರಲ್ಲಿ ನಿಧನರಾದರು.

ನಾಡಿನಾದ್ಯಂತ ಚಿರಪರಿಚಿತರಾಗಿರುವ ಡಾ॥ ಅನುಪಮಾ ನಿರಂಜನರ ನಾಟಕ 'ಕಲ್ಲೋಲ' ಇದು ೧೯೭೦ರಲ್ಲಿ ಪ್ರಕಟವಾಯಿತು. ಬೆಂಗಳೂರಿನ ಪಂಪ ಮಹಾಕವಿ ರಸ್ತೆಯಲ್ಲಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಈ ನಾಟಕ ಪ್ರದರ್ಶನಗೊಂಡಿದೆ. ಅನುಪಮಾ ನಿರಂಜನ ಅವರು ಸಾಹಿತ್ಯ ಕ್ಷೇತ್ರ ಹಾಗೂ ವೈದ್ಯಕೀಯ ಕ್ಷೇತ್ರಗಳಲ್ಲಿ ತಮ್ಮದೇ ಆದ ಹೆಜ್ಜೆಗುರುತುಗಳನ್ನು ಮೂಡಿಸಿದವರು.

ಬೆಂಗಳೂರಿನಲ್ಲಿರುವ ನಾಗರತ್ನಮ್ಮ ಮೇಡ ಕಸ್ತೂರಿರಂಗ ಶೆಟ್ಟಿ ರಾಷ್ಟ್ರೀಯ ವಿದ್ಯಾಲಯ ಮಹಿಳೆಯರ ಕಾಲೇಜು – ಈ ಹೆಸರು ಕೇಳಿದರೆ, ಅದು ಎಲ್ಲಿದೆ ಎಂದು ಕೇಳುವವರೇ ಜಾಸ್ತಿ! ಆದರೆ 'ಮಂಗಳ ಕಾಲೇಜು' ಎಂದ ಕೂಡಲೇ ಎಲ್ಲರಿಗೂ ಗೊತ್ತಾಗುವಷ್ಟರ ಮಟ್ಟಿಗೆ ಚಿ. ನ. ಮಂಗಳಾ ಎನ್. ಎಂ. ಕೆ. ಆರ್. ವಿ. ಕಾಲೇಜನ್ನು ಬೆಳೆಸಿದರು; ಉತ್ತುಂಗಕ್ಕೇರಿಸಿದರು.

ಚಿ.ನ. ಮಂಗಳಾ ಅವರು ೧೦-೪-೧೯೩೮ರಲ್ಲಿ ಸಿ. ನರಸಿಂಹಮೂರ್ತಿ ಹಾಗೂ ರಾಜೇಶ್ವರಿ ದಂಪತಿಗಳ ಮಗಳು. ವಿದ್ಯಾಭ್ಯಾಸ ಎಂ.ಎ.ವರೆಗೆ. ನಂತರ ಶಿಕ್ಷಕಿಯಾಗಿ, ಪ್ರಾಧ್ಯಾಪಕಿಯಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದವರು. ಅನೇಕ ಮಹಿಳಾಪರ, ಯೋಜನೆಗಳನ್ನು ಅನುಷ್ಠಾನಕ್ಕೆ ತಂದವರು, ಮಹಿಳಾ ಅಧ್ಯಯನ ಸಂಸ್ಥೆ 'ಶಾಶ್ವತಿ'ಯನ್ನು ರೂಪಿಸಿದವರು, ಅನೇಕ ಕನ್ನಡ ಪರ ಸಂಘ-ಸಂಸ್ಥೆಗಳನ್ನು ಕಟ್ಟಿದವರು. ಶಿಕ್ಷಣ, ಸಾಹಿತ್ಯ, ಸಾಂಸ್ಕೃತಿಕ, ಮಹಿಳಾಪರ ಹೋರಾಟಗಳು ಒಂದೇ ಎರಡೇ! ಎಲ್ಲದರಲ್ಲೂ ತಮ್ಮ ಯಶೋಗಾಥೆಯನ್ನು ಬರೆದವರು. ಇವರು ಬರೆದ ನಾಟಕ 'ಎಲ್ಲರೂ ನನ್ನವರೆ'. ೩೦-೫-೧೯೯೭ರಲ್ಲಿ ಚಿ. ನ. ಮಂಗಳಾ ನಿಧನರಾದರು.

ಸ್ತ್ರೀಲೋಕದ ನಾಟಕದ ಹೆಜ್ಜೆಗಳ ಮೇಲೆ ಹೆಜ್ಜೆ ಇಟ್ಟು ನಿರಂತರವಾಗಿ ನಡೆಯುತ್ತಿರುವ ವೈದೇಹಿಯವರು ಅತಿ ಹೆಚ್ಚು ನಾಟಕಗಳನ್ನು ಕೊಟ್ಟಿದ್ದಾರೆ. ಇವರಿಗೆ ನೀನಾಸಂನ ಸಂಪರ್ಕ ಹೆಚ್ಚು. ಮಕ್ಕಳ ನಾಟಕಗಳ ಲೋಕವನ್ನೇ ತೆರೆದಿಡುವುದು ಇವರ ಪ್ರಮುಖ ಚಟುವಟಿಕೆ. ಈ ಬಾರಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತೆ ವೈದೇಹಿಯವರು. ಕುಂದಾಪುರದಲ್ಲಿ ನೆಲಸಿದ್ದ ಎ. ವಿ. ಎನ್. ಹೆಬ್ಬಾರ್ ಮತ್ತು ಮಹಾಲಕ್ಷ್ಮೀ ದಂಪತಿಗಳಲ್ಲಿ (ಜಾನಕಿ) ೧೨-೨-೧೯೪೫ರಲ್ಲಿ ಜನಿಸಿದರು. ವಿದ್ಯಾಭ್ಯಾಸ ಬಿ.ಕಾಂ.ವರೆಗೆ. ಪತಿ ಕೆ. ಎಲ್. ಶ್ರೀನಿವಾಸಮೂರ್ತಿ. ಜಾನಕಿಯವರ ಕಾವ್ಯನಾಮ 'ವೈದೇಹಿ'.

ವೈದೇಹಿ ಅನೇಕ ಕಾದಂಬರಿ, ಸಣ್ಣ ಕಥೆಗಳು, ಕವನ ಸಂಗ್ರಹಗಳು, ಅನುವಾದಗಳು, ವ್ಯಕ್ತಿಚಿತ್ರಗಳನ್ನು ಬರೆದಿದ್ದಾರೆ. ಇದರೊಂದಿಗೆ, ಮಕ್ಕಳ ನಾಟಕಗಳನ್ನೂ ಬರೆದಿದ್ದಾರೆ. 'ಧಾಂ ಧೂಂ ಸುಂಟರಗಾಳಿ', 'ಮೂಕನ ಮಕ್ಕಳು', 'ಗೊಂಬೆ ಮ್ಯಾಕ್‌ಬೆತ್', 'ಢಾಣಾ ಢಂಗೂರ', 'ನಾಯಿಮರಿ ನಾಟಕ', 'ಸೂರ್ಯ ಬಂದ', 'ಝುಂ ಝೂಂ ಆನೆ ಮತ್ತು ಪುಟ್ಟ', 'ಕೋಟುಗುಮ್ಮ', 'ಹಕ್ಕಿ ಹಾಡು', 'ಅರ್ಧಚಂದ್ರ ಮಿಠಾಯಿ', 'ಸೋಮಾರಿ ಓಲ್ಯಾ', 'ಅಳಿಲು ರಾಮಾಯಣ', 'ಸತ್ರು ಅಂದ್ರೆ ಸಾಯ್ತಾರಾ?' ಇತ್ಯಾದಿ. ಈ ಎಲ್ಲ ನಾಟಕಗಳು ಒಂದಲ್ಲ ಒಂದು ಕಡೆ ಪ್ರದರ್ಶನ ಗೊಂಡಿರುವುದು ವೈದೇಹಿಯವರ ಹೆಚ್ಚುಗಾರಿಕೆ.

ಈ ಎಲ್ಲಾ ನಾಟಕಗಾರ್ತಿಯರೊಂದಿಗೆ ಸೇರ್ಪಡೆಯಾಗುವ ಇನ್ನೂ ಅನೇಕ ನಾಟಕಗಾರ್ತಿಯರಿದ್ದಾರೆ. ಡಾ॥ ವಿಜಯಾ ಅವರದು ಬೀದಿ ನಾಟಕಗಳ ಸ್ವರೂಪವನ್ನು ಹೊಂದಿರುವ 'ಬಂದರೋ ಬಂದರು' ಎಂಬ ನಾಟಕಗಳ ಗುಚ್ಛ. ನಂದಾಕುಮಾರಸ್ವಾಮಿಯವರ 'ಗಾಥೆ' ೨ ನಾಟಕಗಳ ಸಂಗ್ರಹ. ಇದರಲ್ಲಿ ಅಬ್ಬಕ್ಕರಾಣಿ ಹಾಗೂ ಮಾಧವಿಯ ಬಗ್ಗೆ ಬರೆದ ನಾಟಕಗಳಿವೆ. ಎಚ್. ಶಕುಂತಳ ಭಟ್ ಅವರ 'ಚಿಣ್ಣರಾಟ', ಲೀಲಾ ಬಸವರಾಜ್ ಅವರ 'ಅರ್ಥಮಾಡಿಕೊಳ್ಳಿ ನಮ್ಮನ್ನು', ಇಂದಿರಾ ಹಾಲಂಬಿಯವರ 'ಕಾಣದ ಕೈ', ಲೀಲಾವತಿಯವರ 'ಸಾಕ್ಷಾತ್ಕಾರ', ಶೈಲ ಪ್ರಭಾಕರ ಅವರ 'ಕರಿಮುಖ ಅಮೆರಿಕಾಕ್ಕೆ ಹೋದದ್ದು'. ಮೀರಾಮೂರ್ತಿಯವರ ಅನುವಾದಿತ ನಾಟಕ 'ಗೊಂಬೆಮನೆ' ಮುಂತಾದುವನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

---

ನಂದಾಕುಮಾರಸ್ವಾಮಿ
ಕೇರಾಫ್ ಶ್ರೀ ನಾರಾಯಣ ಶೆಟ್ಟಿ
ಮನೆ ನಂ. ಸಿ. ಹೆಚ್. ೧೩, ೫ನೇ ಮುಖ್ಯರಸ್ತೆ
೩ನೇ ಅಡ್ಡರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

# ಪ್ರತಿಷ್ಠೆಯ ಮೇಜವಾನಿಯಿಂದಾಗಿ ಬೆಳಕು ಕಾಣದ ಬದುಕು

**ಭೂ**ಮಿಯ ಅನೇಕ ಜೀವರಾಶಿಗಳಲ್ಲಿ ಮನುಷ್ಯನು ಒಂದು ಜೀವಿ. ಜೈವಿಕವಾಗಿ ಮಾನವನಿಗೂ ಉಳಿದ ಕೋಟ್ಯನುಕೋಟಿ ಜೀವರಾಶಿಗಳಿಗೂ ಅಂಥ ಮೂಲಭೂತವಾದ ಯಾವುದೇ ವ್ಯತ್ಯಾಸವಿಲ್ಲ. ಮಾನವನಿಗೆ ವರದಾನವಾಗಿರುವ ವಿವೇಚನಾ ಶಕ್ತಿ ಮತ್ತು ಮಾತುಗಳಿಂದಾಗಿ ಅವನು ಇತರ ಪ್ರಾಣಿಗಳಿಗಿಂತ ಬಲಾಢ್ಯನಾಗಿದ್ದಾನೆ, ಪ್ರವೀಣನಾಗಿದ್ದಾನೆ. ಹೀಗಾಗಿ ಮಾನವ ಈ ಜಗದೊಳಗೆ ತನ್ನ ಆಧಿಪತ್ಯ ಸ್ಥಾಪಿಸಿಕೊಂಡು ಎಲ್ಲಿಲ್ಲದ ಸಂಭ್ರಮದಲ್ಲಿದ್ದಾನೆ. ಮಾನವನಲ್ಲಿರುವ ವಿವೇಕವು ಸಂಕುಚಿತಕ್ಕೆ ಒಳಗಾಗಿರುವ ಪರಿಣಾಮವಾಗಿ ಜಗತ್ತಿನ ಬದುಕಿನಲ್ಲಿ ಏರುಪೇರು, ಪ್ರತಿಷ್ಠೆ, ನಿರೀಕ್ಷೆ, ಪ್ರತೀಕ್ಷೆಗಳು ಬೆಳೆದುನಿಂತಿವೆ. ಮಾನವ-ಮಾನವರಲ್ಲಿ ಬೆಳೆದುನಿಂತಿರುವ ತಾಕಲಾಟ-ತಿಕ್ಕಾಟ-ತಾರತಮ್ಯಗಳು ಪ್ರಾಣಿಗಳ ಹೂಂಕಾರಕ್ಕಿಂತಲೂ ಅಮಾನುಷವಾಗಿವೆ. ಈ ಹೂಂಕಾರ, ಗರ್ವ, ದರ್ಪ, ಧಿಮಾಕು ಪ್ರತಿಷ್ಠೆಯ ಪ್ರಶ್ನೆಯಾಗಿ ಹರಿದಾಡುತ್ತಿರುವುದು ಇಂದಿನ ಕಾಲದಲ್ಲೂ ಅನೇಕ ಅವಾಂತರಗಳನ್ನು ಸೃಷ್ಟಿಸಿದೆ. ಮಾನವೀಯ ಮೌಲ್ಯಗಳನ್ನು ಗಾಳಿಗೆ ತೂರಿ ನಿಂತಿರುವ ಮಾನವನ ವರ್ತನೆಯಲ್ಲಿ ಪರಿವರ್ತನೆ ತರಲು ಬಸವಣ್ಣನವರು ವಚನ ಚಳುವಳಿಯ ಮೂಲಕ ಹೋರಾಡಿದ್ದುದು ಮನನಯೋಗ್ಯವಾಗಿದೆ. ದರ್ಪದಿಂದ ಕುದಿಯುತ್ತಿರುವ ಮಾನವನಿಗೆ ಅವರು ತಿಳಿ ಹೇಳಿದ ಪರಿ ಇಂತಿದೆ :

*ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಲಿವರಯ್ಯಾ*
*ನೆಲವನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ*
*ಮೊಲನಿಂದ ಕರಕಷ್ಟ ನರನ ಬಾಳುವೆ*
*ಸೆಲೆನಂಬೋ ನಮ್ಮ ಕೂಡಲಸಂಗಮದೇವನ*




ಮಾನವನು 'ಅಹಂ' ಬೆಳೆಸಿಕೊಂಡು ನಡೆದಿರುವುದಕ್ಕೆ ಹಲವು ಕಾರಣಗಳಿವೆ. ತಾನಿದ್ದರೆ ಜಗತ್ತು; ತಾನಿಲ್ಲದಿದ್ದರೆ ಜಗತ್ತಿನ ಆಗುಹೋಗುಗಳು ತಲ್ಲಣಗೊಳ್ಳುತ್ತವೆ, ಸ್ತಬ್ಧಗೊಳ್ಳುತ್ತವೆಂಬ ಧೂರ್ತ ವಿಚಾರವು ಎಲ್ಲ ಕಾಲದಲ್ಲೂ ಎದ್ದುನಿಂತಿದೆ. ಪರಾವಲಂಬನೆಗೆ ಮೂಲವಾಗಿರುವ ಮಾನವ ತಾನು ಸ್ವಾವಲಂಬಿ, ಸೂತ್ರಧಾರನೆಂದುಕೊಂಡು ಹೊರಟಿದ್ದನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳದ ಸಂತರು-ಶರಣರು ಮಾನವೀಯ ಮೌಲ್ಯಗಳನ್ನು ರೂಢಿಸಿಕೊಳ್ಳಲು ಒತ್ತಾಯಿಸುತ್ತಲೇ ನಡೆದಿದ್ದಾರೆ. ಮಾನವನು ಅನೇಕ ಭಯಗಳನ್ನು ನಿವಾರಿಸಿಕೊಂಡಿದ್ದರೂ ತನ್ನವರ ಭಯದಿಂದ ಮುಕ್ತನಾಗಿಲ್ಲ, ಈ ಭಯವೇ ಪ್ರತಿಷ್ಠೆಗೆ ಕಾರಣವೆನ್ನಬಹುದಾಗಿದೆ. ತಾನು ಹೆಚ್ಚು, ತನ್ನದೇ ಶ್ರೇಷ್ಠ ಎಂಬ ಗುರುತರದ ಅಭಾಸವನ್ನು ತಲೆಯೊಳಗೆ ತುಂಬಿಕೊಂಡಿರುವ ಮನುಷ್ಯನ ಭ್ರಾಂತಿಯನ್ನು ಬಿಡಿಸುವ ಅಗತ್ಯವಿದೆ. ಮನುಷ್ಯ ಹಲವು ಬಗೆಯಲ್ಲಿ ಪರಿವರ್ತನೆಗೊಂಡು ಪರಿಸರದ ಮೇಲೆ ನಿಯಂತ್ರಣ ಸಾಧಿಸಲು ಯತ್ನಿಸುತ್ತಿದ್ದಾನೆ. ಸಾಮಾನ್ಯವಾಗಿ ಮನುಷ್ಯ ತನ್ನ ಜೀವನದ ಪ್ರತಿಶತ ಎಂಬತ್ತು ಭಾಗವನ್ನು ಸ್ವಪ್ರತಿಷ್ಠೆಗಾಗಿ ಕಳೆಯುತ್ತಾನೆ. ಇನ್ನುಳಿದ ಇಪ್ಪತ್ತು ಭಾಗವನ್ನು ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂದು ಕಳೆಯುತ್ತಾನೆ. ವಿಕಾಸಗೊಳ್ಳುತ್ತಿರುವ ಈ ಅನಂತ ವಿಶ್ವದಲ್ಲಿ ನಮ್ಮ ಭೂಮಿ ಒಂದು ತೃಣಸಮಾನವೆಂದು ಅರಿತುಕೊಂಡು ಬಹಳಷ್ಟು ದಿನಗಳನ್ನು ಮನುಷ್ಯ ಕಳೆದರೂ ಸಹ ಅವನ ಸ್ವಪ್ರತಿಷ್ಠೆಯ ಪ್ರಯೋಜನೆಯಲ್ಲಿ ಬದಲಾವಣೆ ಬಾರದಿರುವುದು ಸೋಜಿಗದ ಸಂಗತಿ. ಮಾನವನ ಮನೋಗತದಲ್ಲಿ ಸ್ವ-ಹಿತ, ಸ್ವ-ಪ್ರತಿಷ್ಠೆ ತಾರಕಕ್ಕೇರಿದ ಇಂದಿನ ದಿನಮಾನಗಳಲ್ಲಿ ಮಾನವನ ವರ್ತನೆಯಲ್ಲಿ ಪರಿವರ್ತನೆ ತರಲು ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ, ಕಾನೂನು ಕಟ್ಟಳೆಗಳೊಂದಿಗೆ ಧಾರ್ಮಿಕ ಶಿಕ್ಷಣವನ್ನೂ ನೀಡಲಾಗುತ್ತಿದೆ. ಇಷ್ಟೆಲ್ಲ ಕಸರತ್ತು, ಕವಾಯತು ನಡೆಸಿದರೂ ಮಾನವನಲ್ಲಿಯ ಪ್ರತಿಷ್ಠೆಯ ಪರಿಣಾಮದಿಂದಾಗಿ ಜಗದ ಬದುಕು ಬೆಳಗುತ್ತಿಲ್ಲ, ಬೆಳೆಯುತ್ತಿಲ್ಲ.

ಈ ಭೂಮಿಯನ್ನು ಗರ್ವಗಳ ಗರಡಿಮನೆಯನ್ನಾಗಿಸಿರುವ ಇಂದಿನ ಮಾನವನು ಧರ್ಮದ ಹೆಸರಿನಲ್ಲಿ ಆತಂಕಕಾರಿ ಚಟುವಟಿಕೆಗಳಲ್ಲಿ ನಿರತನಾಗಿದ್ದಾನೆ. ಜಗದ ತುಂಬೆಲ್ಲ ಭಯೋತ್ಪಾದನೆಯ ವಾತಾವರಣ ಹರಡಿಕೊಂಡಿದೆ. ಮಾನವ ಬದುಕಿಗೆ ಸುರಕ್ಷಿತವಾಗಿರುವ ಈ ಭೂಮಿ ಮಾನವ ಜೀವಹರಣದ ಕಸಾಯಿಖಾನೆಯಾಗುತ್ತಿರುವುದನ್ನು ತಪ್ಪಿಸುವ ಕಾರ್ಯವು ತುರ್ತಿನದಾಗಿದೆ. ಮಾನವನ ಜೀವಹರಣದ ಸಂಗತಿಗಳು ತಾರಕಕ್ಕೇರಿವೆ. ಈ ದಿಶೆಯಲ್ಲಿ, ಮಾನವ ವಿಚಾರಶೂನ್ಯನಾಗಿ ವರ್ತಿಸುವಲ್ಲಿ ದುರಭಿಮಾನವೇ ಪ್ರತಿಷ್ಠೆಯಾಗಿ ನಿಂತಿದೆ. ವಿಧ್ವಂಸಕ ಕೃತ್ಯಗಳೇ ಆಶ್ರಯದ ದಾರಿಗಳಾಗಿವೆ. 'ಪ್ರತಿಷ್ಠೆ' ಮನುಕುಲವನ್ನು ಕಾಡುತ್ತಿರುವುದರಿಂದ ನಿತ್ಯ ಬೆಳಕಿನ ಭಾಗವು ಕತ್ತಲೆಯ ನೀರಸತೆಯನ್ನು ಅನುಭವಿಸುತ್ತಿದೆ. ಜಗತ್ತಿನಲ್ಲಿ ಮಾನವನಿಗೆ ವಿಪುಲ ಅವಕಾಶಗಳಿವೆ. ನಿಸರ್ಗ ಸಂಪತ್ತು, ಆಹಾರ-ವಿಹಾರ ಸೌಲಭ್ಯ ಸಾಕಷ್ಟಿವೆ. ಯಾವುದಕ್ಕೆ ಕೊರತೆಯಿದ್ದರೂ ನಿಭಾಯಿಸುವ ಬುದ್ಧಿ, ನೈಪುಣ್ಯತೆ ಮಾನವನಿಗಿದೆ. ಈ ಎಲ್ಲ ಕೌಶಲಗಳನ್ನು ಗಳಿಸಿಕೊಂಡಿರುವ ಮಾನವ ಸತತವಾಗಿ ಪೈಪೋಟಿ ನಡೆಸುತ್ತಿದ್ದಾನೆ. ಈ ಪೈಪೋಟಿಯು ತನ್ನನ್ನು ತಾನು ಅರಿಯಲು ವ್ಯಯಗೊಂಡಿದ್ದರೆ ಜಗತ್ತಿನಲ್ಲಿ ತಾಂಡವ ರೂಪದಲ್ಲಿ ಬೆಳೆದುನಿಂತಿರುವ ಭಯೋತ್ಪಾದನೆ, ಆತಂಕವಾದ, ಸ್ವ-ಧರ್ಮದ ಅತಿರೇಕಗಳು ಶಮನಗೊಳ್ಳುತ್ತಿದ್ದವು. ಮಾನವ ತನ್ನ ಇರುವಿನ ಬಗ್ಗೆ ಯಥಾರ್ಥ ಜ್ಞಾನವನ್ನೂ ಗಳಿಸಿಕೊಳ್ಳುವ ಅಗತ್ಯವಿದೆ. ಅದಕ್ಕೆ ಶರಣರು 'ಅರಿವೇ ಗುರು' ಎಂದು ಹೇಳಿದ್ದಾರೆ. ಮಾನವ ತನ್ನ ಅರಿವಿನ ಪರಿಧಿ ಹೆಚ್ಚಿಸಿಕೊಂಡರೆ ಪ್ರತಿಷ್ಠೆ ಕರಗಿ ದಿವ್ಯ ಬೆಳಕು ಗೋಚರವಾಗಿ ಮಾನವಸಹಜ ನಡೆ-ನುಡಿಗಳು ಜೀವಂತಿಕೆ ಪಡೆದುಕೊಳ್ಳುತ್ತವೆ.

*ಕಣ್ಣೊಳಗೆ ಕಣ್ಣಿದ್ದೂ ಕಾಣಲೇಕರೆಯರಯ್ಯಾ ?*
*ಕಿವಿಯೊಳಗೆ ಕಿವಿಯಿದ್ದೂ ಕೇಳಲೇಕರೆಯರಯ್ಯ ?*
*ಘ್ರಾಣದೊಳಗೆ ಘ್ರಾಣವಿದ್ದೂ ವಾಸಿಸಲೇಕರೆಯರಯ್ಯ ?*
*ಜಿಹ್ವೆಯೊಳಗೆ ಜಿಹ್ವೆವಿದ್ದೂ ರುಚಿಸಲೇಕರೆಯರಯ್ಯಾ ?*
*ಸ್ಪರ್ಶನದೊಳಗೆ ಸ್ಪರ್ಶನವಿದ್ದೂ ಮುಟ್ಟಲೇಕರೆಯರಯ್ಯ ?*
*ಪ್ರಾಣದೊಳಗೆ ಪ್ರಾಣವಿದ್ದೂ ನೆನೆಯಲೇಕರೆಯರಯ್ಯಾ ?*
*ಕಾಯದೊಳಗೆ ಕಾಯವಿದ್ದು ಬಿಡದು, ಬೇರಾಗದು !*
*ನೀನಿಕ್ಕಿದ ಆಣಕದ ಭೇದವ ಭೇದಿಸಬಾರದಯ್ಯ !*
*ಕೂಡಲಸಂಗಮದೇವಾ.*

ಮಾನವನ ಬದುಕು ಜ್ಞಾನದ ಬದುಕಾಗಿದೆ. ಜ್ಞಾನವು ಸೃಜನಶೀಲತೆ, ಸದ್ಗುಣ, ದಿಟ್ಟತನ ಮತ್ತು ಉತ್ಸಾಹಕ್ಕೆ ಮೂಲ. ಜ್ಞಾನವು ಮಾನವ ಪಂಚೇಂದ್ರಿಯಗಳ ಮೂಲಕ ವಿಸ್ತಾರಗೊಳ್ಳುತ್ತದೆ. ಒಂದೊಂದು ಇಂದ್ರಿಯಗಳಿಗೆ ಒಂದೊಂದು ವಿಶಿಷ್ಟ ಗುಣವಿದೆ. ಈ ಗುಣಗಳನ್ನು ಸರಿಯಾಗಿ ದುಡಿಸಿಕೊಂಡರೆ ಯೋಚನಾ ಸಾಮರ್ಥ್ಯ ಹೆಚ್ಚಿ ಸರಿ-ತಪ್ಪು, ಸತ್ಯ-ಅಸತ್ಯ, ಒಳ್ಳೆಯದು-ಕೆಟ್ಟದ್ದು ಗೊತ್ತಾಗುತ್ತದೆ. ಹೀಗೆ ಗೊತ್ತುಮಾಡಿಕೊಳ್ಳುವುದೇ ಶರಣರ ದಾರಿಯಾಗಿದೆ.

ಮಾನವ ಬದುಕು ಸಹಕಾರ, ಪರೋಪಕಾರ, ಸ್ವಹಿತದೊಂದಿಗೆ ಪರಹಿತ ಸಾಧಿಸುವುದೇ ಆಗಿದೆ. ಗರ್ವ, ಪ್ರತಿಷ್ಠೆಗಳು ಬದುಕಿನ ಪ್ರತಿಕೂಲ ಸನ್ನಿವೇಶಗಳೇ ಆಗಿವೆ. ಮಾನವ ಬದುಕಿನ ಬೆಳಕು ಕೂಡಿ ಬಾಳುವುದರಲ್ಲಿದೆ; ಹೊರತಾಗಿ ನಾ ಹೆಚ್ಚು, ನೀ ತುಚ್ಛ ಎನ್ನುವ ಕಾದಾಟದಲ್ಲಿಲ್ಲ.

ಶರಣ ಜೀವನ ಶ್ರೇಷ್ಠವೆನ್ನಿಸಿಕೊಳ್ಳಲು ಮುಖ್ಯ ಕಾರಣ ('ಅಹಂ' ತ್ಯಜಿಸುವುದರ ಜೊತೆಗೆ ಸಕಲರೂ ಸಮಾನರಾಗಿ, ಸಮಚಿತ್ತರಾಗಿ ಬದುಕಿದ್ದೇ) ಶರಣರು ಯಾವುದೇ ಆಸೆ, ಆಮಿಷಗಳಿಗೆ ಒಳಗಾಗದೇ ತಮ್ಮತಮ್ಮ ಕಾಯಕ ಕೈಗೊಂಡು ದಾಸೋಹ, ಅನುಭಾವದೊಳಗೆ ನೆಚ್ಚಿಕೊಂಡು, ಯಾವುದೇ ಪ್ರತಿಷ್ಠೆಗೆ ಒಳಗಾಗದೆ ಬದುಕಿ ತೋರಿಸಿದ್ದು, ನಡೆ-ನುಡಿಯಲ್ಲಿ ಏಕತೆಯನ್ನು ಸಾಧಿಸಿದ್ದು ಸಕಾರಾತ್ಮಕ ಬದುಕಿನ ಸೂತ್ರವಾಗಿದೆ. ಇದೇ ಪ್ರತಿಷ್ಠೆಯನ್ನು ಗೆಲ್ಲುವ ಮಾರ್ಗವೂ ಆಗಿದೆ.

**ಸ. ರಾ. ಸುಳಕೂಡೆ**
ನಂ. ೯೯೯, ರಾಮತೀರ್ಥನಗರ, ಬೆಳಗಾವಿ

# 'ಕೊಲಾಜ್'ನಲ್ಲಿ ಗಣೇಶನ ವೈವಿಧ್ಯತೆ

ಬೆಂಗಳೂರು ಜಿಲ್ಲೆ ಕಡಬಗೆರೆಯ ಚಿತ್ರಕಲಾವಿದ ಕೆ. ಜಿ. ಲಿಂಗದೇವರು 'ಲೈನ್ ಆರ್ಟ್' ಮತ್ತು 'ಕೊಲಾಜ್' ಕಲೆಯಲ್ಲಿ ಪಳಗಿದವರು.

ಇವರು ೧೯೮೬ರಲ್ಲಿ 'ಕಲಾಮಂದಿರ' ಸ್ಕೂಲ್ ಆಫ್ ಆರ್ಟ್‌ನಿಂದ ಜಿ. ಡಿ. ಕಲಾ ಪದವಿ ಪಡೆದುಕೊಂಡವರು. ರಾಜ್ಯ ಲಲಿತಕಲಾ ಅಕಾಡೆಮಿಯಿಂದ ೧೯೮೩ ಮತ್ತು ೮೬ರಲ್ಲಿ ಮೆರಿಟ್ ಸ್ಕಾಲರ್‌ಶಿಪ್ ಪಡೆದವರು. ೪೬ರ ವಯಸ್ಸಿನ ಲಿಂಗದೇವರು ದೇಶ-ವಿದೇಶಗಳಲ್ಲಿ, ಹಲವಾರು ಕಲಾಪ್ರದರ್ಶನಗಳಲ್ಲಿ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ. ಹಲವಾರು ಪ್ರಶಸ್ತಿ-ಗೌರವಗಳಿಗೂ ಭಾಜನರಾಗಿದ್ದಾರೆ.

ಚಿತ್ರ-ಬರಹ : **ಜಿ. ಎಂ. ಬೊಮ್ನಳ್ಳಿ,** ಬೊಮ್ನಳ್ಳಿ, ತಾಲ್ಲೂಕು ಶಿರಸಿ (ಉ.ಕ.) - ೫೮೧ ೪೦೨











Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / SEPTEMBER 2010 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)